# ನೃಪತುಂಗ

(ಕಾದಂಬರಿ)

ಲೇಖಕ:

ತ. ರಾ. ಸು.



ಪ್ರಕಾಶಕರು:

ಶ್ರೀ ಗೌರೀಶಂಕರ ಬುಕ್ ಡಿಪೋ,

ದೇವರಾಜ ಮಾರ್ಕೆಟ್, ಮೈಸೂರು.

ಪ್ರಥಮ ಮುದ್ರಣ ೧೯೫೪



ಬೆಲೆ :

ರೂ. ೨—೦—೦



ಮುದ್ರಕರು :

ಪಿ.ಆರ್. ಸೀತಾರಾಂ, ಬಿ.ಎಸ್‌ಸಿ., ಎಲ್.ಎ.ಎಂ.ಎಸ್.

ಶ್ರೀ ಸೀತಾರಾಘವ ಪ್ರೆಸ್, ರಾಮಸ್ವಾಮಿ ಸರ್ಕಲ್, ಮೈಸೂರು.

ಮುನ್ನುಡಿ —ಎಸ್. ಶ್ರೀಕಂಠಶಾಸ್ತ್ರೀ

ಮಾನವನ ದುಃಖ ಪರಂಪರೆಯ ನಿವಾರಣೆಗಾಗಿ ವ್ಯವಹಾರ ಪ್ರಪಂಚದಲ್ಲಿ ಸೂಕ್ತ ಮಾರ್ಗವನ್ನು ಕಂಡುಹಿಡಿಯುವುದು ವಿಶ್ವದ ತತ್ತ್ವಾನ್ವೇಷಿಗಳ ಕರ್ತವ್ಯವಾಗಿದೆಯೆಂಬುದು ಚರಿತ್ರೆಯಿಂದ ವಿದಿತವಾಗಿದೆ. ಆಕಸ್ಮಿಕ ಘಟನೆ, ಕಾಲಯಂತ್ರ ಅಥವಾ ಯುದ್ಧದ ಮೂಲಕವಲ್ಲದೆ ಜಗತ್ತಿನಲ್ಲಿ ಶಾಂತಿಯು ನೆಲಸಬೇಕಾದರೆ ಒಂದೇ ಮಹಾವ್ಯಕ್ತಿಯಲ್ಲಿ ರಾಜಕೀಯ ಶಕ್ತಿಯು ಆತ್ಮಜ್ಞಾನವೂ ಸೇರಿರಬೇಕೆಂದೂ; ಆತ್ಮಜ್ಞಾನಿಗಳೇ ರಾಜರಾಗಬೇಕು ಅಥವಾ ಆಡಳಿತ ನಡೆಸುವವರೂ ಸಂಪೂರ್ಣವಾಗಿ ತತ್ತ್ವಜ್ಞಾನ ಹೊಂದಿರಬೇಕು ಎಂದು ಪ್ಲೇಟೋ* ಅಭಿಪ್ರಾಯಪಟ್ಟನು. ಇದು ಸಾಧ್ಯವೇ, ಜಗತ್ತಿನಲ್ಲಿ ಅಂತಹ ವ್ಯಕ್ತಿಗಳು ಎಷ್ಟಿರುವರು? ತತ್ತ್ವಾನ್ವೇಷಣೆಯ ಉದ್ದೇಶ ನಿಸ್ಸಂಗತ್ವದಿಂದ ನಿರ್ಮೋಹತ್ವವನ್ನು ಸಾಧಿಸಿ ಅದರಿಂದ ನಿಶ್ಚಲತತ್ತ್ವ ಮತ್ತು ಜೀವನ್ಮುಕ್ತಿ ಪಡೆಯುವುದಲ್ಲವೇ? ಸಮಾಜದ ಉದ್ಧಾರಕಾರ್ಯ ವ್ಯಕ್ತಿಯ ನಿಸ್ಸಂಗತ್ವಕ್ಕೆ ಕೇವಲ ವಿರುದ್ಧವಲ್ಲವೇ ಎಂದು ಪ್ರಶ್ನೆಗಳು ಏಳುವವು. ಪ್ರಪಂಚ ಬಂಧನದಿಂದ ತಪ್ಪಿಸಿಕೊಳ್ಳಲು ಯತ್ನಿಸುತ್ತಿರುವವನು ತಪ್ಪುದಾರಿ ಹಿಡಿದ ಪ್ರಪಂಚವನ್ನು ತಿದ್ದುವ ಹವ್ಯಾಸಕ್ಕೆ ಏಕೆ ಹೋಗಬೇಕು? ಒಂದು ವ್ಯಕ್ತಿಯ ಆತ್ಮಬಲಿದಾನದಿಂದ ಸಮಾಜವೆಲ್ಲ ಉದ್ಧಾರವಾಗುವದೆಂಬ ಕೆಲವು ಮತಗಳ ತತ್ತ್ವವನ್ನು ಯಾವ ಆತ್ಮಜ್ಞಾನಿಯು ಅಂಗೀಕರಿಸಲಾರನು. ಅಂತಹ

---

* There is no hope of a cessation of evils in the states and, in my opinion, none for mankind-except through a personal union between political power and philosophy...... The Union may be achieved in two ways, Either the philosophers must become kings in our states or else the people who are now called kings and potentates must take-genuinely and throughly-to philosophy.

(Plato: Republic 473. D.)

ಆತ್ಮಬಲಿ ಸಮಾಜದ ಮೇಲೆ ಯಾವ ವಿಧವಾದ ಶಾಶ್ವತ ಪರಿಣಾಮ ವನ್ನೂ ಮಾಡಲಾರದೆಂದು ಪ್ರಪಂಚದ ಚರಿತ್ರೆಯಿಂದ ವಿದಿತವಾಗುವದು. ಅಂದಮಾತ್ರಕ್ಕೆ ಲೋಕ ಸಂಗ್ರಹಕ್ಕಾಗಿ ಶ್ರಮಿಸುವವನು ಪ್ರೇಮ ಮತ್ತು ಕರುಣೆಗಳನ್ನು ತನ್ನ ಹೃದಯದಿಂದ ಬಹಿಷ್ಕರಿಸಲಾಗುವದೆ? ದಯೆ, ದಾಕ್ಷಿಣ್ಯ, ಪ್ರೇಮ ಮುಂತಾದವು ಅಜ್ಞಾನಜನ್ಯವಾದುದರಿಂದ ಬಂಧ ಹೇತುಗಳು. ನಿರ್ಮಮತಾ, ನಿರಹಂಕಾರ, ನಿರಾಶೆಗಳಿಂದ ನಿರ್ದ್ವಂದ್ವ ತ್ವವನ್ನು ಸಾಧಿಸಿದವನಿಗೆ ಕರ್ಮದಲ್ಲಿಯೂ ನಂಬಿಕೆ ಇಲ್ಲದೆಹೋಗ ಬಹುದು. ನಿಷ್ಕಾಮಕರ್ಮ ಎಂಬ ಶಬ್ದಗಳು ಪರಸ್ಪರ ವಿರುದ್ಧಗಳ ಲ್ಲವೇ; ಅಥವಾ ಪ್ಲಾಟಿನಸ್ ಹೇಳಿದಂತೆ "ಜ್ಞಾನದ ಒಂದು ದುರ್ಬಲ ರೂಪವೇ ಕರ್ಮ" ಎಂದು ಸಮಾಧಾನ ಪಡೆಯಲಾಗುವದೆ?

ಜೀವನದಲ್ಲಿ ಸಾಮರಸ್ಯವಿರಬೇಕೆಂದು ಮಾಡುವ ಪ್ರಯತ್ನ ಗಳೆಲ್ಲ ಕರ್ಮರೂಪವಾದುದರಿಂದ ಅನಾಸಕ್ತಿಯೋಗ ಎಷ್ಟು ಮಟ್ಟಿಗೆ ಲೋಕಸಂಗ್ರಹ ಕಾರ್ಯದಲ್ಲಿ ಫಲದಾಯಕವೆಂಬುದು ಜಟಿಲವಾದ ಸಮಸ್ಯೆ. ಉದಾಸೀನನಾದ ಆತ್ಮಜ್ಞಾನಿ ಹೃದಯದ ಕರೆಯನ್ನು ಮನ್ನಿಸಿ. ಧರ್ಮವಿರುದ್ಧವಲ್ಲದ, ಸ್ವಾರ್ಥದ ಲೇಶವೂ ಇಲ್ಲದ ಸಮಾಜ ಸೇವೆಯನ್ನು ಮಾಡುವ ರಾಜನಾಗಬಹುದೆಎಂದರೆ ಕರ್ಮವನ್ನು ಮಾಡು ತ್ತಿದ್ದ ಜನಕಾದಿಗಳಂತಹ ರಾಜರ್ಷಿಗಳಿರಲಿಲ್ಲವೇ ಎಂಬ ಪ್ರಶ್ನೆಯೂ ಏಳ[illegible] ತತ್ತ್ವಜ್ಞಾನಿಯು ರಾಜನಾಗುವದು ದುಸ್ಸಾಧ್ಯವಾದರೆ ಅಧಿ ಕಾರಿಗಳನ್ನು ತತ್ತ್ವಜ್ಞಾನಿಗಳಾಗಿ ಏಕೆ ಮಾಡಬಾರದು? ಪ್ಲೇಟೋ, ಡಿಯೋನಿಸಿಯಸ್ ಎಂಬ ರಾಜಕುಮಾರನನ್ನು ಆತ್ಮಜ್ಞಾನಿಯಾಗಿ ಮಾಡಲು ಯತ್ನಿಸಿ ವಿಫಲನಾದುದು ಚರಿತ್ರೆಯಲ್ಲಿ ಪ್ರಸಿದ್ಧವಾಗಿದೆ. ಕೆಲವು ಆಕಸ್ಮಿಕ ಘಟನೆಗಳಿಂದ ಆಧ್ಯಾತ್ಮದತ್ತ ತಿರುಗಿ ತಮ್ಮ ಆಚರಣೆ, ಉಪದೇಶಗಳಿಂದ ಸಮಾಜವನ್ನು ಮಾರ್ಪಡಿಸಲು ಕೆಲವರು ಚಕ್ರವರ್ತಿ ಗಳು ಯತ್ನಿಸಿರುವರು—ಮಾರ್ಕಸ್ ಅರಿಲಿಯಸ್, ಅಶೋಕ, ಅಕ್ಬರ್ ಮುಂತಾದವರು. ಯುದ್ಧದಿಂದುಂಟಾದ ರಕ್ತಪಾತಕ್ಕೆ ಹೇಸಿ ಸುಖ ಶಾಂತಿ ಸ್ಥಾಪನೆಗಾಗಿ ಅಶೋಕನು ಮಾಡಿದ ಪ್ರಯತ್ನಗಳೆಷ್ಟುಮಟ್ಟಿಗೆ ಫಲಕಾರಿ ಯಾದವೆಂಬುದನ್ನು ಹೇಳುವದು ಕಷ್ಟ. ಯೂರೋಪಿನ ಚರಿತ್ರೆಯಲ್ಲಿ

"ಜ್ಞಾನಿಗಳ ನಿರಂಕುಶ ಪ್ರಭುತ್ವ" (Enlightened despotism) ಎಂಬ ಯುಗ ಅನೇಕ ಯುದ್ಧಗಳಲ್ಲಿಯೇ ಕೊನೆಗೊಂಡಿತು. ಚೀಣ ದೇಶದಲ್ಲಿ ಕನ್‌ಫ್ಯೂಷಿಯಸ್ ನೀತಿಯನ್ನು ಚಕ್ರವರ್ತಿಗಳು ಬಹಳ ಕಾಲ ಅನುಸರಿಸಿಕೊಂಡುಬಂದರೂ, ಜನಜೀವನದಲ್ಲಿ ಪ್ರಗತಿ ಇಲ್ಲದೆ ಹಳೆಯ ಸಂಪ್ರದಾಯಗಳು ಶೃಂಖಲೆಗಳಾಗಿ, ೧೯ನೆಯ ಶತಮಾನದ ನೂತನ ವಾತಾವರಣದಲ್ಲಿ ಪುರಾತನ ಸಂಸ್ಕೃತಿಯು ಕ್ಷೀಣಿಸಿ ಆಧುನಿಕ ಚೀಣದಲ್ಲಿ ಎಲ್ಲವೂ ಅದೃಶ್ಯವಾಗುತ್ತಿವೆ. ಜನಗಳ ಆಚಾರ ವ್ಯವಹಾರಗಳು ಬದಲಾವಣೆಯಾಗುತ್ತಿದ್ದರೂ ಒಂದೇ ಹಾದಿಯಲ್ಲಿ ಎಲ್ಲರೂ ನಡೆಯಬೇಕೆಂದು ವಿಧಿಸುವದು ಯಾವ ರಾಜನಿಗೂ ಸಾಧ್ಯವಲ್ಲ. ಜೀವನ ಪ್ರವಾಹವು ಕವಲೊಡೆದು ಅನೇಕ ನಾಲೆಗಳಲ್ಲಿ ಪ್ರವಹಿಸುತ್ತ ಹೋಗುತ್ತದೆ. ವ್ಯಕ್ತಿ ಸ್ವಾತಂತ್ರ್ಯಕ್ಕೆ ಸಮಾಜದಲ್ಲಿ ಯಾವ ಹದ್ದು ಮೇರೆ ಇರಬೇಕೆಂದು ನಿರ್ಧರಿಸುವದು ಕ್ಲಿಷ್ಟ ಸಮಸ್ಯೆ. ಮೆಕೆವಿಲ್ಲಿ* ಹೇಳಿದಂತೆ ಸಾಮಾನ್ಯ ಜನರು ಚಪಲಚಿತ್ತರು. ಅವರನ್ನು ತಾತ್ಕಾಲಿಕವಾಗಿ ಒಂದು ಹಾದಿಗೆ ತಂದರೂ ಅದೇ ಹಾದಿಯಲ್ಲಿ ನಡೆಯುವಂತೆ ಮಾಡುವದಕ್ಕಾಗಿ—ಅವರಿಗೆ ನಂಬಿಕೆ ಹೋಗಿದ್ದರೂ—ಬಲಪ್ರಯೋಗ ಅನಿವಾರ್ಯ. ಪ್ಲೇಟೋ ಆತ್ಮಜ್ಞಾನಿಯಾದ ರಾಜನನ್ನು ವರ್ಣಿಸಿದಾಗ ಬಲಪ್ರಯೋಗದ ಸಮಸ್ಯೆಯನ್ನು ಮರೆಮಾಚಿರುವನು. ಆತ್ಮಜ್ಞಾನಿಯಾದ ರಾಜನ ಪ್ರಯತ್ನಗಳೆಲ್ಲ ನಿಷ್ಫಲವೇ ಆಗುವವು. ಆತ್ಮಜ್ಞಾನಿಯು ರಾಜಕೀಯದಲ್ಲಿ ಕೈಹಾಕಿದರೆ ತನ್ನ ಉದಾತ್ತ ಧ್ಯೇಯಗಳನ್ನು ಬಿಡಬೇಕು. ರಾಜನು ನಿಜವಾಗಿ ಆತ್ಮಜ್ಞಾನಿಯಾದರೆ ವ್ಯವಹಾರದಲ್ಲಿ ಔದಾಸೀನ್ಯವು ಅಸಾಧ್ಯ. ಕೊನೆಗೆ ದಂಡ-ಬಲ ಪ್ರಯೋಗ ನಡೆಯಲೇ ಬೇಕಾಗುವದು.

---

* The nature of the peoples is inconstant, and it is easy to persuade them of a thing, but difficult to hold them to that persuasion. Accordingly it is expedient to be so equipped that, when their belief gives out, one will have it in one's Power to make them believe by force.
—Machiavelli.

ಮತ್ತೊಂದು ದೃಷ್ಟಿಯಿಂದ ನೋಡಿದರೆ—ಪ್ರಪಂಚವನ್ನು ಸಮಾಜವನ್ನು ಉದ್ಧರಿಸುವವನು ಬಲವನ್ನು ತ್ಯಜಿಸಿ, ಆತ್ಮತ್ಯಾಗದಿಂದ ಜಗತ್ತಿಗೆ ಶಾಂತಿಯನ್ನುಂಟುಮಾಡುವದು ಸಾಧ್ಯವೆಂದೂ, ಏಸುಕ್ರಿಸ್ತನು ಈ ಹಾದಿ ಹಿಡಿದನೆಂದೂ ಕೆಲವರ ನಂಬಿಕೆ! ಕೇವಲ ಮಾನವರು—ಹಿಂದೆ ಇದ್ದಿರಬಹುದಾದ, ಮುಂದೆ ಸಾಧಿಸಬಹುದಾದ ಸುವರ್ಣ ಯುಗವನ್ನು ನಿರ್ಮಾಣ ಮಾಡಲು ಹೊರಟ ಪ್ರತಿಭಾಶಾಲಿಗಳು, ಬಲಪ್ರಯೋಗದಿಂದ ವಿಶ್ವ ಸಾಮ್ರಾಜ್ಯ ಸ್ಥಾಪನೆಗೆ ಯತ್ನಿಸಿದವರು, ಆತ್ಮಜ್ಞಾನಿಗಳಾದ ರಾಜರು ಶಾಂತಿ ಸುಖಸ್ಥಾಪನೆಯಲ್ಲಿ ನಿಷ್ಫಲರಾದುದರಿಂದ, ದೇವಾಂಶ ಸಂಭೂತರಾದ ಅವತಾರಪುರುಷರೆಂದು ಭಾವಿಸಲ್ಪಟ್ಟವರಿಂದ ಶಾಂತಿ ಸ್ಥಾಪನೆಯಾಗಿದೆಯೋ? ದೇವರು ಮನುಷ್ಯ ಶರೀರ ಧರಿಸಿಬಂದು ತನ್ನ ಆತ್ಮಬಲಿದಾನದಿಂದ ಜಗತ್ತನ್ನೆಲ್ಲ ಉದ್ಧಾರ ಮಾಡಿದನೆಂದೂ, ಆ ಕಾಲವೇ ಪ್ರಪಂಚದ ಚರಿತ್ರೆಯಲ್ಲೆಲ್ಲ ಮುಖ್ಯಘಟ್ಟವೆಂದೂ ನಂಬಿದವರು ರಾಜಕೀಯ, ಸಾಮಾಜಿಕ, ವ್ಯವಹಾರಗಳಲ್ಲಿ ಭದ್ರತೆಯನ್ನಾಗಲೀ ಸ್ವಾತಂತ್ರ್ಯವನ್ನಾಗಲೀ ಎರಡು ಸಾವಿರ ವರ್ಷಗಳ ನಂತರವೂ, ತರಲಾರದೆ ಹೋಗಿರುವರು. ಅವತಾರ ಪುರುಷನ ಬಲಿಯಿಂದ ಸಾಮಾನ್ಯ ಮಾನವನಿಗೆ ಯಾವ ಪ್ರತ್ಯಕ್ಷ ಫಲವೂ ಕಂಡುಬಂದಿಲ್ಲ. ಆ ಅವತಾರ ಪುರುಷನಲ್ಲಿ ಮಾನವಾಂಶವೆಷ್ಟು, ದೇವತಾಂಶವೆಷ್ಟು, ಏತರಲ್ಲಿ ಆ ಪ್ರಯತ್ನಗಳ ನಿಷ್ಫಲತೆಗೆ ಕಾರಣವಾವುದು ಎಂಬ ಶಂಕೆ ಉಳಿದಿದೆ; ಅಥವಾ ಸಂಪೂರ್ಣ ದೇವತಾಂಶವೆಂದು ಭಾವಿಸಿದರೆ ಮಾನವೀಯತೆಗೆ ದೂರವಾಗುವದು. ಮಾನವೀಯತೆಯನ್ನೇ ಪ್ರಧಾನವೆಂದು ಭಾವಿಸಿದರೆ ದಯೆ, ಪ್ರೇಮ, ಕರುಣೆ ಮುಂತಾದುವುಗಳಿಗೆ ಪ್ರಾಮುಖ್ಯತೆ ಕೊಡಬಹುದಾದರೂ, ವ್ಯಾವಹಾರಿಕ ಪ್ರಪಂಚದಲ್ಲಿ ಶಾಂತಿ ಸ್ಥಾಪನೆಗೆ ಮಾರ್ಗ ತೋರಿಸಿದಂತಾಗಲಿಲ್ಲ.

ಕೇವಲ ಆರ್ಥಿಕ ಮತ್ತು ಸಾಮಾಜಿಕ ಸಮತಾವಾದವನ್ನು ಹಿಡಿದು ವಿಶ್ವಶಾಂತಿ ಸ್ಥಾಪನೆ ಮಾಡಲು ಸಾಧ್ಯವೆಂಬ ವಾದವನ್ನು ಪರೀಕ್ಷಿಸಿದರೆ ಮನುಷ್ಯರ ಸ್ವಭಾವಸಿದ್ಧವಾದ ವ್ಯತ್ಯಾಸಗಳನ್ನು ಸಂಪೂರ್ಣವಾಗಿ ತೊಡೆದುಹಾಕುವದು ಎಂತಹ ಸರ್ಕಾರಕ್ಕೂ ಸಾಧ್ಯವಿಲ್ಲ. ವ್ಯಕ್ತಿಯ

ವಿಕಾಸಕ್ಕೆ ಸಂಪೂರ್ಣಾವಕಾಶ ಒದಗಿಸತಕ್ಕದ್ದು ರಾಜಕೀಯ ಧ್ಯೇಯ ವೆಂದು ಈಗ ಪರಿಗಣಿಸಲಾಗಿದೆ. ಇಲ್ಲದಿದ್ದರೆ ಪ್ರಜಾಪ್ರಭುತ್ವ ತತ್ತ್ವವನ್ನು ಬಿಡಬೇಕಾಗುವದು. ಅಂತು ಸ್ವಾತಂತ್ರ್ಯವಿದ್ದರೆ ಸಮತೆಯಿಲ್ಲ; ಸಮತೆಯನ್ನೇ ಪ್ರಧಾನವಾಗಿ ಗಣಿಸಿದರೆ ಪ್ರಗತಿಯಿರುವದಿಲ್ಲ. ಪ್ರಗತಿ ಯಿಲ್ಲದ ಸಮಾಜ ಅಲ್ಪಕಾಲದಲ್ಲಿಯೇ ನಿರಂಕುಶಾಧಿಕಾರ (Caesar-ism), ಸಾಮ್ರಾಜ್ಯತತ್ತ್ವ (Imperialism), ಬಂಡವಾಳಶಾಹಿ (Capitalism) ಮತ್ತು ಇವುಗಳಿಗೆ ಪ್ರತಿಬಿಂಬರೂಪಗಳಾದ ಅನಾಯಕತ್ವ (Anarchy), ರಾಷ್ಟ್ರೀಯಭಾವ (Nationalism), ಸಮತಾವಾದ (Communism), ನಿರೀಶ್ವರವಾದ (Atheism), ಅನಾತ್ಮವಾದ, ಚಾರ್ವಕತತ್ತ್ವ ಇವುಗಳ ಘರ್ಷಣೆಯಿಂದ ನಾಶವಾಗು ವವೆಂದು ಪ್ರಪಂಚದ ಸಂಸ್ಕೃತಿಗಳ ಚರಿತ್ರೆಗಳು ಸಾರುತ್ತಿವೆ.

ಭಾರತೀಯ ಸಂಸ್ಕೃತಿಯಲ್ಲಿ ಈ ಸಮಸ್ಯೆಯನ್ನು ಸೂಕ್ಷ್ಮ ರೀತಿ ಯಲ್ಲಿ ಪರಿಹರಿಸಿದೆ. ಇತರ ಸಂಸ್ಕೃತಿಗಳಂತಲ್ಲದೆ ಭಾರತೀಯ ಸಂಸ್ಕೃತಿಯಲ್ಲಿ "ಅಚಾರಿತ್ರಕ ಆತ್ಮ ತತ್ತ್ವ" (Ahistoric Soul) ಅನುಸ್ಯೂತವಾಗಿರುವದರಿಂದ ರಾಜಧರ್ಮವು ಅಲೌಕಿಕವಾದ, ದೇಶ ಕಾಲಾತೀತವಾದ ಒಂದು "ಧರ್ಮ"ಕ್ಕೆ ಅಧೀನವೆಂದು ಗಣಿಸಲಾಗಿದೆ. ಕ್ಷತ್ರವು ಬ್ರಹ್ಮಕ್ಕೆ ಅಧೀನ. ಒಂದು ಸ್ತ್ರೀ, ಮತ್ತೊಂದು ಪುರುಷ. ಇವು ಗಳ ಸಾಮರಸ್ಯದಿಂದಲೇ ಶಾಂತಿ ಸುಖಗಳು ನೆಲಸುವವೆಂದು ವೇದ ಯುಗದಿಂದಲೂ ಬಂದ ನಂಬಿಕೆ ರಾಜನೀತಿಗಳಲ್ಲಿ ಅಡಕವಾಗಿದೆ. ದಂಡಾಖ್ಯ ಧರ್ಮವು ಸೃಷ್ಟಿಗೆ ಪೂರ್ವದಲ್ಲಿಯೇ ಇದ್ದಿತು.

ಸುಪ್ರಣೀತೇನ ದಣ್ಡೇನ ಪ್ರಿಯಾಪ್ರಿಯ ಸಮಾತ್ಮನಾ ।
ಪ್ರಜಾ ರಕ್ಷತಿಯಃ ಸಮ್ಯಗ್ಧರ್ಮ ಏವ ಸ ಕೇವಲಃ ॥

[ಮ. ಭಾ. ಶಾಂತಿ. ರಾಜಧರ್ಮ ೧೨೧–೧೯]

ದಂಡವೇ ದೈವ, ಪುರುಷಕಾರ, ಹಿಂಸಾ, ಅಹಿಂಸಾ, ಮೋಕ್ಷ, ಅಮೋಘ ಇತ್ಯಾದಿ ಅನೇಕ ನಾಮಗಳಿಂದ ವ್ಯವಹರಿಸಲ್ಪಡುತ್ತದೆ. ವ್ಯವಹಾರದಲ್ಲಿ ಪ್ರಿಯಾಪ್ರಿಯ ಸಮಾತ್ಮನಾದ ರಾಜನು ದಂಡ ಧರ್ಮ ಪ್ರಯೋಗ ಮಾಡಲೇಬೇಕು. ಇದು ಒಂದು ಯಜ್ಞ. ಆತ್ಮತ್ಯಾಗ

ರೂಪವಾದುದು. ಇಂತಹ ತ್ಯಾಗಪರನಾದ ರಾಜನು ಪಾಪಹೊಂದುವುದಿಲ್ಲ. ಪ್ರಜೆಗಳು ಮಾಡಿದ ಪಾಪಗಳ ಒಂದು ಭಾಗವನ್ನು ರಾಜನು ವಹಿಸಬೇಕೆಂಬ ನಿಯಮ ಇಂತಹ ರಾಜರಿಗೆ ಅನ್ವಯಿಸುವದಿಲ್ಲ. ಅನೂಚಾನವಾಗಿ ಬಂದ ಇಂತಹ ಧರ್ಮದಿಂದ ಪ್ರಗತಿಯು ನಿಂತುಹೋಗುವದೆಂಬ ಭೀತಿಗೂ ಅವಕಾಶವಿಲ್ಲ. ಪ್ರಜಾಪ್ರಭುತ್ವವಾಗಲಿ, ಗಣರಾಜ್ಯವಾಗಲಿ, ಏಕರಾಜ್ಯ, ಸಾಮ್ರಾಜ್ಯಗಳಾಗಲಿ–ಈ ವಿಶ್ವಧರ್ಮಾಚರಣೆಯಿಂದಲೇ ಸುಖಶಾಂತಿ ನೆಲಸಬೇಕು. ಈ ತತ್ತ್ವಕ್ಕೆ ಉದಾಹರಣೆಗಳು ಭಾರತೀಯ ಚರಿತ್ರೆಯಲ್ಲಿ ಅನೇಕವಾಗಿ ಸಿಕ್ಕುತ್ತವೆ. ಕರ್ಣಾಟಕ ಚರಿತ್ರೆಗೆ ಸಂಬಂಧಹೊಂದಿದ ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷ ನೃಪತುಂಗನ ಜೀವನ ಚರಿತ್ರೆ ಇಂತಹುದೊಂದು. ಭಾರತೀಯರ ಚರಿತ್ರೆ ಆಧ್ಯಾತ್ಮಿಕ ತಳಹದಿಯ ಮೇಲೆ ನಿಂತಿದೆ ಎಂದು ಹೇಳುವುದು ಸಾಧಾರಣವಾಗಿದ್ದಾಗ್ಯೂ, ಒಬ್ಬ ಚಾರಿತ್ರಕ ವ್ಯಕ್ತಿಯನ್ನು ಆರಿಸಿಕೊಂಡು ಸಂಶೋಧನೆಮಾಡಿ, ಸಮಕಾಲೀನವಾದ ಶಾಸನ, ನಾಣ್ಯ ಮತ್ತು ಗ್ರಂಥಗಳನ್ನೆಲ್ಲ ಪರಿಶೋಧಿಸಿ ಚರಿತ್ರೆಯನ್ನು ಪುನಃ ರಚಿಸಿ, ನಿರ್ಣೀತವಾದ ಆಧಾರಗಳನ್ನಳವಡಿಸಿಕೊಂಡು ಚಾರಿತ್ರಕ ವಾತಾವರಣಕ್ಕೆ ವಿರುದ್ಧವಲ್ಲದಂತೆ ಕಾದಂಬರಿಗಳನ್ನು ರಚಿಸುವ ಶಕ್ತಿ ಭಾರತೀಯ ಸಾಹಿತಿಗಳಲ್ಲಿ ಅಪರೂಪ. "ಚಾರಿತ್ರಕ ಕಾದಂಬರಿ" ಎಂಬ ಹೆಸರು ಕೇವಲ ಒಂದೆರಡು ಚಾರಿತ್ರಕ ವ್ಯಕ್ತಿಗಳ ಹೆಸರುಗಳನ್ನು ಪಠಿಸಿದ ಮಾತ್ರದಿಂದ ಬರಲಾರದು. ರಜಪೂತ, ಮರಾಠ, ವಿಜಯನಗರ, ಬ್ರಿಟಿಷ್ ಆಡಳಿತಕಾಲಗಳಿಗೆ ಸಂಬಂಧಪಟ್ಟಂತಹ ಕೆಲವು ಅಂಶಗಳನ್ನು ಆರಿಸಿ ಆ ಆಧಾರದ ಮೇಲೆ ೧೯ನೆಯ ಶತಾಬ್ದದಿಂದೀಚೆಗೆ "ಚಾರಿತ್ರಕ ಕಾದಂಬರಿಗಳು" ಹುಟ್ಟಿವೆ. ಕನ್ನಡದಲ್ಲಿಯೂ ಕೆಳದಿ, ಹೈದರ್, ಟೀಪು, ಪುಲಿಕೇಶಿ, ವಿದ್ಯಾರಣ್ಯರ ಸಂಬಂಧವಾದ ಕೆಲವು ಕಾದಂಬರಿಗಳೂ ಹುಟ್ಟಿವೆ.

ಇವು "ಚಾರಿತ್ರಕ ಕಾದಂಬರಿ"ಗಳೆನ್ನಿಸಿಕೊಳ್ಳಲು ಅರ್ಹವಾದುವೆ ಎಂಬುದನ್ನು ವಿವೇಚಿಸಿದರೆ ಅಂತಹ ಕಾದಂಬರಿಕಾರನಿಗೆ ಸಂಶೋಧನಾಶಕ್ತಿ, ನಿಯಮಗಳಿವೆಯೇ ಎಂಬುದನ್ನು ಕೂಲಂಕಷವಾಗಿ

ಚರ್ಚಿಸಬೇಕು. ಚಾರಿತ್ರಕ ಕಾದಂಬರಿಗಳ ರಚನೆಯಲ್ಲಿ ತಪ್ಪುಹೆಜ್ಜೆ ಹಾಕುವದು ಸುಲಭ. ಮಾನವನ ಸ್ವಭಾವ ಎಂದಿಗೂ ಒಂದೇ, ವಾತಾವರಣ ಮಾತ್ರ ಬದಲಾವಣೆಯಾಗಬಹುದು ಎಂದು ಹೇಳುವ ದಾದರೆ ಸ್ವೈಜವಾದ ಚಾರಿತ್ರಕ ಚಿತ್ರವು ಹಬ್ಬಲಾರದು. ಭಾರತೀಯ ಚರಿತ್ರೆಯಿಂದ ಆರಿಸಿಕೊಂಡ ವಸ್ತುವನ್ನು ಕಾದಂಬರೀ ರೂಪವಾಗಿ ಚಿತ್ರಿಸುವದು ಮತ್ತೂ ಕಠಿಣವೆಂದು ಹೇಳಬಹುದು. ಆಧುನಿಕ ಯುರೋಪಿನ ಚರಿತ್ರೆಯನ್ನು ಬಹುಮಟ್ಟಿಗೆ ಸಂಶಯಕ್ಕಾಸ್ಪದವಿಲ್ಲ ದಂತೆ ರಚಿಸಿರುವದರಿಂದ ಅಲ್ಲಿನ ಕಾದಂಬರಿಕಾರರಿಗೆ ಸುಲಭವೆಂದು ಹೇಳಬಹುದು. ಭಾರತೀಯ ಚರಿತ್ರೆಯಾದರೋ ಇನ್ನೂ ಸಂಶೋಧನಾ ಕ್ಷೇತ್ರದಲ್ಲಿಯೇ ಇದೆ. ಯಾವೊಂದು ಅಂಶವನ್ನೂ ನಿರ್ಧರಿಸ ಲಾರದಾಗಿದೆ. ಒಬ್ಬ ಪರಿಶೋಧಕನ ಸಿದ್ಧಾಂತವನ್ನು ಮಾರನೆಯ ದಿನ ಮತ್ತೊಬ್ಬನು ನಿರಾಕರಿಸುವನು. ಮುಸ್ಲಿಮರ ಆಳಿಕೆ ಆರಂಭವಾಗು ವವರೆಗೂ ಪ್ರಾಚೀನ ಭಾರತದ ಚರಿತ್ರೆಯಲ್ಲಿ ಯಾವ ವ್ಯಕ್ತಿಯನ್ನೂ (ಚಂದ್ರಗುಪ್ತ ಮೌರ್ಯ, ಅಶೋಕ, ಸಮುದ್ರಗುಪ್ತ, ಹರ್ಷ ಇಂತಹ ಕೆಲವರನ್ನು ಬಿಟ್ಟರೆ) ಸಂಪೂರ್ಣವಾಗಿ ಸಾಕ್ಷಾತ್ಕರಿಸಿಕೊಳ್ಳುವದ ಕ್ಕಾಗದು.

ಅಲ್ಲದೆ ಸಾವಿರಾರು ವರ್ಷ ಕಳೆದರೂ ಭಾರತೀಯ ಸಂಸ್ಕೃತಿ ಸಮಾಜ, ರಾಜಕೀಯ ಪದ್ಧತಿ, ಮತ ಮುಂತಾದುವು ಬದಲಾವಣೆ ಹೊಂದದೆ ತಟಸ್ಥವಾಗಿದ್ದವೆಂಬ ಭಾವನೆಯು ಬೆಳೆದುಬಂದು, ಕಾದಂಬರಿಕಾರರು ಸಂಶೋಧನೆ ನಡೆಸದೆ, ಪಾಳಯಗಾರರ ಕಾಲವಾಗಲಿ, ವಿಜಯನಗರ ಕಾಲವಾಗಲಿ, ಬಾದಾಮಿ ಚಾಳುಕ್ಯ ಅಥವಾ ರಾಷ್ಟ್ರ ಕೂಟರ ಕಾಲವಾಗಲಿ ಒಂದೇ ವಿಧವಾಗಿ ಚಿತ್ರಿಸಿಬಿಡುವರು. ಮತ್ತು ದೇಶಕಾಲ ವಿರುದ್ಧಾಂಶಗಳು (Anachronisms) ಹೇರಳವಾಗಿರು ವವು. ಇಂತಹ ಕಾದಂಬರಿಗಳನ್ನು ಚಾರಿತ್ರಕ ಕಾದಂಬರಿಗಳೆಂದು ಕರೆಯಲಾಗದು. ಚಾರಿತ್ರಕ ಕಾದಂಬರಿಕಾರನು ತಾನು ಆರಿಸಿಕೊಂಡ ಕಾಲದ ಚರಿತ್ರೆಯನ್ನು ಕೂಲಂಕಷವಾಗಿ ಸಂಶೋಧಿಸಿ, ತನ್ನ ಕಥಾ ನಾಯಕನೇ ಅಲ್ಲದೆ ಇತರ ಸಮಕಾಲೀನರ ಚರಿತ್ರೆಯನ್ನು ಪರಿಶೀಲಿಸಿ,

ಆ ವಾತಾವರಣವನ್ನು ರಕ್ತಗತವಾಗಿ ಮಾಡಿಕೊಂಡು, ನಿರ್ಜೀವವಾದ, ಪುರಾತತ್ತ್ವ ಸಂಶೋಧನೆ ಇಲಾಖೆಯಲ್ಲಿ, ಧೂಳುಕವಿದು ಮೂಲೆಯಲ್ಲಿರುವ ಶಾಸನ, ಓಲೆಗರಿ, ನಾಣ್ಯ, ಶಿಲ್ಪಗಳಿಗೆ ಜೀವಕಳೆಯನ್ನು ತುಂಬುವ ಪ್ರತಿಭೆಯನ್ನು ಪಡೆದಿರಬೇಕು.

ಶ್ರೀ ತ. ರಾ. ಸು.ಅವರ ಇದುವರೆಗೆ ಪ್ರಕಟವಾಗಿರುವ ಕಾದಂಬರಿಗಳನ್ನೂ, ಸಣ್ಣ ಕಥೆಗಳನ್ನೂ, ಏಕಾಂಕ ನಾಟಕ ಇತ್ಯಾದಿಗಳನ್ನೂ ಓದಿರುವ ಕನ್ನಡಿಗರಿಗೆ "ನೃಪತುಂಗ" ಒಂದು ಹೊಸಹಾದಿ ಹಿಡಿದಿರುವದು ಆಶ್ಚರ್ಯವೆನಿಸಬಹುದು. ಆದರೆ ಅವರ ಪ್ರತಿಭೆಯನ್ನು ತಿಳಿದವರಿಗೆ "ಚಾರಿತ್ರಕ ಕಾದಂಬರಿ" ರೀತಿ ಅಸಾಧ್ಯವಲ್ಲವೆಂಬುದು ನಿಶ್ಚಿತವಾಗಿದೆ. ಈ ಚಾರಿತ್ರಕ ಕಾದಂಬರಿಗೆ ಮುಂಚೆಯೇ "ಹಂಸಗೀತೆ"ಯಲ್ಲಿ ಚಾರಿತ್ರಕ ವಸ್ತುವನ್ನು ಆರಿಸಿಕೊಂಡು ಯಶಸ್ವಿಯಾಗಿರುವರು. ಪ್ರಕೃತ ಗ್ರಂಥದಲ್ಲಿ ಮತ್ತೊಂದು ಹೆಜ್ಜೆ ಮುಂದೆಹೋಗಿ, ಸಾಮಾಜಿಕ ಕಾದಂಬರಿ ರಚನೆಯಲ್ಲಿ ಹೇಗೆ ಪರಿಣತರಾಗಿರುವರೋ ಅಂತೆಯೇ ಕೇವಲ ಚರಿತ್ರ ಸಂಶೋಧನೆಯಲ್ಲಿ, ಸಶಾಸ್ತ್ರೀಯವಾಗಿ ನಡಿಸಬೇಕಾದ ವಿಮರ್ಶೆಯಲ್ಲಿ ಕೂಡ ತಮ್ಮ ಕೈವಾಡವನ್ನು ತೋರಿಸಿರುವರು. ಅಂತಹ ಜ್ಞಾನಾನ್ವೇಷಣ ನಿಷ್ಠೆ (Research discipline) ಇತರ ಕಾದಂಬರಿಕಾರರಲ್ಲಿ ವಿರಳವು.

"ನೃಪತುಂಗ" ಕಾದಂಬರಿಯನ್ನು ರಚಿಸುವದಕ್ಕೆ ಮುಂಚೆ ನೂರಾರು ಶಾಸನಗಳು (ಕೇವಲ ನೃಪತುಂಗನ ಕಾಲದ ಶಾಸನಗಳೇ ಅಲ್ಲ, ತತ್ಸಂಬಂಧವಾದ ಕನ್ನಡ, ತೆಲುಗು ಮತ್ತು ಸಂಸ್ಕೃತ ಶಾಸನಗಳು), ನಾಣ್ಯಗಳು, ಆ ಕಾಲದ ಕನ್ನಡ, ಪರ್ಷಿಯನ್ ಮತ್ತು ಸಂಸ್ಕೃತ ಸಾಹಿತ್ಯ, ವಾಸ್ತುಶಿಲ್ಪ ಇತ್ಯಾದಿ ಮೂಲಾಧಾರಗಳನ್ನೆಲ್ಲ ಕೂಲಂಕಷವಾಗಿ ಅಧ್ಯಯನಮಾಡಿ, ಜೀರ್ಣಿಸಿಕೊಂಡು, ನೃಪತುಂಗನ ಚರಿತ್ರೆಯನ್ನು ಸ್ಥೂಲವಾಗಿ ಬರೆದು, ಅನಂತರ ಕಾದಂಬರೀರೂಪ ಕೊಟ್ಟಿರುವರು. ನಾನು ಪ್ರತಿಯೊಂದು ಅಂಶವನ್ನೂ ಚಾಣಾಕ್ಷನಾಗಿ ವಿಮರ್ಶಿಸಿ, ಆಧಾರಗಳನ್ನಪೇಕ್ಷಿಸಿ ಪರೀಕ್ಷೆ ಮಾಡಿರುವೆನು. ಚರಿತ್ರರೂಪವಾದ "ನೃಪತುಂಗ" ಪ್ರಕಟವಾದಲ್ಲಿ ಇದು ಸರ್ವರಿಗೂ ವೇದ್ಯವಾಗುವದು. ಕರ್ನಾಟಕ ಚರಿತ್ರೆಯಲ್ಲಿ ಸಂಶೋಧನೆ ನಡೆಸಿರುವವರಿಗೆ ಇದು

ಎಷ್ಟು ಶ್ರಮಸಾಧ್ಯವೆಂಬುದು ತಿಳಿಯುವದು. ಶಾಸನಗಳ ಶೈಲಿಯನ್ನೇ ಅನೇಕ ಕಡೆಗಳಲ್ಲಿ ನೋಡಬಹುದು. ಒಂದು ಸಾವಿರ ವರ್ಷದ ಹಿಂದಿನ ಕರ್ಣಾಟಕ, ಭಾರತೀಯ ಚರಿತ್ರೆಯಲ್ಲೆಲ್ಲ ಅಗ್ರಸ್ಥಾನಾರ್ಹನಾದ ನೃಪತುಂಗನ ಆಳಿಕೆಯಲ್ಲಿ ಎಷ್ಟು ಪ್ರಬುದ್ಧವಾಗಿದ್ದಿತೆಂಬುದನ್ನು ಕಥಾರೂಪದಲ್ಲಿ ಚಿತ್ರಿಸಿರುವರು. ನೃಪತುಂಗನ ವ್ಯಕ್ತಿ ಎದ್ದು ಕಂಡುಬರುವದು. ಗುಣಭದ್ರಾಚಾರ್ಯ, ಬಂಕೇಶ, ಲೋಕಾದಿತ್ಯ ಮುಂತಾದ ಚಾರಿತ್ರಕ ವ್ಯಕ್ತಿಗಳು ನೈಜವಾದ ರೀತಿಯಲ್ಲಿ ಪಾತ್ರವಹಿಸಿರುವರು. ನೃಪತುಂಗನ ಮತ, ಯುವರಾಜ ಕೃಷ್ಣನ ದಂಗೆಗೆ ಕಾರಣ, ಕೃಷ್ಣನ ಬಂಧನಕ್ಕೂ ತಲಕಾಡು ಯುದ್ಧಕ್ಕೂ ಸಂಬಂಧವಿರಲಿಲ್ಲವೆ, ಶಂಕರಗಣ—ಮಂಗಿ ಅವರ ಪಾತ್ರ ಇತ್ಯಾದಿ ವಿಷಯಗಳಲ್ಲಿ ತ. ರಾ. ಸು. ಅವರು ಅನುಸರಿಸಿರುವ ಸಿದ್ಧಾಂತಗಳಿಗೂ ಸಾಕಷ್ಟು ಆಧಾರಗಳನ್ನು ಕೊಡಬಹುದು. ಎರಡು ಪಾತ್ರಗಳ ಹೆಸರುಗಳು ಮಾತ್ರ—ಉಜ್ವಲಾ ಮತ್ತು ಲಕ್ಷ್ಮೀ, ಊಹೆಗಳಾದರೂ ಅವುಗಳಿಗೂ ಸಮಂಜಸವಾದ ಉಪಪತ್ತಿ ತೋರಿಸಬಹುದು.

ಈ ಕಾದಂಬರಿಯಲ್ಲಿ ಮತ್ತೊಂದು ವೈಶಿಷ್ಟ್ಯವೇನೆಂದರೆ ಪವಾಡ, ಅದ್ಭುತ ಸನ್ನಿವೇಶಗಳನ್ನು ತರದೆ ಕೇವಲ ಚಾರಿತ್ರಕಾಂಶಗಳಿಂದಲೇ ಕಥೆಯನ್ನು ಹೆಣೆದಿರುವದು. ಸಾಮಾನ್ಯಾನುಭವಕ್ಕೆ ವಿರುದ್ಧವಾದ ಯಾವ ಘಟನೆಯೂ ಇಲ್ಲ, ಅಸ್ವಾಭಾವಿಕವಾದ ಪಾತ್ರವಿಲ್ಲ. ನೃಪತುಂಗನ ಚಿತ್ರಣೆಯಲ್ಲಿ ರಾಜನ ಕರ್ತವ್ಯಕ್ಕೂ ತಂದೆಗೆ ಸಹಜವಾದ ಪುತ್ರವಾತ್ಸಲ್ಯಕ್ಕೂ ಸ್ಪರ್ಧೆ ಬಂದಾಗ ರಾಜಧರ್ಮವನ್ನು ಎತ್ತಿಹಿಡಿದು ಸೊಸೆಯ ಮತ್ತು ಆಪ್ತ ಸಚಿವನ ಬಿನ್ನಹವನ್ನೂ ಲೆಕ್ಕಿಸದೆ ನ್ಯಾಯಕ್ಕಾಗಿ ಮಗನನ್ನೂ ಬಲಿಕೊಡಲು ಸಿದ್ಧನಾಗಿರುವನು ನೃಪತುಂಗ. ಆದರೆ ಪ್ರಜೆಗಳ ಅಭಿಪ್ರಾಯವನ್ನು ಪ್ರಭುವು ಅನುಸರಿಸಬೇಕೆಂಬ ಪ್ರಜಾಪ್ರಭುತ್ವತತ್ತ್ವದಂತೆ, ನೃಪತುಂಗನು ಮಗನನ್ನು ಕ್ಷಮಿಸಿ ಯುವರಾಜನನ್ನಾಗಿ ಮಾಡುವನು. ಇಲ್ಲಿ ಎದ್ದ ಪ್ರಶ್ನೆಗೆ ಇದೊಂದು ಬಗೆಯ ಉತ್ತರವೆಂದು ಭಾವಿಸಬಹುದು. ಆದರೂ ಇದರಿಂದ ಶಾಶ್ವತ ಮತ್ತು ದೇಶಕಾಲಾಬಾಧಿತವಾದ ಧರ್ಮವನ್ನು ಪಾಲಿಸಿದಂತಾಯಿತೇ ಎಂಬ ಶಂಕೆಯು ಇದ್ದೇ ಇರುವದು. ಆಕಸ್ಮಿಕವಾದ ಘಟನೆಗಳಿಂದ ತಾತ್ಕಾ

ಲಿಕವಾಗಿ ಜನರಲ್ಲಿ ಉದ್ವೇಗ ಹುಟ್ಟಿ, ಪೂರ್ವಾಪರ ವಿವೇಚನೆಯಿಲ್ಲದೆ ಶೋಕ, ಮೋಹ, ದಯಾ, ದಾಕ್ಷಿಣ್ಯಗಳಿಗೊಳಗಾದ ಪ್ರಜಾವಾಣಿ ಶಾಶ್ವತ ಧರ್ಮವನ್ನು ರದ್ದುಮಾಡಲು ಶಕ್ತಹೊಂದಿದೆ ಎಂದರೆ ದಂಡನೀತಿಯು ತಳಹದಿಯೇ ಸಡಿಲವಾಗಬಹುದು. ನೃಪತುಂಗನಂತಹ ಆತ್ಮಜ್ಞಾನಿ, "ಪ್ರಜಾಹಿತೇ ಹಿತಂ ರಾಜ್ಞಃ!" ಎಂಬ ಸಾಮಾನ್ಯ ನೀತಿಯಿದ್ದರೂ ವಾತ್ಸಲ್ಯ ಪ್ರೇಮ ಅಭಿಮಾನಗಳಿಂದ ದೂರನಾಗಿರುವದರಿಂದ ಕ್ಷತ್ರಿಯೋ, ಚಿತ ಧರ್ಮವನ್ನನುಸರಿಸಬೇಕಾಗಿದ್ದಿತು. ಆತ್ಮಜ್ಞಾನಿಯು ರಾಜ ನಾದರೆ ಇಂತಹ ಘಟನೆಗಳು ಅನಿವಾರ್ಯ. ಚರಿತ್ರೆಯಲ್ಲಿ ರಾಜರು ತಮ್ಮ ಹಸ್ತದಿಂದಲೇ ಮಗನಿಗೆ ಶಿಕ್ಷೆ ವಿಧಿಸಿದ ಉದಾಹರಣೆಗಳೂ ಸಿಕ್ಕು ವವು. ಕೌಟಿಲ್ಯನು ಏಕಮಾತ್ರ ಪುತ್ರನಾದರೂ ಅವನು ಅವಿನೀತ ನಾದರೆ ರಾಜ್ಯಕ್ಕೆ ಅರ್ಹನಲ್ಲ, ರಾಜನ ಬಳಗದಲ್ಲಿ ಅರ್ಹನಾದವನನ್ನು ಚುನಾಯಿಸಬೇಕೆಂದು ಸ್ಪಷ್ಟವಾಗಿ ಹೇಳುವನು. ನೃಪತುಂಗನು ಜ್ಞಾನಿ, ತ್ಯಾಗಮೂರ್ತಿ, ದೇಶದ ಹಿತಕ್ಕಾಗಿ ತನ್ನ ಬೆರಳುಗಳನ್ನು ಕತ್ತರಿಸಿಕೊಂಡ ವನು. ಅಂಗವನ್ನು ಯಜ್ಞಮಾಡಿದ ರಾಜನು, ತನ್ನ ಅಂಗಸಂಭವ ನಾದ ರಾಜಕುಮಾರನನ್ನು ಧರ್ಮಕ್ಕಾಗಿ, ಸನಾತನ ನ್ಯಾಯಕ್ಕಾಗಿ ಯಜ್ಞಮಾಡಬಹುದಾಗಿದ್ದಿತು. ಹಾಗೆ ಮಾಡಿದ್ದಲ್ಲಿ ಚರಿತ್ರೆಗೆ ವಿರುದ್ಧ ವಾದರೂ, ನೃಪತುಂಗನ ಚಾರಿತ್ರ್ಯಕ್ಕೆ ಮತ್ತಷ್ಟು ಕಳೆಕಟ್ಟುತ್ತಿದ್ದಿತು.

ಶ್ರೀ ತ. ರಾ. ಸು. ಅವರ ಚಾರಿತ್ರಕ ಕಾದಂಬರಿ ಕನ್ನಡದಲ್ಲಿ ನೂತನ ರೀತಿಯನ್ನನುಸರಿಸಿದೆಯೆಂದು ಮತ್ತೊಮ್ಮೆ ಹೇಳಬೇಕಾಗಿದೆ. ಕಾವೇರಿಯಿಂದ ಗೋದಾವರಿ ಪರ್ಯಂತದ ನಾಡನ್ನು ಸುಮಾರು ಅರು ವತ್ತು ವರ್ಷ ಧರ್ಮದಿಂದ ಪಾಲಿಸಿ, ದೇಶವಿದೇಶಗಳಲ್ಲಿಯೂ ಪ್ರಸಿದ್ಧ ನಾಗಿದ್ದ ನೃಪತುಂಗನ ಚರಿತ್ರೆಯನ್ನು ಕನ್ನಡಿಗರೂ ಭಾರತೀಯರೂ ಅರಿಯುವದು ಕರ್ತವ್ಯವಾಗಿದೆ. ಇದು ಕಾದಂಬರಿಯೆಂದು ಕರೆದಿ ದ್ದರೂ ಚರಿತ್ರೆಯೆಂದು ಹೇಳಿದರೆ ಮತ್ತಷ್ಟು ಸಮಂಜಸವಾಗಿರುವದು. ಇದರಲ್ಲಿ ತ. ರಾ. ಸು. ಅವರು ಉಪಯೋಗಿಸಿರುವ ಒಂದೊಂದು ವಾಕ್ಯಕ್ಕೂ ಚಾರಿತ್ರಕಾಧಾರಗಳ ಅಡಿಟಿಪ್ಪಣಿ ಅವಶ್ಯಕ. ಪ್ರಾಚೀನ ಕರ್ನಾಟಕ ಮತ್ತು ಭಾರತೀಯ ಸಂಸ್ಕೃತಿಯ ಚಿತ್ರಣವಾದ ಈ ಕಾದಂ ಬರಿಯನ್ನು ಕನ್ನಡಿಗರು ಆದರದಿಂದ ಸ್ವಾಗತಿಸುವರೆಂದು ನನ್ನ ನಂಬಿಕೆ

# ಕೆಲವು ಮಾತುಗಳು

ನೃಪತುಂಗ ಚಕ್ರವರ್ತಿಯ ಹೆಸರು ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಧೃವತಾರೆಯಂತೆ ಶಾಶ್ವತ ಪ್ರಭೆಯಿಂದ ಬೆಳಗುವ ಹೆಸರು. ಸಹಸ್ರಾರು ವರ್ಷಗಳ ಕಾಲದಿಂದ, ಸಹಸ್ರಾರು ಮಂದಿ ಕವಿಗಳ ಅಮೋಘ ಪ್ರತಿಭೆಯಿಂದ ಭವ್ಯ ಸುಂದರವಾಗಿ ನಿರ್ಮಿತವಾಗಿರುವ ಕನ್ನಡ ಸಾಹಿತ್ಯ ಸೌಧವನ್ನು ಪ್ರವೇಶಿಸಬಯಸುವ ಕಾವ್ಯಾಭ್ಯಾಸಿ, ಮಹಾದ್ವಾರದ ಬಾಗಿಲಲ್ಲೇ ಭಕ್ತಿ ಗೌರವದಿಂದ ಮಣಿಯಬೇಕಾದ ದೇವತಾವಿಗ್ರಹ ನೃಪತುಂಗ. ಇದಕ್ಕೆ ಕಾರಣ-ಆತನೇ ಬರೆದುದೋ ಅಥವಾ ಆತನ ಆಜ್ಞೆಯಂತೆ ಪಾತ್ರೋರ್ವ ಮಹಾಕವಿಯಿಂದ ಬರೆಯಲ್ಪಟ್ಟುದೋ ಆದ ಕಾವ್ಯಲಕ್ಷಣ ಗ್ರಂಥ **ಕವಿರಾಜ ಮಾರ್ಗ**.

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ "ಕವಿರಾಜ ಮಾರ್ಗ"ಕ್ಕೆ ಹಲವಾರು ಕಾರಣಗಳಿಂದ ಅತ್ಯಂತ ಪ್ರಾಮುಖ್ಯತೆಯ ಸ್ಥಾನವಿದೆ. ಕಾವ್ಯಲಕ್ಷಣಗಳನ್ನೂ, ಅಲ್ಲಿಯ ವಿಧಿ-ನಿಷೇಧಗಳನ್ನು ಸೂಚಿಸುವ ಈ ಕಾವ್ಯ. ಸಂಸ್ಕೃತ ಲಕ್ಷಣ ಗ್ರಂಥಗಳ, ಮುಖ್ಯವಾಗಿ ದಂಡಿಯ "ಕಾವ್ಯಾದರ್ಶ"ದ ಛಾಯಾನುಸರಣೆಯಾದರೂ, ಇದರ ಅಂತರಾಳದಲ್ಲಿ, ಆ ಕಾವ್ಯದ ಕಾಲದ ಕರ್ನಾಟಕ ಸಾಹಿತ್ಯ, ಕರ್ನಾಟಕ ರಾಜ್ಯವಿಸ್ತಾರ, ಕನ್ನಡಿಗರ ಸಹಜಪಾಂಡಿತ್ಯ, ಅವರ ಜೀವನಗಳ ಮೇಲೆ ಬೆಳಕು ಚೆಲ್ಲುವ ಅಂಶಗಳು ಹೇರಳವಾಗಿ ಹುದುಗಿವೆ. ಎಂತಲೇ ಆ ಕಾವ್ಯ ಸಾಹಿತ್ಯಾಭ್ಯಾಸಿಗಳಿಗಲ್ಲದ, ಇತಿಹಾಸಾಭ್ಯಾಸಿಗಳಿಗೂ ಮೂಲವಸ್ತುವನ್ನು ಒದಗಿಸುವ ಅಮೂಲ್ಯವಾದ ಗಣಿಯಾಗಿದೆ. ಎಂತಲೇ ಇತಿಹಾಸ ಸಂಶೋಧನೆ ನಡೆಸಬೇಕೆನ್ನುವವರು "ಕವಿರಾಜ ಮಾರ್ಗ"ವನ್ನು ಅಭ್ಯಾಸ ಮಾಡದೆ ಇರುವುದು ಅಸಾಧ್ಯ. ನನ್ನ ದೃಷ್ಟಿ 'ಕವಿರಾಜಮಾರ್ಗ' ದತ್ತ, ನೃಪತುಂಗ ಚಕ್ರವರ್ತಿಯತ್ತ ಹೊರಳಲು ಇದೇ ಕಾರಣವಾಯಿತು.

'ಕನ್ನಡಿಗರ ವೀರ ಜೀವನ'ದ ಬಗ್ಗೆ ಸಂಶೋಧನ ಗ್ರಂಥವನ್ನು ಬರೆಯಲು ಶಾಸನ, ಕಾವ್ಯಗಳಿಂದ ವಸ್ತುಸಂಗ್ರಹ ಮಾಡುತ್ತಿದ್ದ ನಾನು, ಆ ಬಗ್ಗೆ ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ಶಾಸ್ತ್ರದ ಉಪ-

ಪ್ರಾಧ್ಯಾಪಕರಾದ, ವಿಶ್ವವಿಖ್ಯಾತ ಸಂಶೋಧನ ಶಾಸ್ತ್ರಜ್ಞರಾದ ಡಾ|| ಎಸ್. ಶ್ರೀಕಂಠಶಾಸ್ತ್ರಿಗಳಲ್ಲಿ, ಈಗ ಎರಡು ವರ್ಷದ ಕೆಳಗೆ, ವಿಚಾರ ವಿನಿಮಯಮಾಡುತ್ತಿದ್ದಾಗ, ಅವರು, ಪ್ರಜಾಹಿತಕ್ಕಾಗಿ ಅಂಗುಲಿದಾನ ಮಾಡಿದ ನೃಪತುಂಗ ಚಕ್ರವರ್ತಿಯ ಮಹಾತ್ಯಾಗದ ವಿಷಯವನ್ನು ಸಾರುವ ಆತನ ಸಂಜಾನ್ ಶಾಸನದತ್ತ ನನ್ನ ದೃಷ್ಟಿಯನ್ನೆಳೆದು, ಮಹೋಪಕಾರ ಮಾಡಿದ್ದೇ ಅಲ್ಲದೆ, ನೃಪತುಂಗ ಚಕ್ರವರ್ತಿಯ ವಿಷಯದಲ್ಲಿ ಹೆಚ್ಚು ಅಭ್ಯಾಸಮಾಡಲು ಸೂಚಿಸಿದರು. ಆ ಶಾಸನವನ್ನೋದಿ ನನ್ನ ಕುತೂಹಲವು ಕೆರಳಿತ್ತು. ಸಕಲ ಪ್ರಜಾಕೋಟಿಯ ಹಿತಸಾಧನೆಗಾಗಿ ಆತ್ಮತ್ಯಾಗಕ್ಕಾಗಿ ಸಿದ್ಧನಾದ ಕನ್ನಡದೊರೆ ಎಂದು ನೃಪತುಂಗನಲ್ಲಿ ಅಭಿಮಾನ ಮೂಡಿತು—ಅಂದೇ ಶಾಸ್ತ್ರಿಗಳ ಆಶೀರ್ವಾದ ಪಡೆದು, ಆತನ ಬಗ್ಗೆ ಹೆಚ್ಚು ವಿಷಯವನ್ನರಿಯಲು ಅಭ್ಯಾಸವನ್ನಾರಂಭಿಸಿದೆ.

ರಾಷ್ಟ್ರಕೂಟರ ಕಾಲದ ಬಗ್ಗೆ ಇರುವ ಗ್ರಂಥಗಳು ಬಹು ಅಲ್ಪ. ಇವುಗಳಲ್ಲಿ ಪ್ರೊ|| ಅಲ್ತೇಕರ್‌ರವರು ಬರೆದ 'ರಾಷ್ಟ್ರಕೂಟರು ಮತ್ತು ಅವರಕಾಲ' (Rastrakutas and thier times) ಎನ್ನುವುದೇ ವಿಸ್ತಾರವಾದದ್ದು. ಆ ಗ್ರಂಥವನ್ನೂ, ಮತ್ತು ಅಲ್ಲಲ್ಲಿ, ಪ್ರಾಸಂಗಿಕವಾಗಿ ಅಮೋಘವರ್ಷ ನೃಪತುಂಗನ ವಿಷಯ ಬರೆದಿರುವ ಇತರ ಚರಿತ್ರಕಾರರು ಬರೆದ ಗ್ರಂಥಗಳನ್ನೂ ಓದಿದಾಗ ಅವುಗಳಲ್ಲಿ ನೃಪತುಂಗನ ಬಗ್ಗೆ ಕೀಳುಗಳೆಯುವಂಥ ಮಾತುಗಳನ್ನು ಬರೆದಿರುವುದನ್ನೇ ಓದಿ, ವ್ಯಥೆಯಾಗಿ, ನೃಪತುಂಗನ ಬಗ್ಗೆ ಸತ್ಯಾಂಶವನ್ನರಿಯಲು ಆತನ ಮತ್ತು ಆತನಕಾಲದ ಶಾಸನಗಳು, ಸಮಕಾಲೀನ ಕಾವ್ಯಗಳ ಅಭ್ಯಾಸವನ್ನಾರಂಭಿಸಿ, ಸುಮಾರು ೧ ವರ್ಷದ ಕಾಲ ಅಧ್ಯಯನ ನಡೆಸಿದ ಬಳಿಕ ಆ ಚರಿತ್ರಕಾರರು—ಮುಖ್ಯವಾಗಿ ಮರಾಠಿ ಮತ್ತು ತಮಿಳು ಚರಿತ್ರಕಾರರು—ಬರೆದ ವಿಷಯಗಳು ವಾಸ್ತವಾಂಶಕ್ಕೆ ದೂರವಾದುದೆಂದು ಕಂಡುಬಂದಿತು. ಆಗಲೇ 'ನೃಪತುಂಗ'ನ ಬಗ್ಗೆ, ಆತನ ಜೀವನ—ಕಾಲಗಳ ವಿಷಯದಲ್ಲಿ ಸಂಶೋಧನಾತ್ಮಕವಾದ ಗ್ರಂಥವೊಂದನ್ನು ಬರೆಯಲು ನಿಶ್ಚಯಿಸಿ, ಮತ್ತಷ್ಟು ಆಳವಾದ ಅಭ್ಯಾಸಕ್ಕೆ ತೊಡಗಿದೆ.

ಕನ್ನಡದಲ್ಲಿ• ಸಂಶೋಧನಾಕಾರ್ಯಕ್ಕೆ ಇರುವ ಎಡರುಗಳು

ಸೂರಾರು. ಮುಖ್ಯವಾಗಿ ಹೆಚ್ಚು ಸಂಶೋಧನೆ ನಡೆದಿಲ್ಲ. ನಡೆದಿರುವಷ್ಟೂ ಅಚ್ಚಾಗಿ ಹೊರಬಂದಿಲ್ಲ; ಅಚ್ಚಾಗಿ ಹೊರಬಂದಿರುವ ಗ್ರಂಥಗಳೂ ಸುಲಭ ಲಭ್ಯವಲ್ಲ. ಇಂತಹ ಕೆಲಸಕ್ಕೆ ಅಗತ್ಯವಾದ ಶಾಸನ—ಸಂಕಲನಗಳು ಮತ್ತು ಇತರ ಕೃತಿಗಳು ಕೇವಲ ಕೆಲವರಿಗೆ ಮೀಸಲಾದ ಪುಸ್ತಕಭಂಡಾರಗಳಲ್ಲಿ ಅಡಕವಾಗಿ, ಮಾರಾಟಕ್ಕೆ ಸಿಗದ ಆ ಪುಸ್ತಕಗಳು ವಾಚನಕ್ಕೂ ದೊರೆಯುವುದು ದುಸ್ಸಾಧ್ಯವಾಗಿದೆ. ಇಂತಹ ಹೊತ್ತಿನಲ್ಲಿ, ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್‌ನ ಅಸಿಸ್ಟೆಂಟ್ ಡೈರೆಕ್ಟರ್‌ರವರಾದ ಶ್ರೀ ಹೆಚ್. ದೇವೀರಪ್ಪನವರು, ಆರ್ಕಿಯಾಲಾಜಿಕಲ್ ಡಿಪಾರ್ಟ್‌ಮೆಂಟ್‌ನ ಡೈರೆಕ್ಟರ್‌ರವರಾದ ಶ್ರೀ ಕೆ. ನಾರಾಯಣ ಅಯ್ಯಂಗಾರ್‌ರವರು, ಡಾ|| ಎಸ್. ಶ್ರೀಕಂಠಶಾಸ್ತ್ರಿಗಳು, ಎಂ. ಯಾಮುನಾಚಾರ್ಯರು, ಮಂಜೇಶ್ವರದ ಗೋವಿಂದಪೈಗಳು ನನಗೆ ಅಗತ್ಯವಾದ ಗ್ರಂಥಗಳನ್ನು, ಓರಿಯಂಟಲ್ ಲೈಬ್ರರಿ, ಆರ್ಕಿಯೋಲಾಜಿಕಲ್ ಶಾಖೆಯ ಪುಸ್ತಕ ಭಂಡಾರ, ವಿಶ್ವವಿದ್ಯಾನಿಲಯದ ಪುಸ್ತಕ ಭಂಡಾರ, ತಮ್ಮ ಖಾಸಗಿ ಗ್ರಂಥಸಂಗ್ರಹಗಳಿಂದ ತರಿಸಿಕೊಟ್ಟು ನನಗೆ ಮಹೋಪಕಾರಮಾಡಿದಾರೆ. ಸಂಸ್ಕೃತ ಮತ್ತು ಇತರ ಭಾಷೆಗಳಲ್ಲಿದ್ದ ಶಾಸನಗಳನ್ನು, ಗ್ರಂಥಗಳನ್ನು ಓದಿ ಅರ್ಥಮಾಡಿಕೊಳ್ಳಲು, ಯಾವ ಶ್ರಮವನ್ನೂ ಲೆಕ್ಕಿಸದೆ ನೆರವಾಗಿದಾರೆ. ಅವರ ಉಪಕಾರಕ್ಕೆ ನಾನು ಎಷ್ಟು ಕೃತಜ್ಞತೆ ಸೂಚಿಸಿದರೂ ಸಾಲದು. ಅಂಥ ಉದಾರಿ ಸಹೃದಯರ ನೆರವಿಲ್ಲದಿದ್ದರೆ ನನ್ನ ಬಯಕೆ ಬಯಕೆಯಾಗಿಯೇ ಉಳಿಯುತಿದ್ದುದರಲ್ಲಿ ಸಂದೇಹವಿಲ್ಲ. ಅವರೆಲ್ಲರಿಗೂ ನನ್ನ ಕೃತಜ್ಞತಾಪೂರ್ವಕವಾದ ನೆನಕೆಗಳು.

ನಾನು ನೃಪತುಂಗ ಚಕ್ರವರ್ತಿಯ ಬಗ್ಗೆ ಕೆಲಸಮಾಡುತ್ತಿರುವುದನ್ನು ನನ್ನ ಮಿತ್ರರಿಂದ ಅರಿತು, ಆ ಬಗ್ಗೆ ಪ್ರಸಾರ ನಾಟಕವೊಂದನ್ನು ಬರೆಯಲು ಪ್ರೇರೇಪಿಸಿ, ಒತ್ತಾಯಮಾಡಿ ಬರೆಯಿಸಿ, ನನ್ನ ಸಂಶೋಧನೆಗಳಿಗೆ ಒಂದು ಖಚಿತವಾದ ಸ್ವರೂಪ ಬರಲು ನೆರವಾದವರು 'ಆಕಾಶವಾಣಿ'ಯ ಪ್ರೋಗ್ರಾಂ—ಚೀಫ್‌ರಾದ ಮಿತ್ರ ಶ್ರೀ ಎಸ್. ಎನ್. ಶಿವಸ್ವಾಮಿಯವರು. 'ಆಕಾಶವಾಣಿ'ಯಿಂದ ಪ್ರಸಾರವಾದ ಆ ನಾಟಕ ಬಹು

ಜನರ ಮೆಚ್ಚುಗೆಗೆ ಪಾತ್ರವಾಗಿ, ಅದನ್ನೇ ವಸ್ತುವಾಗಿಟ್ಟುಕೊಂಡು ಕಾದಂಬರಿಯನ್ನು ಬರೆಯಬೇಕೆಂಬ ಒತ್ತಾಯ ಹಲವಾರು ಕಡೆಗಳಿಂದ ಬಂತು. ಆ ಮಟ್ಟಿಗೆ ಈ ವಸ್ತುವನ್ನು ಜನಪ್ರಿಯವಾಗಿ ಮಾಡಿದುದಕ್ಕಾಗಿ ಆಕಾಶವಾಣಿಯ ನಾಟಕ ಶಾಖೆಯ ಶ್ರೀಮತಿ ರಾಜಮ್ಮ ಕಲ್ಲೋಳಿ ಮಠರವರಿಗೂ ಇತರ ಕಲಾವಿದರಿಗೂ ನನ್ನ ಕೃತಜ್ಞತೆಗಳು.

ಅಂತೂ ಆ ವಿಷಯದ ಬಗ್ಗೆ ಕಾದಂಬರಿ ಬರೆಯಬೇಕು ಎಂತಲೇ ಕಾಲಹಾಕುತಿದ್ದ ನನ್ನನ್ನು, ತಮ್ಮ ಸ್ನೇಹದ ಬಲುಮೆಯಿಂದ ಕಟ್ಟಿಹಾಕಿ ಕೂಡಿಸಿ ಬರೆಸಿದವರು ನನ್ನ ಆಪ್ತ ಮಿತ್ರರಾದ ಶ್ರೀಗಳಾದ ಹೆಚ್. ದೇವೀರಪ್ಪ ಮತ್ತು 'ಚದುರಂಗ'ರು. ಅವರ ಸ್ನೇಹಮೂಲವಾದ ಪ್ರಯತ್ನಫಲ ಇಂದು ಕಾದಂಬರೀರೂಪವಾಗಿ ಕನ್ನಡಿಗರ ಮುಂದಿದೆ.

ಈ ಕಾದಂಬರಿಯ ಬಗ್ಗೆ ಎರಡು ಮಾತುಗಳನ್ನು ಹೇಳುವುದು ಅಗತ್ಯವಾಗಿದೆ.

ನೃಪತುಂಗ ಚಕ್ರವರ್ತಿಯ ಜೀವನದ ಬಗ್ಗೆ ವಿವಾದಾಸ್ಪದವಾದ ಹಲವು ಅಂಶಗಳಿವೆ. ಕವಿರಾಜಮಾರ್ಗ್ಗ ಆತನು ಬರೆದುದೇ ಅಲ್ಲವೇ; ಆತ ಜೈನಮತಾನುಯಾಯಿಯೋ ಅಲ್ಲವೇ; ಆತನು ಸಿಂಹಾಸನಕ್ಕೆ ಬಂದ ವರ್ಷಯಾವುದು; ಆತನು ಬರೆದನೆಂದು ಹೇಳಲಾದ 'ಪ್ರಶ್ನೋತ್ತರ ರತ್ನಮಾಲಿಕಾ' ನೃಪತುಂಗ ಕೃತವೇ ಅಲ್ಲವೇ; ರಾಜಕುಮಾರ ಕೃಷ್ಣ ದೊಂಬಿ ಎದ್ದುದಕ್ಕೆ ನಿಜವಾದ ಕಾರಣವೇನು; ಕರವೀರಪುರದಲ್ಲಿ ಆತನ ಅಂಗುಲಿದಾನಕ್ಕೆ ಕಾರಣವಾದ ಘೋರವಿಪತ್ತು ಯಾವುದು; ನೃಪತುಂಗ ಚಕ್ರವರ್ತಿ ರಾಜ್ಯತ್ಯಾಗ ಮಾಡಿದನೇ ಇಲ್ಲವೇ, ಮಾಡಿದ್ದರೆ ಯಾವ ವರ್ಷ; ಆತ ತನ್ನ ದಾಯಾದಿಗಳಾದ ಗುಜರಾತಿನ ರಾಷ್ಟ್ರಕೂಟರಮೇಲೆ ಯುದ್ಧ ಮಾಡಿದನೇ ಇಲ್ಲವೇ; ಆತನಿಗೆ ನಮಗೆ ಖಚಿತವಾಗಿ ತಿಳಿದು ಬರುವಂತೆ ಶಂಖಾದೇವಿ, ಚಂದ್ರೋಬ್ಬಲಬ್ಬಾ ದೇವಿ, ಕೃಷ್ಣ ಇವರೇ ಅಲ್ಲದೆ, ದುದ್ದಯ್ಯ ರೇವಕನಿಮ್ಮಡಿ ಎಂಬ ಮಕ್ಕಳೂ ಇದ್ದರೇ–ಹೀಗೇ ಇನ್ನೂ ಹತ್ತಾರು ವಿವಾದಾಸ್ಪದವಾದ ವಿಷಯಗಳಿದ್ದು, ಆ ಬಗ್ಗೆ ಇನ್ನೂ ಪಂಡಿತರಲ್ಲಿ ಜಿಜ್ಞಾಸೆ ನಡದೇ ಇದೆ. ಇಂಥ ವಿವಾದಾಸ್ಪದವಾದ ವಿಷಯಗಳನ್ನು, ಕಾದಂಬರಿಗೆ ಆಗತ್ಯವಲ್ಲವೆಂದು ಬಿಟ್ಟುಕೊಟ್ಟು, ಅವನ್ನು ನನ್ನ ಸಂಶೋ-

ಧನಾತ್ಮಕವಾದ ಗ್ರಂಥದಲ್ಲಿ ಚರ್ಚೆಗೆಂದು ಉಳಿಸಿಕೊಂಡು, ಆದಷ್ಟು ಮಟ್ಟಿಗೆ ವಿವಾದಾಸ್ಪದವಲ್ಲವಾದ ವಿಷಯಗಳನ್ನು ಮಾತ್ರ ಕಾದಂಬರೀ ರಚನೆಯಲ್ಲಿ ಬಳಸಿಕೊಂಡಿದೇನೆ.

ಈ ಕೃತಿಯನ್ನು ಬರೆವಾಗ ಒಂದು ತಪ್ಪಾಗಿದೆ. ಗಂಗದೊರೆ ನೀತಿ ಮಾರ್ಗ್ಗನ ಹೆಸರನ್ನು ಬರೆವಾಗ, ಗಂಗದೊರೆಗಳ ಸಾಮಾನ್ಯ ಹೆಸರಾದ ನೀತಿಮಾರ್ಗ್ಗ ಎಂಬುದರ ಜೊತೆಯಲ್ಲಿ, ಆತನ ವಿಶಿಷ್ಟ ನಾಮವಾದ ಎರೆ ಗಂಗ ಎಂಬುವುದನ್ನು ಸೂಚಿಸಬೇಕಾಗಿತ್ತು. ಏನೋ ಕಣ್ತಪ್ಪಿನಿಂದ, ಕೈಯ್ತಪ್ಪಿನಿಂದ ಅದು ಬಿಟ್ಟುಹೋಗಿದೆ. ಈ ಅಪರಾಧವನ್ನು ವಿಮರ್ಶ ಕರು ಮನ್ನಿಸಬೇಕು.

ಕಾದಂಬರೀ ರಚನೆಯಲ್ಲಿ ಅಲ್ಲಲ್ಲಿ, ಅನಿವಾರ್ಯವಾಗಿ, ಆಧಾರ ದೊರಕದಿದ್ದ ಕಡೆ ಊಹೆಯಿಂದ ಚಿತ್ರವನ್ನು ತುಂಬಬೇಕಾಗಿ ಬಂದರೂ, ಅಲ್ಲೂ, ದೊರಕಿರುವ ಶಾಸನ ಸಾಕ್ಷ್ಯಕ್ಕೆ ಎಲ್ಲೂ ವಿರೋಧ ಬರದ ರೀತಿ ಯಲ್ಲಿ, ಆದಷ್ಟು ಮಟ್ಟಿಗೆ ಅವುಗಳಿಗೆ ಪೋಷಕವಾಗುವಂತಹ ರೀತಿಯಲ್ಲಿ ಚಿತ್ರವನ್ನು ಪೂರ್ಣಗೊಳಿಸಿದೇನೆ. ರಾಣಿ ಲಕ್ಷ್ಮಿ, ಉಜ್ವಲಾದೇವಿ, ಖಾಜಿ ಸೈಯದ್ ಇಮಾಂ, ವಿಜಯಾದಿತ್ಯ, ಜಯಂತಿ—ಇವಿಷ್ಟೇ ನನ್ನ ಊಹಾ ಚಿತ್ರಗಳು. ಉಳಿದವೆಲ್ಲವೂ ಶಾಸನಗಳಲ್ಲಿ, ಸಮಕಾಲೀನ ಸಾಹಿತ್ಯದಲ್ಲಿ ಕಂಡುಬರುವ ಪಾತ್ರಗಳೇ. ಅನಗತ್ಯವಾಗಿ ಎಲ್ಲೂ ಊಹಾಚಿತ್ರಗಳ ನ್ನಾಗಲೀ, ಪ್ರಸಂಗಗಳನ್ನಾಗಲೀ ಹೆಣೆಯಲು ಪ್ರಯತ್ನಿಸಿಲ್ಲ. ನನ್ನ ಮೂಲಪಾತ್ರಕ್ಕೆ ಕೊಂಚ ಕುಂದುಕ ತರುವ, ಚಕ್ರವರ್ತಿಗಳು ಮಗ ನನ್ನು ಕ್ಷಮಿಸುವ ಸಂದರ್ಭವನ್ನು ಇತಿಹಾಸಕ್ಕೆ ಆಳಾಗಿ ಚಿತ್ರಿಸಿದೇನೆ.

ಈ ಕಾದಂಬರಿಯನ್ನು ನಾನು ಬರೆಯಲು ಬಂಕೇಶನ ಕೊಣ್ಣೂರು ಶಾಸನ, ಅಮೋಘವರ್ಷನ ಸಂಜಾನ್ ಶಾಸನ, ನೃಪತುಂಗವರ್ಮನ ಬಾಹೂರು ಶಾನ, ಇಮ್ಮಡಿ ಅಮ್ಮನ ಮುಖಾಸಾ ದಾನಶಾಸನ ಮೊದ ಲಾದ ಶಾಸನಗಳೂ, ಜಿನಸೇನಾಚಾರ್ಯರ 'ಪೂರ್ವಪುರಾಣ'ವೂ ಸಾಮ ಗ್ರಿಯನ್ನು ಒದಗಿಸಿವೆ. 'ಪೂರ್ವಪುರಾಣ'ಕ್ಕಂತೂ ನಾನು ತುಂಬಾ ಋಣಿಯಾಗಿರುವುದು ಆ ಪುರಾಣ ಕಾವ್ಯವನ್ನು ಓದಿದವರೆಲ್ಲರಿಗೂ ಮನ ವರಿಕೆಯಾಗುತ್ತದೆ. ಇವುಗಳಿಂದ ತೆಗೆದುಕೊಂಡ ಮೂಲವಸ್ತುವಿಗೆ

ಶಾಸನ ಸಂಗ್ರಹಗಳಲ್ಲಿಯ ನೂರಾರು ಶಾಸನಗಳಿಂದ ಪೋಷಕ ಸಾಮಗ್ರಿಯನ್ನು ಆಯ್ದುಕೊಂಡಿದೇನೆ.

ಈ ಎಲ್ಲ ವಸ್ತುಗಳ ಆಧಾರದಮೇಲೆ, ಕನ್ನಡನಾಡಿನ ಆದರ್ಶದೊರೆ, ಆದರ್ಶ ತಂದೆ, ಆದರ್ಶಪತಿ—ಎಲ್ಲಕ್ಕಿಂತ ಹೆಚ್ಚಾಗಿ ಆದರ್ಶಮಾನವನೊಬ್ಬನ ಚಿತ್ರವನ್ನು, ನೃಪತುಂಗನ ಜೀವನದಲ್ಲಿ ಚಿತ್ರಿಸಲು ಈ ಕಾದಂಬರಿಯಲ್ಲಿ ಯತ್ನಿಸಿದೇನೆ. ಈ ಪ್ರಯತ್ನ ಎಷ್ಟು ಮಟ್ಟಿಗೆ ಸಫಲನಾಗಿದೆಯೆಂದು, ವಾಚಕರೂ, ಪಂಡಿತ—ವಿಮರ್ಶಕರೂ ಹೇಳಬೇಕು. ಕನ್ನಡ ಜನ ಈ ಕೃತಿಯನ್ನು ಓದಿ ಮೆಚ್ಚಿದರೆ ನನ್ನ ಶ್ರಮ ಸಾರ್ಥಕವಾಗುತ್ತದೆ.

ಈ ಕಾದಂಬರಿಯನ್ನು ಬರೆಯಲು ಪ್ರೇರೇಪಣೆ ನೀಡಿ, ಉದ್ದಕ್ಕೂ ಮಾರ್ಗದರ್ಶಿಗಳಾಗಿ, ಇತಿಹಾಸದ ಅಜ್ಞಾತವನದಲ್ಲಿ ಕೈಹಿಡಿದು ನಡೆಸಿದ ನನ್ನ ಪೂಜ್ಯಗುರುಗಳಾದ ಡಾ. ಎಸ್. ಶ್ರೀಕಂಠಶಾಸ್ತ್ರಿಗಳೇ, ಇದಕ್ಕೆ ಮುನ್ನುಡಿ ಬರೆದು ಆಶೀವಾದ ಮಾಡಿದಾರೆ.

ಆ ಹಿರಿಯರಿಗೂ, ಮತ್ತು ಈ ಕೃತಿಯನ್ನು ಅರ್ಪಿಸಿಕೊಳ್ಳಲು ಒಪ್ಪಿದ ರಾಷ್ಟ್ರಕವಿ ಎಂ. ಗೋವಿಂದಪೈಗಳಿಗೂ ನಾನು ಕೃತಜ್ಞ.

ಕಡೆಯದಾಗಿ—ಈ ಕಾದಂಬರಿಯನ್ನು ಪ್ರಕಟಿಸಿದ ಮೈಸೂರಿನ ಶ್ರೀ ಗೌರೀಶಂಕರ ಪುಸ್ತಕಾಲಯದ ಮಾಲೀಕರಾದ ... ಈಶ್ವರಪ್ಪನವರಿಗೂ, ಅನುಕೂಲವಾಗಿ ಮುದ್ರಿಸಿಕೊಟ್ಟ ಶ್ರೀ ಸೀತಾರಾಘವ ಮುದ್ರಣಾಲಯದ ಮಾಲೀಕರಾದ ಶ್ರೀ ಪಿ. ಆರ್ ಸೀತಾರಾಂರವರಿಗೂ ನನ್ನ ಕೃತಜ್ಞತೆ.

೨೭—೨-೫೩.
ಮೈಸೂರು.

ತ. ರಾ. ಸು.

ಯಾರ ಉನ್ನತ ಬಾಳು ಕಿರಿಸಾಹಿತಿಗಳ ಪಾಲಿಗೆ
ನಂದಾದೀಪದಂತೆ ಬೆಳಕಾಗಿದೆಯೋ,
ಯಾರ ಕನ್ನಡದ ಅಭಿಮಾನ, ಪಾಂಡಿತ್ಯ, ಸಂಶೋಧನಾಸಕ್ತಿ
ಎಳೆಯರಿಗೆ ನಿತ್ಯ ಸ್ಫೂರ್ತಿಯಾಗಿದೆಯೋ,
ಯಾರ ಮಮತೆಯ ಅಮೃತ ನುಡಿಯ ರಸಧಾರೆ
ನೂರು ಕಗ್ಗಲ್ಲಿನಲ್ಲಿ ಕುಸುಮವನ್ನು ಕೊನರಿಸಿದೆಯೋ
ಯಾರ ಬಾಳು ಜೀವಂತಕವಿತೆಯ ಅವತಾರವಾಗಿದೆಯೋ
ಆ "ರಾಷ್ಟ್ರಕವಿ"
**ಮಂಜೇಶ್ವರದ ಗೋವಿಂದ ಪೈಗಳಿಗೆ**
ಕಿರಿಯನ ಒಲವಿನ ಕಾಣಿಕೆ.

# ನೃಪತುಂಗ

## ೧

ಎಲ್ಲೆಡೆಯಲ್ಲೂ ಆನಂದವೇ ಆನಂದ !

ಅರಮನೆ, ರಾಜಧಾನಿಯಲ್ಲಷ್ಟೇ ಅಲ್ಲ ದೇಶಕ್ಕೆದೇಶವೇಸಂತೋಷ ಸಾಗರದ ಹೆದ್ದೆರೆಗಳ ತೊಟ್ಟಿಲಲ್ಲಿ ತೂಗುಯ್ಯಾಲೆಯಾಡುತ್ತಿದೆ. ದೇಶಕ್ಕೆದೇಶವೇ ಹರ್ಷದಿಂದ ಹಸೆ ಏರಲಿರುವ ವಧುವಿನಂತೆ ಸಿಂಗರಿಸಿಕೊಂಡು ನಲಿಯುತ್ತಿದೆ. ಎಲ್ಲರ ಮುಖಗಳೂ ಶರದ್ರಾತ್ರಿಯ ಬೆಳದಿಂಗಳು ತುಂಬಿದ ಮುಗಿಲಿನಂತೆ ಉಲ್ಲಾಸೋಜ್ವಲವಾಗಿವೆ.

ಸುಖವಾಗಲಿ ದುಃಖವಾಗಲಿ ಒಂಟಿಯಾಗಿ ಬರುವುದಿಲ್ಲ. ಇಲ್ಲದಾಗ ಇಲ್ಲ, ಬರುವಾಗ ಹಿಂಡುಹಿಂಡಾಗಿ, ಹುಣಿಮೆಯ ಮಧ್ಯರಾತ್ರಿ ಏರಿ ಏರಿ ಬರುವ ಕಡಲ ಅಲೆಗಳಂತೆ ಬರುತ್ತವೆ. ಈ ಮಾತು ಇಂದು ಕಾವೇರಿಯಿಂದ ಗೋದಾವರಿಯುವರೆಗೆ ವ್ಯಾಪಿಸಿದ ಕನ್ನಡ ಜನಪದದ ಜನಕ್ಕೆ, ಅಖಂಡ ರಾಷ್ಟ್ರಕೂಟ ಸಾಮ್ರಾಜ್ಯಕ್ಕೇ ಮನವರಿಕೆಯಾಗಿದೆ. ಅಷ್ಟೇಅಲ್ಲ, ಅಷ್ಟು ಅನಿರೀಕ್ಷಿತವಾಗಿ ಒದಗಿಬಂದ ಆ ಎರಡು ಹರ್ಷೋತ್ಸವಗಳಲ್ಲಿ ಯಾವುದಕ್ಕಾಗಿ ಜನ ಹೆಚ್ಚು ಆನಂದಪಡಬೇಕು ? ಎರಡಲ್ಲಿ ಯಾವುದು ಹೆಚ್ಚಿನದು ?

ವೆಂಗಿವಳ್ಳಿಯ ವಿಜಯುವೇ, ರಾಜಪುತ್ರನ ಜನನವೇ ?

ಎರಡೂ ಎಷ್ಟು ಅನಿರೀಕ್ಷಿತವೋ, ಅಷ್ಟೇ ಮಹದೋತ್ಸವದ ಘಟನೆಗಳು. ಆ ಎರಡು ಘಟನೆಗಳು ರಾಜ್ಯದ ಸಿಂಹಾಸನವನ್ನೇ ಕವಿದ ಇಬ್ಬಗೆಯ ಮಹಾಭೀತಿಗಳನ್ನು ನಿವಾರಣೆ ಮಾಡಿದ್ದವು.

ವೆಂಗಿವಳ್ಳಿಯ ವಿಜಯ ರಾಷ್ಟ್ರಕೂಟ ರಾಜ್ಯಕ್ಕೆ ನಿತ್ಯ ಭೀತಿಕಾರಣರಾಗಿದ್ದ ಪೂರ್ವಚಾಲುಕ್ಯರ ಮುಗ್ಗಲುಮುರಿದು, ಅವರು ಮತ್ತೆ ಮೇಲೇಳದಂತೆ, ಮಾನ್ಯಖೇಟದ ಮೇಲೆ ಕತ್ತಿ ಎತ್ತದಂತೆ ಮಾಡಿತ್ತು.

ಅಬ್ಬಾ ! ಈ ಮೂವತ್ತು ವರ್ಷಗಳಲ್ಲಿ ಎಷ್ಟು ಸೊಕ್ಕಿ ಮೆರೆದಿದ್ದರವರು. ಗೋವಿಂದ ಚಕ್ರವರ್ತಿಗಳ ಕಾಲದಲ್ಲಿ ಸೋತು, ಶರಣಾಗತನಾಗಿ ಅವರ ಶಿಬಿರದ ಕಸಗುಡಿಸಿದ ಆ ವಿಜಯಾದಿತ್ಯ, ತನ್ನ ಸೇನೆ

ಯೊಡನೆ ರಾಜಧಾನಿಯ ಕೋಟೆಯನ್ನು ಕಟ್ಟಿದ ಆ ವೆಂಗಿಯ ಕುನ್ನಿ, ಗೋವಿಂದ ಚಕ್ರವರ್ತಿಗಳು ಸ್ವರ್ಗಸ್ಥರಾದರೆಂದಕೂಡಲೇ ಬೆಕ್ಕು ಕಣ್ಣುಮರೆಯಾದ ಮನೆಯಲ್ಲಿ ಚಿನ್ನಾಟವಾಡುವ ಇಲಿಯಂತೆ, ಮತ್ತೆ ಮತ್ತೆ ರಾಜ್ಯದಮೇಲೆ ದಾಳಿಮಾಡಿದ್ದ. ಪ್ರಾಯಕ್ಕೆ ಬರದೆ, ಸಾಲ್ಕಾರು ಕಡೆಯ ತೊಂದರೆಯಿಂದ ತಲ್ಲಣಿಸುತ್ತಿದ್ದ ನೃಪತುಂಗ ಚಕ್ರವರ್ತಿಯ ಸಿಂಹಾಸನ ಏನಾಗುವುದೋ ಎನಿಸಿತ್ತು ಜನಕ್ಕೆ. ವಿಜಯಾದಿತ್ಯನು ಸತ್ತಾಗ, ಒಂದು ಗಳಿಗೆ ಇನ್ನು ಆ ಪೀಡೆ ತಪ್ಪಿತು ಎಂದುಕೊಂಡಿದ್ದರು. ಆದರೆ ವಿಜಯಾದಿತ್ಯನ ಬಳಿಕ ಪಟ್ಟಕ್ಕೆ ಬಂದ ವಿಷ್ಣುವರ್ಧನನಿಗೂ ಅದೇ ಸೊಕ್ಕೇ, ಈ ಬೆಂಕಿಯೊಡನೆ ಸರಸವಾಡುವ ಚಪಲವೇ ?

ದಾಳಿಮಾಡುವುದು–ಅದೂ ವೆಂಗಿವಳ್ಳಿಯ ಮೇಲೆ !

ವೆಂಗಿವಳ್ಳಿ ನೃಪತುಂಗ ಚಕ್ರವರ್ತಿಗಳು ಹುಟ್ಟಿದ ದಿನ, ಅವರ ಕ್ಷೇಮಕ್ಕಾಗಿ ನೋಂತು ತಲೆಗೊಟ್ಟ ವೇಳೆವಡಿಚನಿಗೆ ಗೋವಿಂದ ಚಕ್ರವರ್ತಿಗಳು ಮೆಚ್ಚುಗೊಟ್ಟ ವೀರಮಾನ್ಯ. ಎರಡು ರಾಜ್ಯಗಳ ಗಡಿಯಲ್ಲಿದ್ದ ಆ ಗ್ರಾಮದ ಮೇಲೇ ದಾಳಿಮಾಡಿದ್ದ ವಿಷ್ಣುವರ್ಧನ.

ಆ ಸುದ್ದಿ ಬಂದ ದಿನ ರಾಷ್ಟ್ರಕೂಟ ಸೇನೆ ಕೆಣಕಿದ ಕಾಳಸರ್ಪ ದಂತೆ ಕೆರಳಿತ್ತು. ಎಲ್ಲರ ಹೃದಯದಲ್ಲೂ ಪ್ರತೀಕಾರ ತೃಷೆಯ ಜ್ವಾಲಾ ಮುಖಿ ಆಸ್ಫೋಟನವಾಗಿತ್ತು. ಸೈನಿಕನಿರಲಿ, ಸಾಮಾನ್ಯ ಪ್ರಜೆಗಳೂ ಕತ್ತಿಗೆ ಕೈಚಾಚಿದ್ದರು. ದೇಶಕ್ಕೆದೇಶವೇ ಕೆಣಕಿದಾಗ ಸೆಟೆದು ನಿಲ್ಲುವ ಮುಳ್ಳುಹಂದಿಯ ಮೈಯ ಕೋಟಿ ಮುಳ್ಳುಗಳಂತೆ ಕೆದರಿ ನಿಂತಿತ್ತು–ಮೇಲೆ ಬೀಳಲು.

ಆ ಪ್ರಚಂಡ ಕ್ರೋಧೋದ್ವೇಗದ ಹೊತ್ತಿನಲ್ಲೂ ಜನರ ಹೃದಯ ದಲ್ಲೊಂದು ಸಣ್ಣ ಸಂಶಯದ ಸುಳಿಯಾಡುತ್ತಿತ್ತು. ಶಾಂತಿಪ್ರಿಯರಾದ, ಸ್ನೇಹಾಭಿಲಾಷಿಗಳಾದ ನೃಪತುಂಗ ಚಕ್ರವರ್ತಿಗಳು ಏನು ಮಾಡು ವರೋ, ಎಲ್ಲಿ ಕಗ್ಗೊಲೆಯ ಸಮರಕ್ಕೆ ಹೇಸಿ, ಸಂಧಾನದತ್ತ ಮನ ಮಾಡುವರೋ ಎಂದು. ಒಂದುಗಳಿಗೆ, ಒಂದೇ ಒಂದುಗಳಿಗೆ ಆ ಸಂಶಯ.

ಜಿನಸೇನಾಚಾರ್ಯರ ಶಿಷ್ಯರಾದ ನೃಪತುಂಗ ಚಕ್ರವರ್ತಿಗಳಿಗೆ

'ಅಹಿಂಸೆ ಸರ್ವಶ್ರೇಷ್ಠವಾದ ಧರ್ಮ' ಎಂದು ಮನವರಿಕೆಯಾಗಿತ್ತು. ಅಹಿಂಸೆಯ ಅಮೃತ ಅಸ್ತಿಭಾರದಮೇಲೆ ನಿರ್ಮಿತವಾದ ಜಿನಸಮಯ ದಲ್ಲಿ ದೊರೆಗಳಿಗೆ ಪರಮವಿಶ್ವಾಸ. ಆದರೆ ಆ ವಿಶ್ವಾಸದಲ್ಲಿ ಆಚಾ ರ್ಯರೇ ಬೋಧಿಸಿದ ರಾಜಧರ್ಮವೂ ಮರೆತಿರಲಿಲ್ಲ. ಜಿನಸೇನಾ ಚಾರ್ಯರೇ ತಮ್ಮ ಪ್ರಶಾಂತ, ಗಂಭೀರ, ಧೃಡವಾಣಿಯಲ್ಲಿ ಹೇಳಿದ್ದರು:

'ತಾವಾಗಿ ಯಾರೂ ಯುದ್ಧಕ್ಕೆ, ರಕ್ತಪಾತಕ್ಕೆ ಹಾತೊರೆಯ ಬಾರದು. ಅಂಥ ಅಧರ್ಮಯುದ್ಧ ಇಹಪರಗಳ ವೈರಿ. ಆದರೆ ಪ್ರಜಾ ಪಾಲನೆಗೆ ಅಗತ್ಯವಾದಾಗ ಯುದ್ಧಕ್ಕೆ ಹಿಂಜರಿಯುವ ಅರಸನನ್ನು ರಾಜ್ಯಲಕ್ಷ್ಮಿ ಹೇಸಿ ದೂರವಾಗುತ್ತಾಳೆ. ನಿಗ್ರಹಯೋಗ್ಯನಾದ ಶತ್ರು ವನ್ನಾಗಲಿ, ದುಷ್ಟಪುತ್ರನನ್ನಾಗಲಿ ಸಮಾಸವಾಗಿ ನಿಗ್ರಹಿಸಿ, ಪ್ರಜಾ ಪರಿಪಾಲನೆ ಮಾಡುವ ದೊರೆಯೇ ಸಮಂಜಸನು.'

ಆ ಮಾತನ್ನು ಚಕ್ರವರ್ತಿಗಳು ಮರೆತಿರಲಿಲ್ಲ. ಅಷ್ಟೇಅಲ್ಲ, ತಾವು ಹುಟ್ಟಿದಂದು ತಮ್ಮ ಕ್ಷೇಮಕ್ಕಾಗಿ, ನಿಷ್ಕಂಟಕ ದೀರ್ಘಾಯುಷ್ಯ ಕ್ಕಾಗಿ ತನ್ನ ತಲೆಗೊಟ್ಟ ಭಟನ ವಿಚಾರವೂ ಅವರಿಗೆ ನೆನಪಿತ್ತು. ಅವರ ತೊಟ್ಟಿಲಿಗೆ ಆ ವೀರಕಥೆ ಸಾರುವ ಚಿನ್ನದ ಹಲಗೆಯನ್ನು ಕಟ್ಟಿಸಿದ್ದರು ಗೋವಿಂದ ಚಕ್ರವರ್ತಿಗಳು. ಚಿಕ್ಕಂದಿನಲ್ಲಿ ಅವರ ತೊಟ್ಟಿಲ ಬಂಗಾ ರದ ಸರಪಳಿಯಮೇಲೆ ತೂಗಾಡಿದ ಆ ಸುವರ್ಣಫಲಕ, ಈಗ ಚಕ್ರ ವರ್ತಿಗಳ ಶಯ್ಯಾಗೃಹದಲ್ಲಿ, ಅವರು ಎದ್ದ ಕೂಡಲೇ ಕಾಣುವಂತೆ ಹೊಳೆಯುತ್ತಿದೆ-ಮಂಚದ ಇದಿರು, ದಿನದಿನವೂ ಹೇಳುತ್ತಾ—

'ನಿನಗಾಗಿ ಪ್ರಾಣತ್ಯಾಗಮಾಡಿದವರನ್ನು ಮರೆಯಬೇಡ. ಅರ ಸೊತ್ತಿಗೆ ನಿತ್ಯ ಸುಖಸಮಾರಾಧನೆಯ ಸುಪ್ಪತ್ತಿಗೆಯಲ್ಲ. ಪ್ರಜೆಗಳ, ವೀರಭಟರ ತ್ಯಾಗದ ಹಾಲಿನಿಂದ ಬೆಳೆದ ರಾಜಶರೀರ ಅವರ ಸೇವೆಗೆ ಮೀಸಲಾಗಬೇಕು. ರಾಜಮಕುಟ ಆ ಸೇವಾವ್ರತದ ರತ್ನ ಕಂಕಣ. ನಿತ್ಯ ನಿತ್ಯ ನೆನಪಿರಲಿ-ನಿನಗಾಗಿ ಒಬ್ಬನು ಜೀವವಿತ್ತ; ಅಖಂಡ ಪ್ರಜಾ ಕೋಟಿಗಾಗಿ ಸಮಯ ಬಂದಾಗ ಪ್ರಾಣಕೊಡಲು ನೀನು ಸಿದ್ಧವಿರು.'

ದಿನದಿನದ ಈ ಎಚ್ಚರಿಕೆಯನ್ನು, ಆ ಬಲಿದಾನವನ್ನು ಮರೆಯು ವುದು ಸಾಧ್ಯವೇ? ಅದು ಬರೀ ಎಚ್ಚರಿಕೆಯ ಮಾತಲ್ಲ; ಅಪ್ಪಣೆ.

ರಾಜ್ಯಸ್ವೀಕಾರ ಮಾಡಿದೆಂದು, ಅಗ್ನಿಸಾಕ್ಷಿಯಾಗಿ ಕೈಕೊಂಡ ಪ್ರತಿಜ್ಞೆ.

ನೃಪತುಂಗ ಚಕ್ರವರ್ತಿಗಳ ಈ ಪ್ರತಿಜ್ಞೆಯ ಬಲವನ್ನು ಪರೀಕ್ಷೆ ಮಾಡುವವನಂತೆ, ವೆಂಗಿಯ ವಿಷ್ಣುವರ್ಧನ ವೆಂಗಿವಳ್ಳಿಯ ಮೇಲೇ ದಾಳಿ ಮಾಡಿದ್ದ.

ಚಕ್ರವರ್ತಿಗಳು ವಿಷ್ಣುವರ್ಧನನ ಸಮರಾಹ್ವಾನವನ್ನು ಸ್ವೀಕರಿಸಿದ ರಷ್ಟೇ ಅಲ್ಲ, ತಾವೇ ರಣಭೂಮಿಯ ಪ್ರಯಾಣಕ್ಕೆ ಸಿದ್ಧವಾದರು. ಜನ ತಮ್ಮ ಅರಸನನ್ನು ಮೆಚ್ಚಿ 'ಉಘೇ ಉಘೇ' ಎಂದು ಜಯಘೋಷ ಮಾಡಿತು. ಸಮರಭೇರಿಗಳ ತಾಡನಧ್ವನಿಗಿಂತಲೂ ಪ್ರಚಂಡವಾಗಿತ್ತು ಜನತೆಯ ಜಯಘೋಷಧ್ವನಿ.

ರಾಷ್ಟ್ರಕೂಟ ರಾಜ್ಯದಮೇಲೆ ದಾಳಿಮಾಡಲು ಎದೆ ಮಾಡಿದ ಚಾಲುಕ್ಯರ ಮರ್ಧನಕ್ಕೆ ಚಕ್ರವರ್ತಿಗಳೇ ಸಿದ್ಧರಾದುದು, ಸೇನೆಗೆ ಮತ್ತಷ್ಟು ಉತ್ಸಾಹಕ್ಕೆ ಕಾರಣವಾದರೂ, ಸಿಂಹಾಸನಕ್ಕೆ ಉತ್ತರಾಧಿ ಕಾರಿಯಾದ ಗಂಡುಸಂತಾನವಿಲ್ಲದ ದೊರೆಗಳು ರಣರಂಗ ಪ್ರಯಾಣ ಮಾಡುವುದು ಸಚಿವಮಂಡಲಿಗೆ ಸರಿದೋರಲಿಲ್ಲ. ಸಮರಭಾರಹೊತ್ತ ಸೇನಾಧಿಪತಿಗಳೂ ಬೇಡವೆಂದರು. ಗರ್ಭಿಣಿಯಾದ ರಾಣಿ, ನೇರವಾಗಿ ಹೇಳಲು ಸಾಧ್ಯವಿಲ್ಲದೆ, ಕಂಬನಿದುಂಬಿದ ಕಣ್ಣುಗಳಿಂದ 'ನನಗಾಗಿ ಹೋಗಬೇಡಿ' ಎಂಬಂತೆ ಬೇಡಿಕೆಯ ನೋಟ ಬೀರಿದರು. ಏನಾದರೂ ಚಕ್ರವರ್ತಿಗಳ ನಿರ್ಧಾರ ಕದಲಲಿಲ್ಲ.

ಅಂದು, ಸ್ವಯಂ ಚಕ್ರವರ್ತಿಗಳೇ ಸೇನಾಧಿಪತ್ಯ ಸ್ವೀಕಾರಮಾಡಿ ದೆಂದು ಆಡಿದ ಮಾತು ಮಾನ್ಯಖೇಟದ ಪ್ರಜೆಗಳೊಬ್ಬೊಬ್ಬರ ಹೃದಯ ದಲ್ಲೂ ಶಿಲಾಶಾಸನಾಕ್ಷರದಂತೆ ಸ್ಥಿರವಾಗಿತ್ತು.

ಚಕ್ರವರ್ತಿಗಳು ಹೇಳಿದ್ದರು—

"ನಾವು ಸೇನಾಧಿಪತ್ಯ ವಹಿಸಬಾರದೆಂದೇ ನಿಮ್ಮೆಲ್ಲರ ಅಭಿ ಪ್ರಾಯ. ನಮ್ಮಮೇಲಿನ ಅನಂತ ಪ್ರೀತಿ, ರಾಷ್ಟ್ರಕೂಟ ಸಿಂಹಾಸನದ ಬಗ್ಗೆ ನಿಮಗಿರುವ ಅಪಾರ ಶ್ರದ್ಧೆ ನಿಮ್ಮಿಂದ ಆ ಮಾತನ್ನಾಡಿಸಿದ. ನಿಮ್ಮ ದೊರೆ ಕ್ಷೇಮವಾಗಿರಬೇಕು; ಸುಖವಾಗಿರಬೇಕು; ಕಷ್ಟದೆ -ಕಿಡಿ ಸೋಕಿ ನಮ್ಮ ಕೂದಲೂ ಕೊಂಕಬಾರದೆಂಬಷ್ಟು ಪ್ರೇಮ ನಮ್ಮಲ್ಲಿ

ನಿಮಗೆ. ಎಂತಲೇ ಆ ಪ್ರೀತಿಯ ಮಾತನ್ನು ಅಭಿಪ್ರಾಯರೂಪದಲ್ಲಿ ವ್ಯಕ್ತ ಪಡಿಸಿದ್ದೀರ. ಅದಕ್ಕೆ ನಾವು ಸದಾ ಕೃತಜ್ಞರಾಗಿದೇವೆ.

"ನೀವು ಅಭಿಪ್ರಾಯವೆಂದು ಸೂಚಿಸಿದುದು ನಮಗೆ ಬರೀ ಅಭಿಪ್ರಾಯವಲ್ಲ, ಅಪ್ಪಣೆ; ನಿಮ್ಮ ಅಪ್ಪಣೆ ನಮಗೆ ಸರ್ವಥಾಮಾನ್ಯ. ಅದಕ್ಕೆ ಇದಿರಾಡುವ ಅಧಿಕಾರ ನಮಗಿಲ್ಲ.

"ಆದರೂ ನಾವು ಆಡುವ ಮಾತನ್ನು ತಾವು ಕೇಳಬೇಕು. ನಿಮ್ಮೆಲ್ಲರ ಚಕ್ರವರ್ತಿಯಂತೆ ನಾವೀಮಾತನ್ನು ಆಡುತ್ತಿಲ್ಲ. ನಿಮ್ಮಂತೆಯೇ ಪವಿತ್ರವಾದ ಈ ರಾಷ್ಟ್ರಕೂಟ ಸಿಂಹಾಸನದ ಊಳಿಗ ಮಾಡುವ ಹೊಣೆ ಹೊತ್ತ ಸೇವಕರಾಗಿ ಹೇಳುತ್ತೇವೆ. ಈ ಸಿಂಹಾಸನ, ಗರುಡಲಾಂಛನದ ಧ್ವಜಗಳ ಮಾನರಕ್ಷಣೆಯಲ್ಲಿ ನಿಮ್ಮಂತೆ ನಮಗೂ ಪಾಲಿದೆ. ನಿಮ್ಮ ಕರ್ತವ್ಯವನ್ನು ನೀವು ಪಾಲಿಸುವಂತೆ ನಮ್ಮ ಕರ್ತವ್ಯವನ್ನು ಪಾಲಿಸಲು ನಮಗೂ ಅವಕಾಶಕೊಡಿ. ಸುಖ ಬಂದಾಗ, ಸಾಮ್ರಾಜ್ಯ ಕೊಡುವ ಸುಖವನ್ನು ನಿಮ್ಮೊಂದಿಗೆ ಅನುಭವಿಸಿದೆ; ಸಮರ ಭೂಮಿಯ ಸುಖದಲ್ಲೂ ನಮಗೆ ಪಾಲು ಕೊಡಿ ಎಂದು ಕೇಳುತ್ತಿದ್ದೇವೆ.

"ಅಲ್ಲದೆ ಈ ಬಾರಿಯ ಸಮರ, ಉಳಿದ ಸಂಗ್ರಾಮಗಳಂತಲ್ಲ. ನಾವು ಜನ್ಮದಾಳಿದಂದು, ನಮ್ಮ ನಿತ್ಯಕ್ಷೇಮಕ್ಕಾಗಿ ಪ್ರಾಣಾರ್ಪಣೆ ಮಾಡಿದ ವೀರಭಟನಿಗೆ, ನಮ್ಮ ಪೂಜ್ಯ ಪಿತೃಪಾದರು ಮೆಚ್ಚುಗೊಟ್ಟ ವೀರಮಾನ್ಯದಮೇಲೆ, ರಕ್ತ ಕೊಡಿಗೆಯಮೇಲೆ ಇಂದು ದಾಳಿ ನಡೆದಿದೆ. ಪಿತೃಪಾದರು ಸಲಿಸಿದ ಆ ವೀರಭಟನ ಪರೋಕ್ಷವಿನಯದ ಭೂಮಿಯ ಮೇಲೆ ಶತ್ರುಪದಾಘಾತವಾಗಿದೆ. ಎಂತಲೇ, ಈ ಅಪಮಾನವನ್ನು ತೀರಿಸುವುದು ಉಳಿದೆಲ್ಲರಿಗಿಂತಲೂ ಹೆಚ್ಚಾಗಿ ನಮ್ಮ ಕರ್ತವ್ಯ; ಸ್ವರ್ಗದಲ್ಲಿರುವವರಿಗೆ ನಾವು ಸಲಿಸಬೇಕಾದ ಸೇವೆ. ಅದಕ್ಕಾಗಿ ತಮ್ಮಲ್ಲಿ ಪ್ರಾರ್ಥಿಸುತ್ತೇವೆ-ಸೇನಾಧಿಪತ್ಯದ ಅನುಗ್ರಹಮಾಡಿ. ಸಿಂಹಾಸನದ ಮೇಲೆ ಎಂತೋ, ಸಂಗ್ರಾಮ ರಂಗದಲ್ಲೂ ಅಂತೇ ನಿಮ್ಮ ಪ್ರೀತಿ, ವಿಶ್ವಾಸಕ್ಕೆ ಪಾತ್ರರಾಗಲು ಅವಕಾಶಕೊಡಿ.

"ನಾವು ಸಮರಭೂಮಿಗೆ ತೆರಳಿದರೆ ಈ ಸಿಂಹಾಸನಕ್ಕೆ ಮುಂದೆ ಯಾರು, ಮುಂದೆ ಈ ಸಿಂಹಾಸನದ ರಕ್ಷಣೆ ಹೇಗೆ ಎಂಬ ಪ್ರೇಮದ-

ಭೀತಿ ನಿಮ್ಮನ್ನು ಬಾಧಿಸುತ್ತಿದೆ. ನಿಮಗೆ ನಾವು ಆಶ್ವಾಸನೆ ಕೊಡುತ್ತೇವೆ: ಪ್ರಜಾಪ್ರೇಮ ಸಿಂಹಾಸನಕ್ಕೆ ಅಭೇದ್ಯವಾದ ವಜ್ರಕೋಟೆ. ಸಾಮ್ರಾಟರಿಂದ ಸಿಂಹಾಸಗಳು ಉಳಿಯುವುದಿಲ್ಲ, ಬೆಳೆಯುವುದಿಲ್ಲ. ಪ್ರಜಾಕೋಟಿಯ ಪ್ರೇಮಪೂರ್ಣನಿಷ್ಠೆಯೇ ಸಿಂಹಾಸನದ ರಕ್ಷಾದೇವತೆ. ಆ ರಕ್ಷಾದೇವತೆಯ ಕೃಪೆ ಈ ಸಿಂಹಾಸನಕ್ಕೆ ಸಂಪೂರ್ಣವಾಗಿದೆ. ಎಂತಲೇ ಆದರ ಕಾವಲಿಗೆ ರಾಜಗೃಹವನ್ನು ಒಪ್ಪಿಸಿ, ಕದನಕಳಕ್ಕೆ ನಡೆಯಲು ಅಪ್ಪಣೆ ಕೊಡಿ."

ಭದ್ರಾಸನದಿಂದ ಕೆಳಗಿಳಿದು ನಿಂತು, ಮೃದುಗಂಭೀರಧ್ವನಿಯಲ್ಲಿ ಚಕ್ರವರ್ತಿಗಳು ಆಡಿದ ಮಾತನ್ನುಕೇಳಿ, ಸಭೆಯ ಕಣ್ಣು ಪ್ರೇಮ ಭಾಷ್ಪದಿಂದ ಮಂಜಾಗಿತ್ತು. ಮಳೆಗಾಲದ ಮುಗಿಲ ಘೋಷದಂತಿತ್ತು ಸಭಿಕರಲ್ಲಿ ಮೂಡಿದ ಗದ್ಗದಕಂಠದ ಜಯಧ್ವನಿ. ಆ ಮಾತು ಕೇಳಿದ ಬಳಿಕ ಯಾರಿಗೂ ದೊರೆಗೆ ಬೇಡವೆನ್ನಲು ಮನಸಾಗಲಿಲ್ಲ. ನೃಪತುಂಗ ಚಕ್ರವರ್ತಿಗಳು ಸೇನಾಧಿಪತ್ಯದ ಅಭಿಷೇಕಸ್ನಾನಮಾಡಿ, ಆಧಿಪತ್ಯದ ವಸ್ತ್ರ ಧರಿಸಿ,ಅಧಿಕಾರದ ಆಯುಧ ಧರಿಸಿ, ಮೂಲಭಟರ ಕಾವಲುಪಡೆಯ ನಡುವೆ. ಉತ್ತಮ ಶ್ವೇತಾಶ್ವವನ್ನೇರಿ ನಡೆದರು—ಕೊಂಬು, ಕಹಳೆ, ಆನಕ, ಪಟಹ,ಢಕ್ಕೆ, ಶಂಖ, ಸಮರಭೇರಿ ಮೊದಲಾದ ರಣವಾದ್ಯಗಳು ಮುಗಿಲು ಮಾರ್ಮೊಳಗುವಂತೆ ಮೊಳಗುತ್ತಿರಲು ; ಪಾಳಿಧ್ವಜ ಸಮೂಹ, ಗಾಳಿಯಲ್ಲಿ ಉತ್ಸಾಹದಿಂದ ನರ್ತಿಸುತ್ತಿರಲು, ವೆಂಗಿವಳ್ಳಿಯತ್ತ.

ಖೇಡ, ಖರ್ವಟ, ಮಡಂಬ, ಪಟ್ಟಣ, ದ್ರೋಣಾಮುಖಗಳಿಂದ ಸಾಲುಸಾಲಾಗಿ ನಡೆಯಿತು-ಅರಶಿನ, ಕಾಡಿಗೆ ಧರಿಸಿ, ತಾಂಬೂಲದಿಂದ ಕೆಂಪಾದ ಬಾಯಿನ, ವಿಕಟ ಭಟವೇಷದ ಕನ್ನಡಿಗರ ಸೇನೆ, ಮದ್ಯಪಾನದಿಂದ ಉದ್ರೇಕಿತವಾದ ಮದಗಜಗಳ ಘೀಂಕಾರಕ್ಕೇ ಶತ್ರುವಿನ ಎದೆ ಬಿರಿಯುತ್ತಿಲು.

ನಿಂತಲ್ಲಿ ನಿಲ್ಲದೆ ಸಾಗಿದ, ಕೆಣಕಿದ ಜೇನುಪಡೆಯಂಥ ಕನ್ನಡ ಸೇನೆ, ವೆಂಗಿವಳ್ಳಿಯ ಬಯಲಲ್ಲಿ ಚಾಲುಕ್ಯ ಸೇನೆಯಮೇಲೆ ಎರಗಿತು, ಹಾವಿನಮೇಲೆ ಎರಗುವ ಗರುಡನಂತೆ. ರಾಷ್ಟ್ರಕೂಟ ಸೇನೆಯ ಸಿಡಿಲಾ

ಘಾತದಿದಿರು, ಚಾಲುಕ್ಯ ಸೇನೆ ತತ್ತರಿಸಿ, ಸತ್ತದೊರೆ ಕಲಿವಿಷ್ಣುವರ್ಧನ ನನ್ನು ಸಮರಭೂಮಿಯಲ್ಲೇ ಬಿಟ್ಟು, ಸಾಮಂತ ಪದವಿ ಸ್ವೀಕಾರಮಾಡಿ ಪಲಾಯನ ಮಾಡಿತು. ಮುಗಿಲಿನಂತೆ ಕವಿದು ಬಂದುದು ಇಬ್ಬನಿಯಂತೆ ಕರಗಿ ಹೋಯಿತು.

ಆ ಗೆಲುವಿನ ವಿಜಯೋತ್ಸವಕ್ಕಾಗಿ ರಾಜಧಾನಿ ಮಾನ್ಯಖೇಟ ಅಲಂಕೃತವಾಗುತ್ತಿರುವಾಗಲೇ, ಗೆದ್ದುಬಂದ ಪಡೆ ರಾಜಧಾನಿಯ ಹೆಬ್ಬಾಗಿಲನ್ನು ಪ್ರವೇಶಿಸುತ್ತಿರುವಾಗಲೇ, ಅವರನ್ನು ಎದುರುಗೊಂಡಿತು- ಚಕ್ರವರ್ತಿಗೆ ಪುತ್ರೋತ್ಸವವಾದ ಆನಂದವಾರ್ತೆ.

ವಿಜಯೋತ್ಸವ-ಪುತ್ರೋತ್ಸವ : ಬಂಗಾರದ ಹೂವಿಗೆ ಪರಿಮಳವೂ ಮೂಡಿದಂತಾಯಿತು. ರಾಜಧಾನಿಯ ಸಡಗರಕ್ಕೆ ಎಣೆಯೇ ಇಲ್ಲ ದಂತಾಯಿತು. ಹತ್ತು ದಿನಗಳ ಕಾಲ ನಿತ್ಯೋತ್ಸವ ; ಹನ್ನೊಂದನೆಯ ದಿನ ಮಹಾರಾಣಿಯವರಿಗೆ ಸೂತಿಕಾಸ್ನಾನವಾಗಿ, ಶೌಚನಿವಾರಣೆಯಾ ದಂದು ಪುತ್ರೋತ್ಸವ-ವಿಜಯೋತ್ಸಗಳೆರಡರ ಹಿಗ್ಗೂ ಸಂಗಮಿಸಿದ ಮಹಪೋತ್ಸವ.

ನಗರದ ರಾಜಬೀದಿಗಳಿಗೆ ಪನ್ನೀರು ತಳಿದು ಇಬ್ಬದಿಗೂ ಸಾಲು ಪುಷ್ಪಮಾಲೆಯ ಅಲಂಕಾರಮಾಡಿ, ಚೌಪಥ ಪ್ರದೇಶಗಳಲ್ಲಿ ಕೃಷ್ಣಾ ಗರು ಧೂಪದ ಕೊಡಗಳನ್ನಿಟ್ಟು ನಗರಲಕ್ಷ್ಮಿಗೆ ಪರಿಮಳಸ್ನಾನಮಾಡಿ ಸಿದರು. ಬೀದಿಬೀದಿಯೂ ನಾಟ್ಯಗೃಹವಾಯಿತು. ಎಲ್ಲೆಲ್ಲಿ ಹೋದರೂ ಆನಂದ ಭೇರಿಯ ತಾಡನದ ಮೃದುಮಾದಕಧ್ವನಿ, ಮಂಗಳವಾದ್ಯಸ್ವನ, ಮಂತ್ರಘೋಷ. ಮನೆಮನೆಯೂ ಸುಣ್ಣಬಣ್ಣದ ಕಾರಣೆಮಾಡಿಕೊಂಡು, ಹೂತೋರಣಗಳ ಅಲಂಕಾರ ತಳೆದು, ತಾವೇ ಅರಳಿದ ಹೂಗಳಂತೆ ಕಳಕಳಿಸುತ್ತಿವೆ. ಒಂದೊಂದು ಮನೆಯಮೇಲೂ ಹಾರುವ ಬಾವುಟ ಗಳು ನೀಲಿಯ ಬಾನಿನಲ್ಲಿ ರೆಕ್ಕೆಬಡಿದು ಹಕ್ಕಿಗಳಂತೆ ಶೋಭಿಸಿದವು. ಮನೆ, ದೇವಾಲಯ, ಅಂಗಡಿ ಒಂದೊಂದರ ಮುಂದೂ ಕಟ್ಟಿದ ದಟ್ಟವಾದ ಪತ್ರಾಲಂಕಾರದಿಂದ, ಅರಸುಕುಮಾರನ ಜನ್ಮೋತ್ಸವದಲ್ಲಿ ಭಾಗ ವಹಿಸಲು ವನವೇ ನಗರಕ್ಕೆ ಆಗಮಿಸಿದಂತಿದೆ. ಪನ್ನೀರಿನ ಸ್ನಾನದಿಂದ ಧೂಳಡಗಿದ ಬೀದಿ, ಬಣ್ಣಬಣ್ಣದ, ಹಿಟ್ಟಿನ ಚಿತ್ರವಿಚಿತ್ರವಾದ ನೂರಾರು

ಬಗೆಯ ರಂಗವಲ್ಲಿಯ ಚಿತ್ರಗಳಿಂದ ಚೆಲುವಾಗಿ, ನೆಲದಮೇಲೆ ಕಾಲಿಡಲು ಮನಸು ಬಾರದಂತಿದೆ. ವಿಶಾಲವಾದ ಪತ್ರ, ಪುಷ್ಪ, ಧ್ವಜಾಲಂಕೃತ ವಾದ, ಚಲಿಸುವ ರಂಗಮಂಟಪಗಳಲ್ಲಿ ನರ್ತಿಸುವ ಕಮನೀಯ ದೇಹ ಲಾವಣ್ಯದ ನಾನಾ ದೇಶದ ಗಣಿಕಯುವತಿಯರ ನೃತ್ಯಕ್ಕೆ ನುಡಿಯುವ ಹಿಮ್ಮೇಳವಾದ್ಯಧ್ವನಿ ನಗರವನ್ನೇ ರಂಗಮಂಟಪವಾಗಿ ಮಾಡಿದೆ. ಅಲ್ಲಲ್ಲಿ ದೊಂಬರಗಣೆಯಾಟ, ಸೂತ್ರಗೊಂಬೆಯಾಟಗಳು ನಡೆಯುತ್ತಿವೆ. ದೇಶದ ಹತ್ತಾರು ಭಾಗಗಳಿಂದ ಬಂದ ಬಗೆಬಗೆಯ ವಸ್ತ್ರಧರಿಸಿದ ಜನ ಸಮೂಹ, ಉತ್ಸವದ ಉತ್ಸಾಹದಲ್ಲಿ ದಾರಿಗಾಣದಂತೆ ಸುತ್ತುತ್ತಿದೆ, ಕೋಲಾಟವಾಡುವವರ, ಇಂದ್ರಜಾಲ ಮಾಡುವವರ ಸುತ್ತಮುತ್ತ.

ಒಂದುಕಡೆ ಈ ಆಕರ್ಷಣೆಯಾದರೆ ಇನ್ನೊಂದುಕಡೆ ರಾಜಬೀದಿ ಗಳಲ್ಲಿ ದೊರೆಗೆ ಕಾಣಿಕೆಯೊಪ್ಪಿಸಲು, ಸಕಲ ರಾಜಮರ್ಯಾದೆ ಗಳೊಡನೆ ಗಳಿಗೆಗೊಬ್ಬರಂತೆ ಬರುತ್ತಿರುವ ನೂರಾರು ಜನ ಮಾಂಡ ಲಿಕ, ಮಹಾಮಾಂಡಲಿಕ, ಸಾಮಂತ, ಮಹಾಸಾಮಂತ, ವಿಷಯಪತಿ, ಗ್ರಾಮಪತಿ, ಶ್ರೇಣಿಪತಿ, ಮಹತ್ತರರ ಪರಿವಾರ, ಸೇನೆಗಳು ನೋಡುವ ಕಣ್ಣನ್ನು ಕದಲದಂತೆ ಸೆರೆಹಿಡಿಯುತ್ತವೆ. ಗೆಜ್ಜೆಕಟ್ಟಿದ ಕಾಲಿನ ಕುಣಿಯುವ ಕುದುರೆಗಳು; ವೃತ್ತಾಕಾರವಾಗಿ ಸುತ್ತುತ್ತಾ ಘೀಳಿಟ್ಟು, ಮಾವಟಿಗನಿತ್ತ ಹೂವನ್ನು ಮುಗಿಲಿಗೆ ತೂರುತ್ತಾ ನಡೆಯುವ ಆನೆ ಗಳು; ಆನೆ, ಕುದುರೆಗಳ ಮೇಲೆ ವಿಚಿತ್ರರೀತಿಯ ಕಸರತ್ತುಮಾಡಿ ಜನಮನವನ್ನು ನಲಿಸುವ ತುರುಗವೆಡಂಗ, ಗಜವೆಡಂಗರ ಪಡೆಗಳು; ನಡೆನಡೆಯುತ್ತಲೇ ಖಡ್ಗಯುದ್ಧದ ಚಾತುರಿ ಮೆರೆವ ಇರಿವಬೆಡಂಗರು; ಒಂಟೆ, ಹೇಸರುಗತ್ತೆಗಳು ಕಟ್ಟಿದ ಸುಂದರರಥಗಳಲ್ಲಿ ಬಿರುದುಗಳನ್ನು, ಜಯಗೀತೆಗಳನ್ನು ಹಾಡುತ್ತಾ ಕುಳಿತ ವೇಶ್ಯೆಯರು, ವಂಧಿಮಾಗಧರು; ಬಿಸಲಿನಲ್ಲಿ ಬಿಸಲಿನಮರಿಯಾಗಿ ಥಳಥಳಿಸುವ ಮಕರತೋರಣದ ಸಾಲುಗಳು, ಛತ್ರಚಾಮರಗಳು, ಒಬ್ಬೊಬ್ಬರಿಗೆ ವಿಶಿಷ್ಟವಾದ ಬಿರುದಿನ ವಾದ್ಯಗಳು, ಬಿರುದಿನ ಉಡುಗೆ ತೊಡಗೆಗಳು—ನೋಡುವ ಕಣ್ಣಿಗಾಗಲಿ, ಕೇಳುವ ಕಿವಿಗಾಗಲಿ ಬಿಡುವೇ ಇಲ್ಲ.

ಅರಮನೆಯಂತೂ ಆನಂದದಲ್ಲಿ ಅರಳಿದ ಸ್ವರ್ಗಸುಮವಾಗಿದೆ.

ವಸಂತಕಾಲದಲ್ಲಿ ಮಲ್ಲಿಗೆಯುಬನದಲ್ಲಿ ಝೇಂಕರಿಸುತ್ತಾ ತುಂಬಿದ ದುಂಬಿಗಳಂತಿದ್ದಾರೆ, ಅರಮನೆಯ ಪರಿಜನ.

ಎಲ್ಲರಿಗೂ ಉತ್ಸಾಹ, ಎಲ್ಲೆಲ್ಲೂ ನಗೆಯ ಕೋಲಾಹಲ, ಬಿಡುವಿಲ್ಲದ ಸಡಗರ.

೨

ಈ ಸಾರ್ವತ್ರಿಕ ಸಮ್ಮೋದದನಡುವೆ ಗಂಭೀರವಾಗಿದ್ದ ಮೊಗ ಒಂದೇ-ಚಕ್ರವರ್ತಿ ಅಮೋಘವರ್ಷ ನೃಪತುಂಗ ದೇವನದು.

ಸಾಮಂತರು, ಮಾಂಡಲಿಕರು, ನಗರಮುಖ್ಯರು, ಆಪ್ತೇಷ್ಟರು ತಂದುಕೊಡುವ ಮೆಚ್ಚುಗಾಣಿಕೆಗಳನ್ನು ಸ್ವೀಕರಿಸುತ್ತಾ ಒಡ್ಡೋಲಗದಲ್ಲಿ ಕುಳಿತ ಚಕ್ರವರ್ತಿಗಳ ಮುಖ ಶಾಂತವಾಗಿದ್ದರೂ, ಪ್ರಸನ್ನವಾಗಿಲ್ಲ. ಮಧ್ಯಾಹ್ನದ ಬಿಸಲಿಗೆ ತೆಳುವಾದ ಸಣ್ಣಮೋಡ ಅಡ್ಡವಾದಂತೆ ಅರ್ಥವಾಗದ ಗಂಭೀರತೆಯ ಛಾಯೆ ಆ ವಿಶಾಲ ಸುಂದರ ರಾಜವದನವನ್ನು ಆಚ್ಛಾದಿಸಿರುವುದು ಎಲ್ಲರಿಗೂ ಕಾಣುವಂತಿದೆ. ಅದರಿಂದಾಗಿ ನೋಡುವವರ ಉತ್ಸಾಹಕ್ಕೂ ಕೊಂಚ ಉಸಿರು ತಡೆದಂತಾಗುತ್ತದೆ. ಎಲ್ಲರ ಹೃದಯದಲ್ಲೂ ಸಣ್ಣಕೊರಗು. ಹೀಗೇಕೆ? ಆದರೆ ಏಕೆಂದು ಕೇಳುವ ಧೈರ್ಯ ಮಾತ್ರ ಯಾರಿಗೂ ಇಲ್ಲ.

ಒಡ್ಡೋಲಗದಲ್ಲಿದ್ದಾಗಿನ ಗಂಭೀರತೆಯೇ, ಜನ್ಮೋತ್ಸವದ ನಿಮಿತ್ತ ಏರ್ಪಡಿಸಿದ ಆನಂದನಾಟ್ಯೋತ್ಸವದಲ್ಲಿ ಭಾಗವಹಿಸಿದಾಗಲೂ. ರಾತ್ರಿ ಗೋವಿಂದ ಚಕ್ರವರ್ತಿಗಳ ಸಾಲುವಿಜಯದ ಸ್ಮಾರಕವಾಗಿ ನಿರ್ಮಿಸಿದ ವಿಜಯೇಶ್ವರಾಲಯದಲ್ಲಿ, ನೃಪತುಂಗ ಚಕ್ರವರ್ತಿಗಳೇ ತಮ್ಮ ಗುರು ಜಿನಸೇನಾಚಾರ್ಯರಿಗೆಂದು ನಿರ್ಮಿಸಿದ ವೃಷಭತೀರ್ಥಂಕರರ ಬಸದಿಯಲ್ಲಿ ನಡೆದ ವಿಶೇಷಪೂಜೆಯ ಆರತಿ, ಪ್ರಸಾದ ಸ್ವೀಕರಿಸುವಾಗಲಂತೂ, ಚಕ್ರವರ್ತಿಯ ಮೊಗವನ್ನು ಕವಿದ ಗಂಭೀರತೆಯನ್ನು ತೂರಿಬಂದ ಏನೋ ಕಾತರಭಾವ ಕಣ್ಣಲ್ಲಿ ಹೊಳೆಯಿತು.

ಪ್ರಸಾದಸ್ವೀಕಾರ ಮಾಡಿದಬಳಿಕ ಚಕ್ರವರ್ತಿಗಳು 'ಪ್ರಭೋ, ನಿನ್ನ ದಯೆಯಿರಲಿ. ಕೈಬಿಡಬೇಡ' ಎಂದು ಬೇಡಿದಾಗ, ಇತರರಿಗೆ ಅರಿವಾಗದಿದ್ದರೂ, ಬಳಿಯಲ್ಲಿ ನಿಂತ ಮಹಾರಾಜ್ಞಿಗೆ ಅವರ ಮಾತಿನ

ಆಳದಲ್ಲೆಲ್ಲೋ ಕಂಬನಿಯ ಝರಿ ಜಿನುಗುತ್ತಿರುವುದು ಕೇಳಿಬಂದು ಆಶ್ಚರ್ಯವಾಯಿತು. ಆದರೆ ಸುತ್ತ ಕವಿದ ಪರಿವಾರದನಡುವೆ ಮಾತ ನಾಡಲಾಗಲಾರದೆ ಸುಮ್ಮನಾದರು.

ಪೂಜೆ ಮುಗಿಸಿಕೊಂಡು, ಅರಮನೆಗೆ ಹಿಂದಿರುಗಿದಮೇಲೂ ಅದೇ ಭಾವವೇ.

ಇರುಳು ಬಲಿತು, ಅರಮನೆಯನ್ನು ಆವರಿಸಿದ ಉತ್ಸವದ ಗದ್ದಲ ಶಾಂತವಾದ ಮೇಲೆ, ಅಂತಃಪುರದ ಏಕಾಂತತೆಯಲ್ಲಿಯಾದರೂ, ಚಕ್ರವರ್ತಿಯ ಮೊಗದಮೇಲೆ ಪ್ರಸನ್ನತೆ ಮೂಡಿ, ಆನಂದದ ಬೆಳಕು ಹೊಳೆಯಬಹುದೆಂದು ಭಾವಿಸಿದ್ದರು ಮಹಾರಾಣಿ ಲಕ್ಷ್ಮೀದೇವಿ.

ಗೆದ್ದು ಬಂದ ಪತಿಗೆ, ಬಹುದಿನ ಬಯಸಿ ಬೇಡಿದ ಪುತ್ರೋತ್ಸವದ ಮೆಚ್ಚುಗೊಟ್ಟು ನಲಿಯಬೇಕೆಂದಿದ್ದ ಮಹಾರಾಜ್ಞಿಯ ಹೃದಯ ಚಕ್ರವರ್ತಿಗಳ ಈ ಭಾವವೈಪರೀತ್ಯವನ್ನು ಕಂಡು ಖಿನ್ನವಾಯಿತು.

ಸಹಜವಾಗಿಯೂ ಚಕ್ರವರ್ತಿ ಗಂಭೀರಸ್ವಭಾವದವರು. ಬಾಲ್ಯದ ಸಾಲು ಸಂಕಷ್ಟ ಅವರ ಚಿತ್ತದ ಚಪಲತೆಯನ್ನು ತೊಡೆದು ಆಳವಾಗಿ ಮಾಡಿತ್ತು. ಕ್ರೋಧವಾಗಲಿ ನಗುವಾಗಲಿ, ಸ್ನೇಹವಾಗಲಿ ದ್ವೇಷವಾಗಲಿ, ಪ್ರೇಮವಾಗಲಿ ವಿರಸವಾಗಲಿ ಯಾವುದೂ ಮಿಂಚಿನಂತೆ ಚೆಲ್ಲುವುದಿಲ್ಲ. ಎಣ್ಣೆತುಂಬಿದ ದೀಪದ ಕುಡಿಬೆಳಕಿನಂತೆ ಸ್ಥಿರವಾಗಿ, ಉಗ್ರತೆಯಿಲ್ಲದೆ ಹೊಳೆಯುತ್ತದೆ–ಸಂಯಮದ ಹತೋಟಿಯಲ್ಲಿ.

ಗಂಡುಮಗುವಾಗಬೇಕು, ಮನೆಗೆ, ರಾಜ್ಯಕ್ಕೆ, ಮನಕ್ಕೆ ದಿಕ್ಕು ತೋರಿಸುವ ಧ್ರುವತಾರೆಯಂಥ ಪುತ್ರನಾಗಬೇಕು ಎಂಬ ಆಕಾಂಕ್ಷೆ ಚಕ್ರವರ್ತಿಗಳಲ್ಲಿ ಎಷ್ಟು ಪ್ರಬಲವಾಗಿತ್ತೆಂದು ಲಕ್ಷ್ಮೀದೇವಿ ಬಲ್ಲರು. ಇಂದು, ಆ ಬಯಕೆ ತೀರಿದದಿನವಾದರೂ ಕೊಂಚ ಆ ಸಂಯಮವನ್ನು ಮರೆತು ನಗಬಾರದೇ? ಎಣ್ಣೆತುಂಬಿ, ಬತ್ತಿಯ ಕಾಳಿಕೆಯನ್ನು ಒರೆಸಿ ಮೇಲೆತ್ತಿದಾಗಲಾದರೂ ದೀಪ ಹೆಚ್ಚಿನ ಬೆಳಕು ಮುಕ್ಕಳಿಸಬಾರದೇ ಎನಿಸಿ ವ್ಯಥೆಯಾಯಿತು ಮಹಾರಾಜ್ಞಿಗೆ.

ತೊಟ್ಟಿಲ ಚಿನ್ನದ ಸರಪಳಿಯನ್ನು ಹಿಡಿದು, ತೊಟ್ಟಿಲಲ್ಲಿ ಮಲಗಿದ ಮಗುವಿನ ಮೊಗವನ್ನೇ ದಿಟ್ಟಿಸುತ್ತಾನಿಂತ ಪತಿಯಬಳಿ ಸಾರಿ–

'ದೊರೆಗಳ ಮನಸಿಗೆ ಒಪ್ಪಿಗೆಯಾದನೇ ಮಗ?' ಎಂದು ಕೇಳಿದರು, ಕೇಳಲೋ ಬೇಡವೋ ಎಂಬಂತೆ.

'ಹಸಿದವನಿಗೆ ಅಮೃತಾನ್ನವಿಟ್ಟು, ಅದು ರುಚಿಯಾಯಿತೇ ಎಂದು ಕೇಳಬಹುದೇ ಲಕ್ಷ್ಮೀ?'

ಪ್ರೇಮ-ಸ್ನೇಹಗಳು ಸಮಸಮನಾಗಿ ಬೆರೆತು ಮಧುರಕೋಮಲವಾದ ಧ್ವನಿಯಲ್ಲಿ ಕೇಳಿದರು ಚಕ್ರವರ್ತಿಗಳು.

'ಊಹೂ, ತುಂಬಿದ ಹೊಟ್ಟೆಗೆ ಕದನ್ನ ಬಡಿಸಿದಂತಿದೆ.'

'ಏಕೆ?'

'ನಿಮ್ಮ ಮುಖವನ್ನೇ ಕನ್ನಡಿಯಲ್ಲಿ ನೋಡಿಕೊಂಡು, ಅದನ್ನೇ ಕೇಳಿ.'

'ನಿನ್ನ ಕಣ್ಣುಗಳಿರುವಾಗ ಕನ್ನಡಿಯೇಕೆ ಲಕ್ಷ್ಮೀ?'

'ಅದು ಮಾತುಮರೆಸುವ ಮಾತು. ನನ್ನಲ್ಲೂ ಮುಚ್ಚುಮರೆಯೆ?'

'ಮುಚ್ಚುಮರೆ! ಅದು ನಿನ್ನಲ್ಲಿ ಸಾಧ್ಯವೇ ಲಕ್ಷ್ಮೀ? ಒಲಿದ ಹೆಣ್ಣಿನ ಹೃದಯಕ್ಕೆ ಅರಿವಾಗದಿರುವ ಸೂಕ್ಷ್ಮಭಾವವೂ ಇವೆಯೆ?'

'ಇದನ್ನೇ ನಾನು ಮಾತುಮರೆಸುವ ಮಾತು ಎಂದದ್ದು. ಹೇಳಲು ಇಷ್ಟವಿಲ್ಲವಾದರೆ ಕೇಳುವುದಿಲ್ಲ.'

'ಮಹಾರಾಣಿಯವರು, ರಾಜಮಾತೆ ಕೇಳಬಾರದು; ಹೇಳಿ ಎನ್ನಬೇಕು. ಸ್ಥಾನೋಚಿತವಾಗಿ ಶಬ್ದಪ್ರಯೋಗವಾಗದಿದ್ದರೆ ಸೌಂದರ್ಯಕ್ಕೆ ಕುಂದಾಗುವುದು ದೇವಿ. ಸೌಂದರ್ಯಕ್ಕೆ ಕುಂದು—ಛಿ! ಅದೂ ಸೌಂದರ್ಯದ ಸಾಕಾರಸ್ವರೂಪವಾದ ಸ್ತ್ರೀಯಿಂದ. ಆಗಬಾರದು.'

ಚಕ್ರವರ್ತಿಗಳು ಲಘುವಾದ ಹಾಸ್ಯಧ್ವನಿಯಲ್ಲಿ ಹೇಳಿದರು ಧ್ವನಿಯಲ್ಲಿ ತೇಲಿಬರುವ ಖೇದವನ್ನು ಹುದುಗುತ್ತಾ. ಆ ಪ್ರಯತ್ನದ ಅರಿವಾಗಿ ಮಹಾರಾಣಿಯ ಕರುಳಿರಿದಂತಾಯಿತು. ಸಿಟ್ಟಾಗಿ 'ಇಂದು ನಿಮಗೇನಾಗಿದೆ?' ಎಂದು ನೇರವಾಗಿ ಕೇಳಬೇಕೆನಿಸಿದರೂ ಸಲಿಗೆಯಾಗಿ ಪರಿಣಮಿಸದ ಸ್ನೇಹಕ್ಕೆ ಅದು ಸಾಧ್ಯವಾಗಲಿಲ್ಲ.

'ಬಯಕೆಸಲಿಸಿದ ಹೆಣ್ಣಿಗೆ ಬಾಡಿದ ಮೊಗದ ನೋಟವೇ ಉಡುಗೊರೆಯಾದರೆ ಸೌಂದರ್ಯ ಭಂಗವಾಗುವುದಿಲ್ಲವೇ ಪ್ರಭು?'

ಹುದುಗಲಾಗದ ವ್ಯಥೆಯನ್ನು ಕಣ್ಣಲ್ಲಿ ಕಂಬನಿಯಾಗಿ ತುಂಬಿ ಕೇಳಿದರು ಮಹಾರಾಣಿ. ಆಕೆಯ ಖಿನ್ನವಾದ ಮೊಗವನ್ನು ನೋಡಿ ಚಕ್ರವರ್ತಿಯ ಮೊಗದಮೇಲೆ ಮೂಡಿದ ತೋರಿಕೆಯ ನಗುವಡಗಿ, ಅದೂ ಉಸಿರು ಸೋಕಿದ ಕನ್ನಡಿಯಂತೆ ದುಃಖಮಲಿನವಾಯಿತು. ಉತ್ತರೀಯದ ಕುಡಿಯಿಂದ, ಮಹಾರಾಣಿಯ ಕಾಡಿಗೆಗಣ್ಣಿನ ಅಂಚಿನಲ್ಲಿ ಮಿಂಚಿದ ಅಶ್ರುಜಲವನ್ನು ತೊಡೆದು ಕೇಳಿದರು—

'ಈ ಅಶ್ರುಜಲದಾರತಿಗೆ ನಾನೇನು ಮೆಚ್ಚುಗೊಡಲಿ ಹೇಳು ಲಕ್ಷ್ಮಿ?'

'ಕೇಳಬಹುದಾದರೆ, ದೊರೆಗಳಿಗೆ ಹೇಳುವ ಮನಸ್ಸಿದ್ದರೆ....'

'ಎರಡೂ ಉಂಟು.'

'ಹಾಗಾದರೆ ಎಲ್ಲರೂ ಸಂತೋಷದಿಂದಿರುವಾಗ ನಿಮ್ಮ ಮನಸ್ಸಿಗೇನು ದುಗುಡದ ಯಾತನೆ? ಬಿಗಿದ ಮೊರೆಗೇನು ಕಾರಣ?'

'ಅಷ್ಟಕ್ಕಾಗಿ ಇಷ್ಟು ಕಾತರವೇ?'

'ಇನ್ನೇತಕ್ಕೆ ಕಾತರಪಡಲಿ. ನಿಮ್ಮ ಮೊಗದ ನಗೆಯೇ ನನ್ನ ಬಾಳ ಸೌಭಾಗ್ಯವಲ್ಲವೇ? ರವಿ ಮೂಡದೆ ಬಿಸಿಲೆಲ್ಲಿಂದ ಬೆಳಗುವುದು ಹೇಳಿ. ಅದೇನು ಚಿಂತೆ ಎಂದು ನನಗೂ ಹೇಳಬಾರದೇ? ನಿಮ್ಮ ಹೃದಯದಲ್ಲಿ ಚಿಂತೆಗಿರುವ ಸ್ಥಾನ ನನಗಿಲ್ಲವೇ?'

'ನಿನಗಿಲ್ಲವೇ ಲಕ್ಷ್ಮಿ, ನೀನು ನನ್ನ ಹೃದಯ ಸಾಮ್ರಾಜ್ಯ ಲಕ್ಷ್ಮಿ. ಆದರೂ ಚಿಂತೆ ಸಂಕ್ರಾಂತಿಯ ಎಳ್ಳುಬೆಲ್ಲವಲ್ಲ ಲಕ್ಷ್ಮೀ. ಅದನ್ನು ಹಂಚಬಾರದು; ಪಡೆದವನು ಭೋಗಿಸಬೇಕು. ಅದಕ್ಕಾಗಿ ಸುಮ್ಮನಿದ್ದೆ, ನಿನಗೆ ಹೇಳಬಾರದೆಂದಲ್ಲ.'

'ಎಲ್ಲದರಲ್ಲೂ ನಿಮ್ಮೊಂದಿಗೆ ಸಮಪಾಲು ಪಡೆದು ಸಪ್ತಪದಿ ನಡೆದವಳು ನಾನು, ಹೇಳಿ ದೊರೆ.'

'ಅಪ್ರಿಯ ವಿಷಯವನ್ನು ಕೇಳಲೂ ಇಷ್ಟು ಆತುರವೇ?'

'ನಿಮ್ಮ ದುಃಖಭಾರವಾದ ಮುಖದರ್ಶನಕ್ಕಿಂತ ಹೆಚ್ಚಿನ ಅಪ್ರಿಯ

ವಿಷಯ ಬೇರಾವುದೂ ಇಲ್ಲ. ಅದೇನು ಹೇಳಿ, ದುಃಖದ ವಿಷಯ ವಾದರೆ, ಕಂಬನಿತೊಡೆಯಲು ನೀವು ಬಳಿ ಇರುವಾಗಲೇ ಕೇಳುವುದೇ ಮೇಲು.'

'ಈ ದಿನ ಪ್ರಾತಃಕಾಲ ಆಸ್ಥಾನ ಜೋಯಿಸರು ಹೇಳಿದರು....'

'ಯಾರು ? ಗೋಲಯಭಟ್ಟರೇ ?'

'ಹೂ.'

'ಏನೆಂದು ಹೇಳಿದರು ?' ದಿಗಿಲುತುಂಬಿದ ಧ್ವನಿಯಲ್ಲಿ ಕೇಳಿದರು ಮಹಾರಾಣಿ. 'ರಾಜಕುಮಾರ ಅಲ್ಪಾಯುಷಿಯೆ ?'

'ಊಹೂ, ಆ ಭೀತಿ ಇಲ್ಲ.'

'ಅಬ್ಬಾ ! ಏನು ಹೇಳಿದರೋ ಎಂದು ಹೆದರಿದ್ದೆ. ಹಾಗಾದರೆ ಮತ್ತೇನು ?'

'ರಾಜಕುಮಾರನ ಜನ್ಮಕಾಲದ ಶಕುನ, ಗ್ರಹಗತಿಗಳನ್ನು ನೋಡಿದರೆ, ರಾಜಕುಮಾರನಿಂದ ರಾಜ್ಯಕ್ಕೆ ಅಶುಭಶಂಕೆ ಕಂಡು ಬರುತ್ತದೆ ಎಂದರು.'

'ಆ !.... ನಿಜವೇ ?'

'ನಿಜ—ಲಕ್ಷ್ಮಾ. ಗೋಲಯಭಟ್ಟರು ಎಂದಾದರೂ ಸುಳ್ಳಾಡುವುದನ್ನು ಕೇಳಿದೀಯ?

ದೊರೆಗಳಾಡಿದ ಮಾತನ್ನು ಕೇಳಿ ಮಹಾರಾಣಿ ತಲೆಯ ಮೇಲೆ ಗುಡ್ಡ ಕವಿದಂತೆ ಪಾತಾಳಕ್ಕಿಳಿದು ಹೋದರು. ಒಳಗೊಳಗೇ, ಕಂಬನಿಯಾಳದೊಳಗೇ ಹುದುಗಲೆಳಸುವ ಧ್ವನಿಯನ್ನು ಬಲವಂತವಾಗಿ ಹೊರಗೆಳೆದು, ನಿರಾಶೆಯಿಂದ ಕ್ಷೀಣವಾಗಿ, ಬಿರುಸಾದ ಧ್ವನಿಯಿಂದ ಹೇಳಿದರು-

'ಮೊದಲು ಹೆದರಿದುದೇ ನಿಜವಾಗಿದ್ದರೂ ಚೆನ್ನಾಗಿತ್ತು.'

ಆ ಮಾತು ಕೇಳಿ ಚಕ್ರವರ್ತಿಗಳ ಹೃದಯ ಕಶಾಘಾತವಾದಂತೆ ತಲ್ಲಣಿಸಿತು. ತಾಯಿಯ ಬಾಯಿಂದ ಈ ಮಾತು !

'ಛಿ ! ಹಾಗಾಡಬಾರದು ಲಕ್ಷ್ಮಾ.'

'ಬಯಸಿ ಬಯಸಿ ಕರುಳಿರಿವ ಕೂರಸಿಯನ್ನು ಹಡೆದಂತಾಯಿತು.'

'ಏಕೆ ಲಕ್ಷ್ಮಾ?'

'ಈ ರಾಜ್ಯವನ್ನು ಕಾಪಾಡಲೆಂದು ಮಗನನ್ನು ಬಯಸಿದೆ. ಹರಕೆ ಹೊತ್ತು ವ್ರತಮಾಡಿದೆ: ರಾಜ್ಯಕ್ಕೆ ಕಂಟಕನಾಗಲೆಂದಲ್ಲ. ಇದೇನೇ ನಾನು ಪಡೆದ ಸೌಭಾಗ್ಯ? ವಿಧಿಗಿಷ್ಟು ಸಿಟ್ಟೇ ನನ್ನ ಮೇಲೆ? ಇಂಥ ಮಗನನ್ನು ಪಡೆದು, ಪ್ರಜೆಗಳಿಗೆ ಹೇಗೆ ಮೊಗ ತೋರಿಸಲಿ....'

'ಗೋಲಯ ಭಟ್ಟರು ಹೇಳಿದುದನ್ನು ಕೇಳಿದಾಗ ನನಗೂ ಹಾಗೇ ಅನ್ನಿಸಿತು. ಆದರೆ ಅದಾವುದನ್ನು ಅಷ್ಟು ಹಚ್ಚಿಕೊಳ್ಳಬಾರದು ಲಕ್ಷ್ಮೀ. ಬರುವುದೆಲ್ಲಾ ನಾವು ಅನುಭವಿಸಬೇಕೆಂದು ಬರುತ್ತವೆಯೇ ಹೊರತು, ಮನೋವ್ಯಥೆ ಮಾಡಿಕೊಂಡು ಕೊರಗುವುದಕ್ಕಲ್ಲ. ಸುಖ ದುಃಖಗಳು ಅಭ್ಯಾಗತರಂತೆ. ಒಬ್ಬರು ಬಂದರೆಂದು ಹಿಗ್ಗೇಕೆ, ಮತ್ತೊಬ್ಬರು ಬಂದರೆಂದು ಕೊರಗೇಕೆ? ಬರುವುದು ಬರಲಿ, ನಮ್ಮ ಕರ್ತವ್ಯವನ್ನು ಮಾತ್ರ ನಾವು ಮಾಡೋಣ.'

'ಕಾಪಾಡುವ ದೈವವೇ ಕಾಡುವ ಪಿಡುಗಾದಾಗ ಏನು ಮಾಡು ವುದು?'

'ಕಾಡುವ ಪಿಡುಗೂ ದೈವದ ಅವತಾರವೇ ಎಂದು ನಂಬಿ ನಿಲ್ಲುವುದು.'

'ದೈವವನ್ನೇ ಬೇಡಿ ಪಡೆದೆನಲ್ಲಾ, ಈಗ ಇನ್ನಾವ ದೈವ?'

'ಪರಿಹಾರವಿಲ್ಲದ ದುಃಖವಾವುದೂ ಜಗತ್ತಿನಲ್ಲಿಲ್ಲ ಲಕ್ಷ್ಮೀ....'

'ಅಂದರೆ ಈ ಅಶುಭಭೀತಿಗೂ ಪರಿಹಾರವಿದೆಯೇ?'

'ಇದೆ.'

'ಏನು ಆ ಪರಿಹಾರ? ಏನು ಮಾಡಬೇಕು? ಯಾವ ಗ್ರಹ ಶಾಂತಿ?' ತಡೆಯಲಾಗದ ಆತುರದಿಂದ ಕೇಳಿದರು ಮಹಾರಾಣಿ.

'ಸರಿಯಾಗಿ ಯೋಚನೆಮಾಡಿ ಹೇಳುವುದಾಗಿ ಹೇಳಿದರು......'

'ಇರಬೇಕು ಪ್ರಭು. ಅವರ ಲೆಕ್ಕಾಚಾರ ತಪ್ಪಿರಬಹುದು. ನಿಮ್ಮ ಮಗ ಎಂದೂ ರಾಜ್ಯಕಂಟಕನಾಗಲಾರ.'

'ನಿಜ, ಲಕ್ಷ್ಮೀ, ನಿನ್ನಂಥ ತಾಯಿಯ ಮಗ ಕೆಟ್ಟವನಾಗಲಾರ. ನನಗಿರುವ ಭರವಸೆ ಅದೇ.'

'ಪ್ರಭೂ, ನಿಮ್ಮ ಬಾಯಿಹರಕೆ ನಿಜವಾಗಲಿ.'

'ನನ್ನ ಹರಕೆಗಿಂತ ನಿನ್ನ ಬಯಕೆಗೆ ಹೆಚ್ಚು ಬಲ ಲಕ್ಷ್ಮಿ. ರಾಜ್ಯಕ್ಕೆ ರಕ್ಷಕ ಬೇಕೆಂದು ಮಗನನ್ನು ಬಯಸಿದೆ. ಅದು ಸಾರ್ಥಕ ವಾಯಿತು. ಆ ಮಗ ರಾಜ್ಯಕ್ಕೆ ರಕ್ಷಕನಾಗುವವನಾಗಲಿ ಎಂದು ಬಯಸು. ಅದೂ ಸಫಲವಾಗುತ್ತದೆ. ಹೆಣ್ಣಿನಬೇಡಿಕೆ ಬಹುಬೇಗ ದೇವರ ಕಿವಿ ಸೇರುತ್ತದೆ........'

'ನಿಮ್ಮಂಥವರ ಕೈಹಿಡಿದ ಪುಣ್ಯದ ಫಲವಿರಬೇಕು ಅದು........'

'ಊಹೂ, ಹಾಗಲ್ಲ—ಲಕ್ಷ್ಮಿ. ನಿನ್ನ ಕೈಹಿಡಿದುದು ನನ್ನಪುಣ್ಯ. ಒಂದುಗಳಿಗೆ ಎಲ್ಲೋ ಕತ್ತಲಲ್ಲಿ ಅಲೆಯುತ್ತಿದ್ದೆ. ನೀನು ಬೆಳಕು ತೋರಿಸಿದೆ.'

'ಯಾವ ಬೆಳಕು, ಏನು ಕತ್ತಲು ?'

'ಬಯಸಿಪಡೆದ ಮಗ ಇಂಥವನಾಗಬಹುದೆಂದು ಕೇಳಿ ತಂದೆ ತನದ ಕಾವಳದಲ್ಲಿ ತೊಳಲುತ್ತಿದ್ದೆ ಲಕ್ಷ್ಮಿ, ನಿನ್ನಂತೆ, ತಾಯಿಗಿಂತ ಹೆಚ್ಚಾಗಿ, ಮಹಾರಾಣಿಯಂತೆ ಚಿಂತಿಸಲಿಲ್ಲ. ಮೋಹದ ಕತ್ತಲ ಕಾಡಿ ನಲ್ಲಿ ಅಲೆಯುತ್ತಿದ್ದೆ. ಕರ್ತವ್ಯದ ಬೆಳಕು ತೋರಿಸಿದೆ. ನಿನ್ನಂಥ ಮಹಾರಾಜ್ಞಿ ದೊರೆತ ಈ ರಾಜ್ಯಕ್ಕೆ ಚ್ಯುತಿಯಿಲ್ಲ ದೇವಿ.'

ಪತ್ನಿಯಮೇಲಿನ ಅಭಿಮಾನ, ಪ್ರೇಮದಿಂದ ಚಕ್ರವರ್ತಿಗಳ ಮುಖ ಗೆಲುವಾಗಿ ಹೊಳೆಯಿತು. ಕಾಂತಿತುಂಬಿದ ದೊರೆಯ ಮೊಗ ವನ್ನು ಕಂಡು ಮಹಾರಾಣಿಯ ಎದೆಯ ದುಗುಡವೂ ಮರೆಯಾಯಿತು. ತಾವೂ ಗೆಲುವಾಗಿ, ಮೃದುವಾಗಿ ನಕ್ಕು ಹೇಳಿದರು—

'ಮಹಾರಾಜರು, ವಂದಿಮಾಗಧರ ಅನ್ನ ಕಸಿಯುವ ಯೋಚನೆ ಮಾಡುವಂತಿದೆ........'

'ಏಕೆ ?'

'ಅರಸರೇ ಹೊಗಳಲು ನಿಂತಮೇಲೆ ವಂದಿಮಾಗಧರೇಕೆ ಪ್ರಭು ?'

'ಶಕಟಾಯನರು, ಜಿನಸೇನಾಚಾರ್ಯರು ನನಗೆ ಕಾವ್ಯಾಭ್ಯಾಸ ಮಾಡಿಸಿದ್ದು ಸಾರ್ಥಕವಾಗಲಿಲ್ಲ. ನಿನ್ನಂಥ ಶಿಷ್ಯಳು ಸಿಕ್ಕಿದ್ದಿದ್ದರೆ ಚನ್ನಾಗಿತ್ತು.'

'ಹೋಗಲಿ, ನನ್ನ ಮಗನಂತೂ ದೊರೆಗಳಿಗೆ ಮೆಚ್ಚಾಗಲಿಲ್ಲ, ನಾನಾದರೂ ಒಪ್ಪಿಗೆಯಾದೆನಲ್ಲ, ನನ್ನ ಭಾಗ್ಯ.'

'ಒಪ್ಪಿಗೆ ? ನಿನ್ನ ಮಗಳಿಗಾಗಿ ನಂದಿವರ್ಮ ಹುಚ್ಚಾಗಿ ಅಲೆದುದು ಮರೆತುಹೋಯಿತೇ ? ಪಲ್ಲವ ರಾಜಕುಮಾರನನ್ನೂ ಪ್ರವಾಸಿಯಂತೆ ಅಲೆಸಿದ ಮಾಟಗಾತಿ ನಿನ್ನ ಮಗಳು ; ನೀನು ಅವಳ ತಾಯಿ ! ಕೇಳಬೇಕೇ ? '

'ಅನ್ನುವುದಾದರೆ ನನ್ನನ್ನು ಅನ್ನಿ. ಸುಮ್ಮನೆ ಅತ್ತೆಯ ಮನೆಯಲ್ಲಿರುವ ಅವಳನ್ನೇಕೆ ಅನ್ನುತ್ತೀರಿ.'

'ಅನ್ನುವುದು—ಅದೂ ಶಂಖಳನ್ನು. ಅನ್ನುವುದಲ್ಲ ಲಕ್ಷ್ಮಿ ಅದು ಹೊಗಳಿಕೆಯ ಮಾತು.'

'ಅವಳನ್ನು ಮಾಟಗಾತಿ ಎನ್ನುವುದು, ಅವಳ ತಾಯಿ ಎಂದು ನನಗೆ ಹೇಳುವುದು ಹೊಗಳಿಕೆಯೇ ? ಶಂಖಾ ಬರಲಿ—ಅವಳನ್ನೇ ಕೇಳುತ್ತೇನೆ. ನಿಮ್ಮಷ್ಟೇ ಅವಳೂ 'ಅಲಂಕಾರ ಶಾಸ್ತ್ರ' ಓದಿದಾಳೆ ! '

'ಆಯಿತು, ಒಪ್ಪಿದೆ. ನಿನ್ನ ಮಗಳು ಪಂಡಿತೆ, ನೀನು ಪರಮ ಪಂಡಿತೆ. ನಿಮ್ಮ ಕುಡಿಗಣ್ಣನೋಟದಲ್ಲಿ ಕೋಟಿ ಅಲಂಕಾರ ಶಾಸ್ತ್ರ ಕೈಜೋಡಿಸಿ ನಿಂತಿವೆ ; ನಾಲಗೆಯಲ್ಲಿ ಸಕಲ ಶಸ್ತ್ರಾಗಾರವೂ....'

'ಷ್, ಮೃದುವಾಗಿ ಹೇಳಿ. ಮಗುವಿಗೆ ಎಚ್ಚರವಾದೀತು. ಹೆಂಡತಿಯನ್ನು ಹೊಗಳುವುದರಲ್ಲಿ ದೊರೆಗಳಿಗೆ ಹಗಲು ಹತ್ತಿರಾಗುತ್ತಿರುವುದೂ ಮರೆತು ಹೋಯಿತೇನೋ.'

'ನೀನು ಬಳಿಯಿದ್ದರೆ ಹಗಲೇನು, ಇರುಳೇನು, ಜಗತ್ತೇ ಮರೆತುಹೋಗುತ್ತದೆ ದೇವಿ. ಎಷ್ಟು ಬೇಗ ಮನದ ಚಿಂತೆಯನ್ನು ಹರಿಸಿದೆ. ಮಲಗು ಲಕ್ಷ್ಮಿ, ವೈಬಳಲಿಸುವ ಕಾಲವಲ್ಲ ಇದು.'

'ಇನ್ನೊಬ್ಬರಿಗೆ ಮಾಡುವ ಉಪದೇಶವನ್ನು ತಾವೂ ಅನುಸರಿಸಬಹುದಲ್ಲವೇ ಪ್ರಭು?'

'ನಿಜ, ದೇವಿ ನುಡಿದಂತೆ ನಡೆದಾಗಲೇ ಬದುಕು ಸಾರ್ಥಕ.'

ಎಂದು ನುಡಿದು ನೃಪತುಂಗದೇವ, ಬಲಿತ ಇರುಳಿನ ಚಳಿಗಾಳಿಗೆ ಬರಿದಾಗಿ ಕೊರಗುವ ಶಯ್ಯೆಯತ್ತ ನಡೆದರು. ಮಹಾರಾಜ್ಞಿ ಮಾತ್ರ

ತೊಟ್ಟಿಲ ಬಳಿ ನಿಂತು, ಮಲಗಿದ ಮಗನ ಮೊಗವನ್ನೇ ನೋಡುತ್ತಿದ್ದರು. ನೋಡನೋಡುತ್ತಾ ಎದೆಯೊಳಗಿಂದ ಸುಯ್ದು ಬಂದ ನಿಟ್ಟುಸಿರು ತೊಟ್ಟಿಲನ್ನು ತುಂಬಿದ ಗಾಳಿಯಲ್ಲಿ ಬೆರೆಯಿತು.

೩

ವಿಜಯೋತ್ಸವದ ದಿನವೇ ಜನಿಸಿದ ರಾಜಕುಮಾರನಿಗೆ, ಆಶ್ಚರ್ಯಕರವಾದ ಆ ಘಟನೆಯು ನೆನಪಿಗೆಂಬಂತೆ 'ಅಕಾಲವರ್ಷ'ನೆಂದೂ, ಮಹಾರಾಜ್ಞಿಯವರ ಇಚ್ಛೆಯಂತೆ 'ಕೃಷ್ಣ' ಎಂದೂ ನಾಮಕರಣವಾಯಿತು. ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೆ ವರ್ಧಿಸುವ ಮಗನ ಆಟ ಪಾಟ, ನಲಿದಾಟಗಳಲ್ಲಿ ಮಹಾರಾಜ್ಞಿ ಆತನ ಜನ್ಮದಿನದಂದು ಮನದಲ್ಲಿ ಮೂಡಿದ ಅಶುಭ ಶಂಕೆಯನ್ನು ಮರೆತುಬಿಟ್ಟರು. ಎಂದಾದರೂ ಒಮ್ಮೆ ನೆನಪಾದಾಗ, ಮಗನ ಮುಗ್ಧ ಮನೋಹರ ಮುಖಮಂಡಲವನ್ನು ನೋಡಿ 'ಛಿ ಹಾಗಾಗಲಾರದು. ಗೋಲಯ ಭಟ್ಟರ ಲೆಕ್ಕಾಚಾರದಲ್ಲೇ ಏನೋ ತಪ್ಪಾಗಿರಬಹುದು' ಎಂದುಕೊಳ್ಳುವರು. ಒಂದುಗಳಿಗೆ ಆ ಚಿಂತೆಯಿಂದ ನಸು ಮಲಿನವಾದ ಮುಖ ಮಗನ ನಗೆಯಗಾಳಿ ಸೋಂಕಿ, ಮತ್ತೆ ಶುಭ್ರ ಪ್ರಫುಲ್ಲವಾಗುವುದು—ಮಳೆತೊಳೆದು ಹೂ ನೀಲಿಯಾದ ಬಾನಿನಂತೆ. ಮರುಗಳಿಗೆಯಲ್ಲೇ ಮಗನ ಲಾಲನೆಯಲ್ಲಿ ನಿರತರಾಗುವರು.

ಕೃಷ್ಣನ ಸೇವೆ, ಉಪಚಾರ, ಅಲಂಕಾರದಲ್ಲಿ ಅವರಿಗೆ ಬಿಡುವೇ ಇಲ್ಲ. ಎಷ್ಟು ಮಾಡಿದರೂ ಸಾಲದು. ಮಹಾರಾಣಿಯವರಿಗೇನು, ಅರಮನೆಯಲ್ಲಿರುವ ಎಲ್ಲರಿಗೂ, ರಾಜಕುಮಾರ ಕಣ್ಣು ಬೊಂಬೆ. ಆವನ ಸೇವೆಗೆ ಎಲ್ಲರಿಗೂ ಆತುರ. ಕೃಷ್ಣ ಬರೀ ರಾಜಕುಮಾರನೆಂಬುದರಿಂದಲೇ ಅಷ್ಟು ಅಭಿಮಾನವಲ್ಲ; ಅವನ ರೂಪ ಅಂತಹುದು. ಎಷ್ಟು ನೋಡಿದರೂ ಇನ್ನಷ್ಟು ನೋಡಬೇಕು ಎನ್ನಿಸುವಂಥ, ನೋಡಿದವರು ಎತ್ತಿ ಮುದ್ದಾಡಬೇಕು ಎನಿಸುವಂಥ ಸೌಂದರ್ಯ, ಆ ಬಾಲರಾಜಪುತ್ರನದು. ಆ ರೂಪಕ್ಕೆ ಮೆರಗು ಕೊಟ್ಟಂತೆ ಅವನ ಮಾತು. ಆ ರೂಪು ನೋಡುತ್ತಾ, ಅವನ ಮಾತು ಕೇಳುತ್ತಾ ಮಹಾರಾಣಿಯವರಿರಲಿ, ದಾಸ ದಾಸಿಯರೂ ತಮ್ಮ ಕೆಲಸವನ್ನು ಮರೆತು ನಿಲ್ಲುವರು.

2

ಕೃಷ್ಣ, ಕೃಷ್ಣ, ಕೃಷ್ಣ–ಮಹಾರಾಣಿಯವರ ಬಾಳಬಾನನ್ನು ಆ ಬೆಳದಿಂಗಳ ಬೆಳಕು ಕವಿದು, ಬೇರಾವುದೂ ಕಾಣದು ಅದರಲ್ಲಿ. ಅವನ ಆಟಪಾಟಗಳನ್ನು ಎಷ್ಟು ಬಣ್ಣಿಸಿದರೂ ತೀರದು–ಪತಿಯ ಮುಂದೆ. ಒಮ್ಮೊಮ್ಮೆ ಆ ವರ್ಣನೆಯ ಉತ್ಸಾಹದಲ್ಲಿ ತಾವು ವಯಸ್ಸಾದವರೆಂಬುದನ್ನೂ ಮರೆತು, ಮಗುವಿನ ಮುಗ್ಧರೀತಿಯಲ್ಲಿಯೋ, ತೊದಲ್ನುಡಿಯಲ್ಲಿಯೋ ತಾವೂ ಮಾತಾಡಿ 'ನಿಮ್ಮ ಕುಮಾರ ಹೀಗೆ ಮಾತಾಡಿದ' ಎನ್ನುವರು. ಅದನ್ನು ಕೇಳಿ ಚಕ್ರವರ್ತಿಗೆ ನಗೆ ಬರುವುದು.

'ಮಗನಿಗೇನೋ ಶೈಶವ. ಆದರೆ ಅವನ ಶೈಶವದ ಸೋಂಕು ನಿನಗೂ ಸೋಕಿದಂತಿದೆ ಲಕ್ಷ್ಮಿ. ಹೀಗೇ ನಿನ್ನ ವಯಸ್ಸು ಹಿಂದೆ ಸರಿಯುತ್ತಾ ಹೋದರೆ, ಮಗನ ಜೊತೆಗೆ ನಿನಗೂ ತೊಟ್ಟಿಲು ಕಟ್ಟಿಸಬೇಕಾಗುವುದೇನೋ!' ಎಂದು ನಗೆಯಾಡುವರು, ಮಹಾರಾಣಿಯ ಮುಖದ ಮೇಲೆ ಅರುಣೋದಯದ ಕಾಂತಿಯನ್ನು ಮೂಡಿಸಿ.

ಇನ್ನೊಮ್ಮೊಮ್ಮೆ ಈ ಮಮತೆ ಅತಿಯಾಯಿತೇನೋ ಎನಿಸಿ–

'ಯಾವುದನ್ನೂ ಇಷ್ಟು ಅತಿಯಾಗಿ ಹಚ್ಚಿಕೊಳ್ಳಬಾರದು ಲಕ್ಷ್ಮಿ. ಅತಿ ಯಾವ ಸಂದರ್ಭದಲ್ಲೂ ಒಳಿತಲ್ಲ.' ಎನ್ನುವರು.

'ನಮಗೇನು ಅತಿ ಇರುವುದು. ಇರುವುದು ಒಬ್ಬ ಮಗ. ಅವನಿಗೆ ಅಕ್ಕರೆ ಮಾಡುವುದೂ ಅತಿಯೆ?'

–ಮಹಾರಾಜರು ತಮ್ಮ ಉತ್ಸಾಹದಲ್ಲಿ ಬೆರೆಯದುದನ್ನು ಕಂಡು, ಮಹಾರಾಣಿ ಅಹುದೋ ಅಲ್ಲವೋ ಎನ್ನುವಷ್ಟು ಅಸಮಾಧಾನದ ಧ್ವನಿಯಲ್ಲಿ ಹೇಳುವರು.

'ಹಾಗಲ್ಲ ಲಕ್ಷ್ಮಿ. ತಾಯಿ ಮಗನ ವಿಷಯದಲ್ಲಿ ಮಮತೆದಾಳುವುದು ತಪ್ಪಲ್ಲವಾದರೂ, ಅದನ್ನು ವ್ಯಕ್ತಪಡಿಸುವಾಗ ಸಂಯಮ ಬೇಕು.'

'ಸಂಯಮ! ನೀವು ಶ್ರಮಣರ ಶಿಷ್ಯರಾಗಿ ಬೆಳೆದುದರ ಫಲ ಇದು'

'ಹಾಗಲ್ಲ ದೇವಿ, ಹೂವಿನ ಗಿಡದ ಮೇಲೆ ಪ್ರೀತಿ ಇರಬೇಕು, ನಿಜ. ಹಾಗೆಂದು ಹೆಚ್ಚಾಗಿ ನೀರು, ಗೊಬ್ಬರ ಹಾಕಿದರೆ ಗಿಡ ಉಳಿದೀತೇ? ಮಕ್ಕಳೂ ಗಿಡದ ಹಾಗೆ. ಕಾಪಾಡುವಾಗ ಮಮತೆ ಬೇಕು, ಪ್ರೀತಿಸು

ವಾಗ ಸಂಯಮ ಬೇಕು. ನಿನಗಿರುವಷ್ಟೇ ಪ್ರೀತಿ ನನಗೂ ಇಲ್ಲವೇ, ಇವನ ಮೇಲೆ?'

'ನಿಜ ಹೇಳಲೇ?'

'ಹೇಳು ಲಕ್ಷ್ಮೀ.'

'ರಾಜ್ಯದ ಮೇಲಿರುವಷ್ಟು ಪ್ರೀತಿ ನಿಮಗೆ ಮಗನ ಮೇಲೂ ಇಲ್ಲ, ನನ್ನ ಮೇಲೂ ಇಲ್ಲ. ಮೂರುಹೊತ್ತೂ ಅದರ ಚಿಂತೆಯೇ ಆಗಿದೆ ನಿಮಗೆ. ಈಚೀಚೆಗಂತೂ ಇದ್ದದ್ದೂ ಹೆಚ್ಚಾಗಿದೆ, ಆ ರಾಜ್ಯದ ಚಿಂತೆ. ಸಚಿವರು, ಸಾಮಂತರು ಯಾರೂ ಇಲ್ಲದ ಹಾಗೆ ದುಡಿಯುತ್ತೀರ. ಅಂತಃಪುರಕ್ಕೆ ಬಂದಾಗಲೇ ನಮ್ಮ ನೆನಪು.'

'ಸಚಿವರು, ಸಾಮಂತರು ಇಲ್ಲವೆಂದಲ್ಲ ಲಕ್ಷ್ಮೀ. ಅವರಿರುವುದು ದೊರೆ ಎಲ್ಲ ಭಾರವನ್ನೂ ಅವರಮೇಲೆ ಹಾಕಿ, ನಿಶ್ಚಿಂತನಾಗಿ ಅಂತಃಪುರದಲ್ಲಿ ಮಲಗಲೆಂದಲ್ಲ. ಹಾಗೆ ಎಲ್ಲ ಕಾರ್ಯವನ್ನೂ ಅವರೇ ಮಾಡುವುದಾಗಿದ್ದರೆ, ಅರಸು ಎಂದೇಕೆ ಇರಬೇಕಾಗಿತ್ತು ಹೇಳು. ಅರಸು ಬರೀ ಸಿಂಹಾಸನಕ್ಕೆ ಭಾರವಾದ ಉತ್ಸವಮೂರ್ತಿಯೇ? ಹಾಗೆಂದುಕೊಂಡೇ ಎಷ್ಟೋ ರಾಜ್ಯಗಳು ಹೆಸರಿಲ್ಲದಾಗಿ ಹೋದುದು. ಪ್ರತೀಹಾರ ರಾಮಭದ್ರ ದೇವನ ಕಥೆ ನಿನಗೆ ಗೊತ್ತಿಲ್ಲವೇ?'

ನಿಜ. ರಾಮಭದ್ರ ದೇವನ ವಿಷಯ ಮಹಾರಾಣಿಯವರಿಗೆ ತಿಳಿದಿತ್ತು. ಕೇತಕಿ ಎನ್ನುವ ವೇಶ್ಯೆಯ ಬೇಟದಲ್ಲಿ ಮೈಮರೆತು ಪ್ರತೀಹಾರ ರಾಜ್ಯವನ್ನು ಶತ್ರುಗಳ ಪಾಲಿಗೆ ಸುಲಭ ಬೇಟೆ ಮಾಡಿದ ರಾಮಭದ್ರ ದೇವನನ್ನು, ಕಡೆಗೆ ಅವನ ಮಗ ಮಿಹಿರಭೋಜನೇ ನಿಗ್ರಹಿಸಿ, ರಾಜ್ಯಸೂತ್ರ ಧರಿಸಿದುದು ಲಕ್ಷ್ಮೀದೇವಿಗೂ ಗೊತ್ತಿತ್ತು.

'ನಮ್ಮ ರಾಜ್ಯವೂ ಹಾಗಾಗಬೇಕೇ ಲಕ್ಷ್ಮೀ....ಅಪ್ಪಾಜಿ ನನ್ನ ನೆತ್ತಿಯಮೇಲೆ ಬಹುದೊಡ್ಡಭಾರ ಹೊರೆಸಿ ಹೋಗಿದಾರ. ಈ ರಾಜ್ಯವನ್ನು ಕಾಪಾಡಿ ಉಳಿಸುತ್ತೇನೆಂದು ಜಿನಸೇನಾಚಾರ್ಯರಿಗೆ, ಚಿಕ್ಕಪ್ಪ ಕರ್ಕಸುವರ್ಣವರ್ಷರಿಗೆ, ಆಚಾರ್ಯ ಪಾತಾಳಮಲ್ಲರಿಗೆ, ಸಿಂಹಾಸನವನ್ನು ಹತ್ತುವಂದು ಮಾತು ಕೊಟ್ಟಿದ್ದು ನಿನಗೂ ನೆನಪಿರಬೇಕು ಲಕ್ಷ್ಮೀ. ನಿನ್ನ ಮಗನೇ ನಾಳೆ 'ಎಂತಹ ತಂದೆ!' ಎಂದು ಮೂಗು ಮುರಿಯದಿರ

ಲಂದು ಇಷ್ಟು ಎಚ್ಚರವಾಗಿರಬೇಕಾಗಿದೆ. ಈಗಂತೂ ವೈರಿಯೆಲ್ಲಾ ಕಣ್ಣಾಗಿದ್ದರೂ ಸಾಲದು.'

'ಅದಕ್ಕೆ ಬೇಡವೆನ್ನುತ್ತೇನೆಯೇ ಪ್ರಭು. ಆದರೆ ಸದಾ ಅದೇ ಚಿಂತೆಯೇ ಆದರೆ ಹೇಗೆ?'

'ಅದಕ್ಕೆ ಚಿಂತೆ ಮಾಡಿದಷ್ಟೂ ಸಾಲದು ದೇವಿ. ಹಾಗೆಂದು ನಿನಗೆ ನಮ್ಮ ಮೇಲೆ ಅಸಮಾಧಾನವೇ ?'

'ಇಲ್ಲ ಪ್ರಭು, ಎಲ್ಲರ ಭಾರ ಹೊತ್ತವರು ನೀವು. ನಮ್ಮನ್ನೂ ಮರೆಯಬೇಡಿ ಎಂದು ಬೇಡಿಕೆ–ಅಷ್ಟೆ.'

'ನಿನ್ನನ್ನು ಮರೆತಿರುವುದು ಸಾಧ್ಯವೇ ಲಕ್ಷ್ಮಾ? ನಿನ್ನ ನೆನಪೇ ನನಗೆ ಈ ಭಾರವನ್ನು ಹೊರಲು ಬಲ ಕೊಟ್ಟಿರುವ ಶಕ್ತಿ. ಒಂದು ಕಡೆ ನೀನು–ಇನ್ನೊಂದು ಕಡೆ ರಾಜ್ಯ, ಈ ಎರಡು ಊರೆಗೋಲು ಹಿಡಿದು ಬಾಳ ಸೇತುವೆಯ ಮೇಲೆ ನಡೆಯುತ್ತಿದೇನೆ, ಲಕ್ಷ್ಮಾ, ಇದರಲ್ಲಿ ಯಾವುದಕ್ಕೆ ಚ್ಯುತಿ ಬಂದರೂ ನಾನು ಹೆಳವ.'

ಮಹಾರಾಜರು ತನ್ನ ನೆತ್ತಿಯನ್ನು ನೇವರಿಸಿ ಆಡಿದ ಮಾತು ಕೇಳಿ, ಮಹಾರಾಣಿಯ ಹೃದಯ ಅಭಿಮಾನದಿಂದ ತುಂಬಿ ಬಂತು.

'ನಿಮ್ಮ ಮಗ, ನಿಮ್ಮ ಹಾಗೇ ಆದರೆ ಸಾಕು.'

–ಎಂದು ದೊರೆಯ ಮೇಲಿನ ಪ್ರೀತಿಯನ್ನು ಸೂಚಿಸಿದರು.

'ನನ್ನ ಹಾಗಲ್ಲವಾದರೆ ಹೋಗಲಿ, ನಿನ್ನ ಹಾಗಾದರೂ ಆಗುವಂತೆ ಬೆಳಸು ಲಕ್ಷ್ಮಾ.'

'ಹಾಗೆಂದು ಆ ಭಾರ ನನ್ನ ಮೇಲೆ ಹಾಕಿ ನೀವು ಅವನನ್ನು ಮರತೇ ಬಿಡುತ್ತೀರಾ?'

'ಊಹೂ. ಆದರೂ ನಿನ್ನ ರಕ್ಷಣೆಗೊಪ್ಪಿಸಿದಮೇಲೆ ನನಗೇನು ಚಿಂತೆ ಲಕ್ಷ್ಮಾ. ನಿನ್ನ ಪ್ರೀತಿಯ ಕಣ್ಣಿನ ರಕ್ಷೆ ಇರುವುದಕ್ಕೆ ಬೇರಾವ ರಕ್ಷೆಯೂ ಬೇಕಿಲ್ಲ.'

'ಆದರೆ ನನಗೆ ನಿಮ್ಮ ಪ್ರೀತಿಯ ರಕ್ಷೆ ಬೇಕು.'

'ಅದು ಎಂದೂ ನಿನ್ನದೇ. ಆದರೆ ನಿನ್ನ ಪ್ರೇಮವನ್ನೆಲ್ಲಾ ಮಗ ನಿಗೇ ಧಾರೆ ಎರೆದು ಬಿಡಬೇಡ. ನಮಗೂ ಅಷ್ಟು ಇರಲಿ.'

' ನೀವೂ ನಮ್ಮನ್ನು ಮರೆಯದಿದ್ದರೇ....'

' ಮರೆಯುವುದಿಲ್ಲ ಲಕ್ಷ್ಮೀ.'

—ಎಂದರು ಚಕ್ರವರ್ತಿ.

ಆದರೆ ದಿನದಿನಕ್ಕೆ ದಿಗಂತದಲ್ಲಿ ಕಾರ್ಮೋಡ ಕವಿಯುತ್ತಿರುವ ರಾಜ್ಯದ ಚಿಂತೆಯಲ್ಲಿ ಚಕ್ರವರ್ತಿಗಳಿಗೆ ಬೇರಾವ ನೆನಪು ಉಳಿಯುವುದೂ ಕಷ್ಟವಾಗಿತ್ತು.

೪

' ಅರಸೊತ್ತಿಗೆ ಸುಖದ ಸುಪ್ಪತ್ತಿಗೆಯಲ್ಲ, ಕಠಿಣ ಹೊಣೆಗಾರಿಕೆಯ ಮುಳ್ಳಿನ ಮಂಚ' ಎಂದು ಜಿನಸೇನಾಚಾರ್ಯರು, ನೃಪತುಂಗ ಚಕ್ರವರ್ತಿ ರಾಜಕುಮಾರನಾಗಿದ್ದಾಗ ಹೇಳುತ್ತಿದ್ದುದು, ದಿನಗಳೆದಂತೆ ಹೆಚ್ಚು ಹೆಚ್ಚು ಸತ್ಯವೆಂದು ಚಕ್ರವರ್ತಿಗೆ ಮನವರಿಕೆಯಾಗುತ್ತಿತ್ತು.

ಆಸೇತುಹಿಮಾಲಯಪರ್ಯಂತ ಕನ್ನಡ ರಾಜ್ಯದ ವಿಜಯ ಭೇರಿಯನ್ನು ಮೊಳಗಿಸಿ, ರಾಷ್ಟ್ರಕೂಟರ ಕೀರ್ತಿಪತಾಕೆಯನ್ನು ಮೆರೆಯಿಸಿದ ಪ್ರಭೂತವರ್ಷ ಗೋವಿಂದ ಚಕ್ರವರ್ತಿ ಬದುಕಿರುವಷ್ಟು ದಿನವೂ, ಅವರು ಗೆದ್ದವರು, ಸಾಮಂತರಾಗಿ, ರಾಜ್ಯದ ಗಡಿಕಾಯುವ ಭಟರಾಗಿದ್ದರು. ತುಂಗಭದ್ರಾ ನದಿಯ ತಡಿಯ ರಾಮೇಶ್ವರದ ಮೀಸಲು ಬನಕ್ಕೆ ಬೇಟೆಗೆಂದು ಹೋದ ಗೋವಿಂದ ಚಕ್ರವರ್ತಿ, ಅಲ್ಲಿಂದ ರಾಜಧಾನಿಗೆ ಹಿಂದಿರುಗುತ್ತಿದ್ದ ಹಾಗೇ ಹಾಸಿಗೆ ಹಿಡಿದು ಮಲಗಿದರು. ಅವರು ರೋಗಗ್ರಸ್ತರಾಗಿ ಮಲಗಿದಂದೇ, ಸಾಮಂತರು ಒಬ್ಬೊಬ್ಬರಾಗಿ, ರಾಜ್ಯದ ವೈರಿಗಳಾಗಿ, ದ್ವೇಷದ ಹಲ್ಲು ಮಸೆಯುತ್ತಾ ರಾಷ್ಟ್ರಕೂಟ ರಾಜ್ಯದ ಮೇಲೆ ಆಕ್ರಮಣ ನಡೆಸಲು ಹೊತ್ತು ಕಾಯುತ್ತಿದ್ದರು. ನೃಪತುಂಗದೇವ ಇನ್ನೂ ಹದಿಮೂರು ವರ್ಷದ ಎಳೆಹರೆಯದ ಪ್ರಾಯದಲ್ಲಿರುವಾಗಲೇ ಗೋವಿಂದ ಚಕ್ರವರ್ತಿಗಳು ಸ್ವರ್ಗವಾಸಿಗಳಾದುದು, ವೈರಿಮಂಡಲಕ್ಕೆ ಇನ್ನಷ್ಟು ಅನುಕೂಲವಾಯಿತು.

ಪೂರ್ವಚಾಲುಕ್ಯ ವಿಜಯಾದಿತ್ಯ, ಪ್ರತೀಹಾರ ನಾಗಭಟ್ಟ, ಪಲ್ಲವ ದಂತಿವರ್ಮ, ಪಾಂಡ್ಯದೊರೆಗಳಾದ ವರಗುಣ, ಶ್ರೀಮಾರ ಶ್ರೀವಲ್ಲಭರು, ಗಂಗ ಮಾರಸಿಂಹ, ನೊಳಂಬ ಸಿಂಹಪೋತ—ಒಬ್ಬೊಬ್ಬರೂ ಪರಿಬಿಟ್ಟ

ಹಾವುಗಳಂತೆ ವೈರಸಾಧಿಸಲು ಸಿದ್ಧರಾದರು. ಸುತ್ತ ಎದ್ದುನಿಂತ ಈ ವೈರಿಮಂಡಲದ ನಡುವೆ, ರಾಷ್ಟ್ರಕೂಟ ರಾಜ್ಯ, ಸುತ್ತಲೂ ಹಾಕಿದ ಬೆಂಕಿಯ ವರ್ತುಲದ ನಡುವೆ ಸಿಕ್ಕ ಬೇಟೆಯ ಮಿಗದಂತಿತ್ತು.

ಸುತ್ತ ವೈರಿಗಳ ಭೀತಿ ಕವಿದುಬಂದ ಹೊತ್ತಿನಲ್ಲೇ, ರಾಜಧಾನಿಯಲ್ಲಿ ಒಳಸಂಚುಗಳ ಬಳ್ಳಿ ಗೊಂಚಲು ಗೊಂಚಲಾಗಿ ಅರಳಿತ್ತು. ನೃಪತುಂಗ ರಾಜಕುಮಾರನನ್ನೇ ಕೊಲೆಮಾಡಿ, ರಾಷ್ಟ್ರಕೂಟ ರಾಜ್ಯಕ್ಕೆ ವಾರಸುದಾರನಿಲ್ಲದಂತೆ ಮಾಡಿ, ಆ ಗೊಂದಲದಲ್ಲಿ ರಾಜ್ಯವನ್ನೇ ಕಬಳಿಸುವ ಒಳಸಂಚುಗಳೂ ನಡೆದವು. ನೃಪತುಂಗನ ದೂರದ ದಾಯಾದಿಯಾದ ಜರಿಗ, ಗಂಗರ ಗೂಢಚಾರ ನಾಗದಂತ ಇಬ್ಬರೂ ಸೇರಿ, ಅಂತಃಪುರದ ಯುವನದಾಸಿಯೊಂದಿಗೆ ಸಂಚುಮಾಡಿ, ರಾಜಕುಮಾರನ ಪ್ರಾಣಕ್ಕೇ ಸಂಚಕಾರತರಲು ಪ್ರಯತ್ನ ನಡೆಸಿದ್ದರು.

ಈ ಒಳ—ಹೊರಗಿನ ಭೀತಿಪರಂಪರೆಯಲ್ಲಿ ರಾಷ್ಟ್ರಕೂಟ ರಾಜ್ಯ ಉಳಿಯುವುದೆಂಬ ನೆಚ್ಚಿಗೆ ಯಾರಿಗೂ ಇರಲಿಲ್ಲ.

ಅಂಥ ವಿಪತ್ಸಮಯದಲ್ಲಿ ಕರ್ಕಸುವರ್ಣವರ್ಷ, ಆಚಾರ್ಯ ಪಾತಾಳಮಲ್ಲರು ಚಿತ್ತಸ್ಥೈರ್ಯವನ್ನು ಕಳೆದುಕೊಳ್ಳದೆ, ಒಬ್ಬರು ತೋಳಬಲದಿಂದ, ಮತ್ತೊಬ್ಬರು ಬುದ್ಧಿಬಲದಿಂದ ಶತ್ರುಗಳನ್ನು ಮಣಿಸಿ, ರಾಜಕುಮಾರನ ಜೀವನವನ್ನು ನಿಷ್ಕಂಟಕವಾಗಿ ಮಾಡಿ, ಮತ್ತೆ ರಾಷ್ಟ್ರಕೂಟ ಸಿಂಹಾಸನವನ್ನು ಸ್ಥಿರಗೊಳಿಸಿದ್ದರು.

ಈಗ ಅವರಿಬ್ಬರೂ ಇಲ್ಲ—ಶತ್ರುಗಳುಮಾತ್ರ ಹೊತ್ತು ಕಾಯುತ್ತಲೇ ಇದಾರೆ.

ಪಲ್ಲವ ರಾಜಕುಮಾರ ನಂದಿವರ್ಮ, ನೃಪತುಂಗ ಚಕ್ರವರ್ತಿಯ ಮಗಳು ಶಂಖಾದೇವಿಯನ್ನು ಲಗ್ನವಾಗಿ, ಆ ದಿಕ್ಕಿನ ಭೀತಿ ತಪ್ಪಿದುದಷ್ಟೇ ಅಲ್ಲ, ಪಾಂಡ್ಯರವಿರುದ್ಧ ರಾಷ್ಟ್ರಕೂಟ ರಾಜ್ಯಕ್ಕೆ ಪಲ್ಲವರು ಕಾವಲಾಗಿದಾರೆ. ವೆಂಗಿವಳ್ಳಿಯ ವಿಜಯದಿಂದ ಪೂರ್ವ ಚಾಲುಕ್ಯರೂ ಸಾಮಂತರಾಗಿ ಅವರ ಭೀತಿಯೂ ತಪ್ಪಿದೆ. ದಿನ ದಿನಕ್ಕೆ ಬೆಳೆಯುತ್ತಿರುವ ಪೊರೆಯೂರಿನ ಚೋಳರ ಪ್ರಾಬಲ್ಯವೂ ಪಾಂಡ್ಯಭೀತಿಯನ್ನು ತಗ್ಗಿಸಲು ನೆರವಾಗಿದೆ.

ಆದರೆ ಉತ್ತರ ದಕ್ಷಿಣಗಳಲ್ಲಿ ರಾಜ್ಯಕ್ಕೆ ಪ್ರಬಲ ವೈರಿಗಳಾಗಿ ನಿಂತ ಕನ್ಯಾಕುಬ್ಜದ ಪ್ರತಿಹಾರ ಮಿಹಿರಭೋಜ, ತಲವನಪುರದ ಗಂಗ ರಾಚಮಲ್ಲರು ಹೊತ್ತು ಕಾಯುತ್ತಲೇ ಇದಾರೆ. ಮಿಹಿರಭೋಜ ನಂತೂ, ನೃಪತುಂಗ ಚಕ್ರವರ್ತಿಯ ರಾಜ್ಯದಮೇಲಿನ ದಾಳಿಗೆ ಮುನ್ನುಡಿಯೆಂಬಂತೆ, ಸೌರಾಷ್ಟ್ರದ ರಾಷ್ಟ್ರಕೂಟರಮೇಲೆ ಆಗಾಗ ದಾಳಿ ಮಾಡುತ್ತಲೇ ಇದಾನೆ. ಸಿಂಧೂ ನದಿಯ ಪ್ರಾಂತದಲ್ಲಿ ಬೆಳೆಯುತ್ತಿರುವ ಅರಬ್ ದಾಳಿಗಾರರ ಭೀತಿ ಇಲ್ಲವಾಗಿದ್ದಿದ್ದರೆ, ಮಿಹಿರಭೋಜ ಎಂದೋ ಭೃಗುಕಚ್ಛ ನಗರವನ್ನು ಆಕ್ರಮಿಸಿ ರಾಷ್ಟ್ರಕೂಟ ರಾಜ್ಯದತ್ತ ಕಾಲು ಚಾಚುತ್ತಿದ್ದುದು ಖಂಡಿತ. ಈ ಮಾತು ಮಾನ್ಯಖೇಟಕ್ಕೆ ಕುದುರೆ ಗಳನ್ನು ಮಾರಲುಬಂದ ಅರಬಿ ವ್ಯಾಪಾರಗಳಿಂದ ಚಕ್ರವರ್ತಿಗೇ ತಿಳಿದು ಬಂದಿದೆ.

ಇದೆಲ್ಲದರ ನಡುವೆ ನೃಪತುಂಗ ಚಕ್ರವರ್ತಿ ಮೈಯೆಲ್ಲ ಕಣ್ಣಾಗಿ ಬಾಳಬೇಕು. ಒಂದುಗಳಿಗೆ ಎಚ್ಚರ ಜಾರಿದರೂ ರಾಜ್ಯಕ್ಕೆ ವಿಪತ್ತು ಸಿದ್ಧ. ಕಂಚಿ, ವೆಂಗಿವೊಳಲು, ಮಧುರೆ, ತಲವನಪುರ, ಕನ್ಯಾಕುಬ್ಜ, ಧಾರಾ ನಗರ ಮೊದಲಾದ ರಾಜಧಾನಿಗಳಿಂದ ದಿನದಿನವೂ ಬೇಹುಗಾರರು ಕಳಿ ಸುವ ಸುದ್ದಿಗಳನ್ನು ಸ್ವತಃ ಕೇಳಿ ಹೀಗೆಂದು ನಿರ್ಧರಿಸಬೇಕು. ಸೇನೆ ಸದಾ ಸಮರಸಿದ್ಧತೆಯಲ್ಲಿರುವಂತೆ ನೋಡಿಕೊಳ್ಳಬೇಕು. ಈ ಕಾರಣ ಕ್ಕಾಗಿಯೇ ಚಕ್ರವರ್ತಿಗಳು ರಾಜಧಾನಿಯನ್ನೇ 'ಸ್ಥಿರೀಭೂತಕಟಕ'ವಾಗಿ ಮಾಡಿದ್ದರು. ದಿನ ದಿನವೂ ಮೂಲಬಲಗಳ ಪಾಳಯದಿಂದ ಸುದ್ದಿ ತರಿಸಿ ಅವುಗಳ ಯೋಗಕ್ಷೇಮ ನೋಡುತ್ತಿದ್ದರು. ಸಾಮಂತರ ಸೇನೆಗಳ ವಿವರ ತಿಳಿದು ಅವರಿಗೆ ಸೂಕ್ತ ಸಲಹೆ ಕೊಡುತ್ತಿದ್ದರು.

ಇದರೊಂದಿಗೆ ರಾಜ್ಯಭಾರದ ಸಾವಿರ ಕೆಲಸ, ನಿತ್ಯಕರ್ಮದ ಜಾತ್ರೆ. ಇದೆಲ್ಲದರ ಗೊಂದಲದಲ್ಲಿ ಎಷ್ಟೋ ದಿನ ಊಟ, ನಿದ್ರೆಗೆ ಬಿಡುವು ಸಿಗುವು ದಿರಲಿ, ಉಸಿರು ಹೊಯ್ಯಲು ಬಿಡುವು ಸಿಗುವುದೂ ಕಷ್ಟವಾಗುತ್ತಿತ್ತು.

ಇದೆಲ್ಲಾ ಒಂದು ತೂಕವಾದರೆ, ಚಕ್ರವರ್ತಿಗಳ ಹೃದಯಾಂತರಾಳ ದೊಳಗೆ ಕೊರೆವ ಯಾತನೆಯದೇ ಬೇರೊಂದು ತೂಕ.

ನೃಪತುಂಗ ಚಕ್ರವರ್ತಿಯು ವೈ ರಾಜ್ಯಭಾರದ ಸಹಸ್ರಕರ್ಮ ಗಳಲ್ಲಿ ಬಿಡುವಿಲ್ಲದೆ ನಿರತವಾಗಿದ್ದರೂ, ರಾಜ್ಯಕ್ಕಾಗಿ, ಪ್ರಜೆಗಳ ಹಿತಚಿಂತನೆ ಗಾಗಿ ತಮ್ಮ ಪ್ರಾಣಪಣ ಒಡ್ಡಿದ್ದರೂ, ಧರ್ಮಜಿಜ್ಞಾಸೆಯಲ್ಲಿ, ಸಾಹಿತ್ಯ ಚರ್ಚೆಯಲ್ಲಿ ಕಾಲಕಳೆಯಲು ಜೀವ ತುಡಿಯುತ್ತಿದೆ. ಅಷ್ಟು ಕೆಲಸ ದಲ್ಲೂ ಒಂದು ಗಳಿಗೆಯಾದರೂ ಬಿಡವು ಮಾಡಿಕೊಂಡು, ಶಕಟಾಯನ ರೊಂದಿಗೋ, ಗುಣಭದ್ರಾಚಾರ್ಯರೊಂದಿಗೋ, ಶ್ರೀವಿಜಯನೊಂದಿಗೋ ಧರ್ಮ, ಕಾವ್ಯ, ಅಲಂಕಾರಗಳ ಚರ್ಚೆ ಮಾಡುವರು. ಬಾಲ್ಯ ದಿಂದಲೂ ಅದೇ ಒಲವಿನ ವಿಷಯ. ಜಿನಸೇನಾಚಾರ್ಯರು ಶಸ್ತ್ರಾಭ್ಯಾ ಸಕ್ಕೆ ಒತ್ತಾಯಮಾಡಿ ಕಳಿಸಬೇಕಾಗಿತ್ತು. ಕಾವ್ಯಸುಧಾಪಿಪಾಸುವಾದ ಅರಸುಕುಮಾರನನ್ನು ದಿನದಿನವೂ ಆಚಾರ್ಯರು ಎಚ್ಚರಿಸುತ್ತಿದ್ದರು;

'ರಾಜ ಕುಮಾರ, ನಿನ್ನ ಆಸೆ ಅಭಿಲಾಷೆಗಳು ಮುಖ್ಯವಲ್ಲ. ಅರಸು ಕುಮಾರನಾಗಿ ಹುಟ್ಟಿದವನಿಗೆ, ತನ್ನ ರಕ್ಷಣೆಗೆ ಒಪ್ಪಿಸಲ್ಪಟ್ಟ ರಾಜ್ಯದ ಕ್ಷೇಮ ಚಿಂತನೆ ಮುಖ್ಯ. ಧರ್ಮದ ಬಗ್ಗೆ ನಿನಗೆ ತುಂಬಾ ಆಸಕ್ತಿ ಇದೆ. ಆದರೆ ಆ ಆಸಕ್ತಿಯಲ್ಲಿ ರಾಜಧರ್ಮವನ್ನು ಮರೆಯಬೇಡ. ಸ್ವಧರ್ಮ ಪರಿಪಾಲನೆ ಮಾಡದವನು, ಇಹ ಪರಗಳೆರಡರಲ್ಲೂ ಕೇಡಿಗೆ ಗುರಿಯಾಗು ವನು. ನಿನ್ನ ಕುಲಧರ್ಮವನ್ನು, ಆಶ್ರಮಧರ್ಮವನ್ನೂ ಮರೆಯಬೇಡ. ಇಹವನ್ನು ಮರೆತು ಪರಕ್ಕೆ ಎಳೆಸುವುದು ಮುಗಿಲಿಗೆ ಏಣಿ ಹಾಕಲು ಯತ್ನಿಸಿದಂತೆ. ಪ್ರತಿಯೊಬ್ಬರೂ ಅವರವರ ಮಾರ್ಗದಲ್ಲಿಯೇ ಮುಕ್ತಿ ಸಾಧನೆಗೆ ಯತ್ನಿಸಬೇಕು. ನಾನು ಶ್ರಮಣ—ನನಗೆ ಅದು ದಾರಿ; ನೀನು ದೊರೆ, ಸಂಸಾರಿ—ನೀನು ಆ ದಾರಿಯಲ್ಲೇ ನಡೆದು ಗುರಿ ಸೇರ ಬೇಕು. ತನ್ನಪಾಲಿಗೆ ಬಂದ ಕರ್ತವ್ಯವನ್ನು ಕುಶಲತೆಯಿಂದ, ತನ್ಮ ಯತೆಯಿಂದ ಮಾಡುವುದೇ ಯೋಗ.'

ದಿನದಿನವೂ ಬೋಧನೆಯ ಬೆಳಕು ನೀಡಿ, ಚಕ್ರವರ್ತಿಯನ್ನು ಬೆಳಸಿದ್ದರು ಆಚಾರ್ಯರು. ಅವರು ಮುಕ್ತರಾದಾಗ ಚಕ್ರವರ್ತಿ, ತಾಯಿ ಹಸುವನ್ನು ಕಳೆದುಕೊಂಡ ಕರುವಿನಂತೆ ಹಂಬಲಿಸಿದ್ದರು. ಬಾಳಿನ ಕಣ್ಣು ಕುರುಡಾದಂತೆ ಚಡಪಡಿಸಿದ್ದರು. ಆ ಹೊತ್ತಿನಲ್ಲಿ ಜಿನಸೇನಾ

ಚಾರ್ಯರ ಶಿಷ್ಯರಾದ ಗುಣಭದ್ರಾಚಾರ್ಯರು ಚಕ್ರವರ್ತಿಗಳನ್ನು ದುಃಖದ ಕಡಲಿನಿಂದಾಚೆಗೆ ದಾಟಿಸಿ ದಾರಿತೋರಿ ನುಡಿದಿದ್ದರು:

'ಮಹಾರಾಜ. ಎಲ್ಲ ಜೀವವೂ ನಶ್ವರ. ಜಲಬುದ್ಬುಧ ಎಷ್ಟು ಹೊಳಪಿನಿಂದ ಹೊಳೆದರೂ ಸಿಡಿಯಲೇ ಬೇಕು. ಮೃತರಾದವರ ಬಗ್ಗೆ ನಮಗೆ ಪ್ರೇಮವಿದ್ದರೆ, ಕಂಬನಿಗರೆಯುತ್ತಾ ಕುಳಿತುಕೊಳ್ಳುವುದೇ ಆ ಪ್ರೇಮಕ್ಕೆ ಸಾಕ್ಷಿಯಲ್ಲ; ಪರಲೋಕದಲ್ಲಿರುವ ಅವರ ಆತ್ಮಕ್ಕೆ ತೃಪ್ತಿಯಾಗುವಂತೆ, ಬದುಕಿರುವ ನಾವು ಬದುಕಬೇಕು. ಶೋಕದಿಂದ ಹತಾಶರಾಗಿ ಕುಳಿತರೆ ಅವರ ಆತ್ಮಕ್ಕೂ ಅತೃಪ್ತಿ, ನಮ್ಮ ಆತ್ಮಕ್ಕೂ ಕೇಡು.'

'ಅದು ನಿಜ ಆಚಾರ್ಯ, ಆದರೆ ಬದುಕು ನಶ್ವರವೆಂದು ಅರಿತೂ ಕನ್ನಡಿಯಲ್ಲಿ ಪ್ರತಿಬಿಂಬವನ್ನೂ ಕಂಡು ಹಲ್ಲುಕಿರಿಯುವ ಕೋಡಗನಂತೆ ಬದುಕಿನ ಕರ್ಮಚಕ್ರದಲ್ಲಿ ತೊಳಲಾಡಬೇಕೇ?'

'ಅದು ಜೀವಧರ್ಮ ಮಹಾರಾಜ. ನಟನು ತಾನು ಅಭಿನಯಿಸುತ್ತಿರುವುದು ಶುದ್ಧ ನಾಟಕ, ಸತ್ಯವಲ್ಲವೆಂದು ಅರಿತೂ, ತನ್ಮಯತೆಯಿಂದ ಅಭಿನಯಿಸುವುದಿಲ್ಲವೇ? ನಾವೂ ಹಾಗೇ. ಬದುಕು ನಶ್ವರವೆಂಬ ಅರಿವು ಬೇಕು—ನಿರ್ಲಿಪ್ತನಾಗಿ ಸಂಸಾರ ಸಾಗರದಲ್ಲಿ ಈಸಾಡಲು; ಈಸುತ್ತಿರುವವರೆಗೂ ಮುಳುಗಬಾರದೆಂಬ ಎಚ್ಚರವೂ ಬೇಕು. ಹದಿನಾರು ಸಹಸ್ರ ಪತ್ನಿಯರ ಭೋಗಭಾಗ್ಯದ ವಿಲಾಸದಲ್ಲಿದ್ದೂ ಯೋಗರತನಾದ ಭರತ ಚಕ್ರಿಯಂತೆ ಬಾಳಬೇಕು. ಯೋಗಭೋಗಗಳೆರಡನ್ನೂ ಸಮಚಾತುರಿಯಿಂದ ಸಾಧಿಸಬಲ್ಲ ಸವ್ಯಸಾಚಿತ್ವ ನಿಮಗೆ ಸಿದ್ಧಿಸಬೇಕೆಂದೇ ಗುರುದೇವರ ಆಶಯವಾಗಿತ್ತು. ಅವರ ಆಶೀರ್ವಾದವಿದೆ ನಿಮಗೆ. ಈ ನಿರ್ವಿಣ್ಣತೆಯನ್ನು ತೊರೆದು ಅದಕ್ಕೆ ಪ್ರಯತ್ನಪಡಿ. ಅರ್ಹಂತನ ಕೃಪೆ ನಿಮ್ಮ ಮೇಲಿರಲಿ.'

ಗುಣಭದ್ರಾಚಾರ್ಯರ ಸಮಯೋಚಿತವಾದ ಬೋಧನೆ ದುಃಖದ ಕತ್ತಲಲ್ಲಿ ದಾರಿತಪ್ಪುತ್ತಿದ್ದ ಚಕ್ರವರ್ತಿಗಳನ್ನು ಮತ್ತೆ ಸರಿದಾರಿಗೆ ನಡೆಸಿತ್ತು. ಒಂದು ಕ್ಷಣ ಕಣ್ಣುಮರೆಯಾಗಿದ್ದ ಕರ್ತವ್ಯಪಥ ಮತ್ತೆ ಕಣ್ಣೆದುರು ಸ್ಪಷ್ಟವಾಗಿ ಕಂಡಿತು.

ಆದರೂ ಈಗಲೂ ಆಗಾಗ ಅವರ ಮನಸ್ಸು, ಕಟ್ಟಿ ಹಾಕಿದ ಹಸು, ನಿಂತಲ್ಲೇ, ಹುಲ್ಲುಗಾವಲಿನ ಕನಸು ಕಾಣುವಂತೆ, ಪಂಜರದೊಳಗಿನ ಗಿಣಿ ಪಂಜರದ ಕಡ್ಡಿಗಳ ನಡುವಿನಿಂದ ಕಾಣುವ ಬಾಂದಳದ ಇಣಿಕು ನೋಟಕ್ಕೇ ಹಾತೊರೆಯುಂತೆ, ಸಿಂಹಾಸನದ ಮೇಲೆ ಕುಳಿತೂ, ತಪೋವನದ ಕನಸುಕಾಣುತ್ತದೆ.

ಮಗನಾಗಬೇಕೆಂದು ಬಯಸಿದ ಮಹಾರಾಜರ ಬಯಕೆಯ ಉತ್ಕಟತೆಗೆ ಪಿತೃಸಹಜವಾದ ಸಂತಾನಾಪೇಕ್ಷೆಯಂತೆ, ಈ ಕನಸೂ ಕಾರಣವಾಗಿತ್ತು. ಗಂಡುಮಗನಾಗಿ, ಅವನು ಈ ರಾಜ್ಯಭಾರ ಹೊರುವಂತಾದರೆ, ಅವನ ತಲೆಯಮೇಲೆ ರಾಜ್ಯರಕ್ಷಣೆಯ ಜವಾಬ್ದಾರಿಯ ಮಕುಟವಿಟ್ಟು, ತಾನು ತನ್ನ ಯೋಗಾಭ್ಯಾಸ, ಧರ್ಮಚಿಂತನೆಯಲ್ಲಿ ಶೇಷಾಯುಸ್ಸನ್ನು ಸವೆಸಬಹುದಲ್ಲಾ ಎಂದು ಅವರ ಹೃದಯ ಹಾತೊರೆಯುತ್ತಿತ್ತು.

ಅವರ ಬೇಡಿಕೆ ಸಫಲವಾದಂತೆ, ಮಹಾರಾಜ್ಞಿಯ ಗರ್ಭ ಸುಧಾಂಬುಧಿಯಲ್ಲಿ ಪುತ್ರಾವತಾರವಾಗಿತ್ತು.

ಆದರೆ ಆ ಜನನ, ಚಕ್ರವರ್ತಿಗಳು ಬಯಸಿದಂತೆ ಅಮಿಶ್ರಿತ ಆನಂದಕ್ಕೆ ಕಾರಣವಾಗದೆ, ರಾಜಜ್ಯೋತಿಷಿ ಗೋಲಯಭಟ್ಟರು ಹೇಳಿದ ಭವಿಷ್ಯದಿಂದಾಗಿ ಹರ್ಷಕ್ಕಿಂತ ಹೆಚ್ಚು ಚಿಂತೆಗೆ ಕಾರಣವಾಗಿತ್ತು.

ಆ ಚಿಂತೆಯಿಂದಾಗಿಯೇ ಮಹಾರಾಜರಿಗೆ ಮಗನ ಮೇಲೆ ಹೆಚ್ಚು ಪ್ರೀತಿ ತೋರಿಸಲೂ ಭೀತಿ. ಯಾರು ಬಲ್ಲರು—ಬರಲಿರುವ ಅಶುಭ ಯಾವಗಳಿಗೆಯಲ್ಲಿ ಯಾವ ರೂಪು ತಾಳಿ ಬರಬಹುದು ಎಂದು. ಮಗನ ಮೇಲೆ ಅತಿ ವಾತ್ಸಲ್ಯ ತೋರಿಸಿದರೆ, ಆ ವಾತ್ಸಲ್ಯವೇ ವಿಷವಾಗಿ ಪರಿಣಮಿಸಿದರೆ.... ಈ ಭೀತಿಯಿಂದಾಗಿಯೇ ಮಹಾರಾಜರು ಇದ್ದೊಬ್ಬ ಮಗನ ಮೇಲೂ ಪ್ರೀತಿ ತೋರಲು ಹೆದರುವರು. ಅಷ್ಟೇ ಅಲ್ಲ, ಮಹಾರಾಣಿ ಮಗನನ್ನು ಅಪ್ಪಿ ಮುದ್ದು ಮಾಡುವುದನ್ನು ನೋಡಿದಾಗಲೂ ಅದು ಅತಿಯಾಯಿತೇನೋ ಎನಿಸುವುದು. ಆದರೆ ತಂದೆಯೇ, ತಾಯಿಗೆ ಮಗನನ್ನು, ಏಕಮಾತ್ರ ಪುತ್ರನನ್ನು ಪ್ರೀತಿಮಾಡಬೇಡ ಎಂದು ಹೇಳುವುದು ಹೇಗೆ? ಯಾರ ಮನಸ್ಸನ್ನೂ ನೋಯಿಸಲಾರದವರು ಇನ್ನು ತಮ್ಮ ಮಡ

ದಿಯ ಮನನೋಯಿಸಲು ಸಾಧ್ಯವೇ? ಆದರೂ ತಾಯಿಯ ಆ ಮಮತೆ ಪರಿವಾರದ ಜನರ ಮೇರೆ ಮೀರಿದ ಆದರ, ಕಂಡ ಹಾಗೇ ರಾಜಕುಮಾರ ನಲ್ಲಿ ಕೆಟ್ಟ ಗುಣವೊಂದನ್ನು ಬೆಳೆಸುತ್ತಿದೆ. ಅದು ಅವನ ಹಟದ ಸ್ವಭಾವ.

ರಾಜಕುಮಾರ ಕೇಳಿದುದನ್ನು ಇಲ್ಲವೆನ್ನದೆ, ಬಾಯಲ್ಲಿ ಬರುತ್ತಿದ್ದ ಹಾಗೇ ಬಯಕೆ ತೀರಿಸಿ, ಆ ಎಳೆಯ ಮೆದುಳಿನಲ್ಲಿ ತಾನು ಬೇಡಿದುದೆಲ್ಲಾ ದೊರೆಯಲೇ ಬೇಕು ಎಂಬ ಮನೋಭಾವವನ್ನು ಮೂಡಿಸಿದೆ. ಹಾಗೇ ಅದು ಶೀಘ್ರವಾಗಿ ದೊರೆಯದಿದ್ದರೆ ಕೊಂಚ ಸಿಡುಕು, ಸ್ವಲ್ಪ ಅಳು— ಬೇಕೆಂದುದು ತನ್ನ ಬಳಿ ಹಾರಿಬರುವುದೆಂದೂ ಅವನಿಗೆ ಮನವರಿಕೆಯಾಗಿ ಈಗ ಬಯಸುವ ಬುದ್ಧಿ ಚಂಡಿತನಕ್ಕೆ ದಾರಿ ಮಾಡಿದೆ. ವಯಸ್ಸು ಬೆಳೆ ದಂತೆ ಈ ಹಟದ ಬುದ್ಧಿಯೂ ಬೆಳೆಯುತ್ತಿದೆ-ಒಮ್ಮೊಮ್ಮೆ ತಾಯಿಗೂ ಬೇಸರವಾಗುವಂತೆ.

ಹಾಗೇ ಬೆಳೆದು ಆರುವರ್ಷದ ಬಾಲಕನಾದ ರಾಜಕುಮಾರ ಕೃಷ್ಣ.

೫

ಒಂದು ದಿನ ಚಕ್ರವರ್ತಿಗಳು ಒಡ್ಡೋಲಗದಿಂದ ಹಿಂದಿರುಗಿದಾಗ ಮಹಾರಾಜ್ಞಿ ಸಂಪೂರ್ಣ ರಾಜವಸ್ತ್ರ ಧರಿಸಿದ ತಂದೆಯನ್ನು ಮಗನಿಗೆ ತೋರಿದಳು. ಮಹಾರಾಜರನ್ನು ಎವೆ ಇಕ್ಕದ ಕಣ್ಣಿನಿಂದ ನೋಡುತ್ತಿದ್ದ ರಾಜಕುಮಾರ.

‘ಅದೇನು ಹಾಗೇ ನೋಡುತ್ತಿ ಪುಟ್ಟ ದೊರೆ, ಅಪ್ಪಾಜಿಯವರನ್ನು ಎಂದೂ ನೋಡಿರಲಿಲ್ಲವೇ ? ಹಾಗೆ ನೋಡಬಾರದು ಕಂದಾ.’

–ಎಂದು ಮಗನಿಗೆ ಹೇಳಿದರು ಮಹಾರಾಣಿ.

‘ನೋಡಲಿ ಬಿಡು ಲಕ್ಷ್ಮಾ, ಈ ವಿಚಿತ್ರ ಉಡುಪು ಧರಿಸಿದ ಪ್ರಾಣಿ ಅಪ್ಪಾಜಿಯೋ ಎಂದು ಸಂದೇಹವಾಗಿರಬೇಕು. ಅಲ್ಲವೇ ಕೃಷ್ಣಾ? ನೋಡು, ಒಂದಲ್ಲ ಒಂದು ದಿನ ನಿನಗೂ ಈ ಉಡುಪು ಹಾಕುವ ಗ್ರಹ ಚಾರ ತಪ್ಪಿದ್ದಲ್ಲ. ನೀನೂ ಹಾಕಿಕೊಳ್ಳುತ್ತೀಯಾ?’

–ಮಹಾರಾಜರು ನಗುತ್ತಾ ಮಗನನ್ನು ಕೇಳಿದರು.

‘ಹೂ. ನಾನೂ ಹಾಕಿಕೊಳ್ಳುತ್ತೇನೆ ಅಪ್ಪಾಜಿ. ನನಗೂ ಕೊಡಿ’

—ಎಂದು ಕೇಳಿದ ರಾಜಕುಮಾರ.

'ಇದರಲ್ಲಿ ನಿನಗಾವುದು ಬೇಕು ಹೇಳು. ಈ ಕವಚವೇ, ಕತ್ತಿಯೋ, ಹಾರವೇ, ಕಟಿಮಾಲೆಯೋ, ತೋಳಬಂದಿಯೋ, ರತ್ನ ಕಂಕಣವೇ, ಮುದ್ರಿಕೆಯುಂಗುರವೇ—ಯಾವುದು ಬೇಕು ಹೇಳು?

–ತಾವು ಧರಿಸಿದ ಸಾರ್ವಭೌಮಪದವಿಸೂಚಕವಾದ ಒಂದೊಂದು ತೊಡವನ್ನೂ ತೋರಿಸಿ ಕೇಳಿದರು. ರಾಜಕುಮಾರ ಅದಾವುದಕ್ಕೂ ಮನಸು ಮಾಡದೆ, ಚಕ್ರವರ್ತಿಯ ಮಸ್ತಕದಮೇಲೆ ನವರತ್ನ ಕಾಂತಿಯಿಂದ ಥಳಥಳಿಸುತ್ತಿದ್ದ ರಾಜ ಮಕುಟವನ್ನು ನೋಡಿ–

'ನನಗದನ್ನು ಕೊಡಿ ಅಪ್ಪಾಜಿ'—ಎಂದ.

'ಛಿ! ಅದನ್ನು ಕೇಳಬಾರದು ಕೃಷ್ಣ'

ಎಂದು ಮಹಾರಾಣಿ ಕೇಳಬಾರದುದನ್ನು ಕೇಳಿದ ಮಗನನ್ನು ಗದರಿಕೊಂಡರು.

'ಊಹೂ–ನನಗದು ಬೇಕು ಅಪ್ಪಾಜಿ. ನಾನು ಅದನ್ನೇ ಹಾಕಿಕೊಳ್ಳಬೇಕು'

–ಕೃಷ್ಣ ತಾಯಿ ಗದರಿದುದನ್ನು ಕಂಡು ಸಿಟ್ಟಾಗಿ, ಪುಟ್ಟಕಾಲನ್ನು ನೆಲಕ್ಕೆ ಅಪ್ಪಳಿಸಿ ಹೇಳಿದ.

ಮಗನ ವಿಚಿತ್ರ ಬಯಕೆಯನ್ನು ಕಂಡು ಮಹಾರಾಜರಿಗೆ ನಗೆ ಬಂತು. ಆ ನಗುವಿನಲ್ಲೇ ಮಗನ ನೆತ್ತಿಯನ್ನು ನೇವರಿಸಿ—

'ಇದು ಬಹಳ ಭಾರ ಕೃಷ್ಣ. ಇದನ್ನು ಧರಿಸಲು ತುಂಬಾ ಶಕ್ತಿ ಬೇಕು. ನಿನಗೆ ಇದನ್ನು ಧರಿಸುವ ಶಕ್ತಿ ಬಂದಾಗ, ನೀನೇ ಇದನ್ನು ಹಾಕಿಕೊಳ್ಳುವೆಯಂತೆ. ಆ ದಿನ ನಾನೇ ಇದನ್ನು ನಿನ್ನ ನೆತ್ತಿಯ ಮೇಲಿಡುತ್ತೇನೆ ಕೃಷ್ಣ. ಇವೊತ್ತು ಬೇಡ.'

ಎಂದರು. ಕೃಷ್ಣನಿಗೆ ಮಹಾರಾಜರ ಮಾತು ಅರ್ಥವಾಗಲಿಲ್ಲ. ತನಗೆ ಬೇಕಾದುದನ್ನು ಕೊಡುವುದಿಲ್ಲ ಎನ್ನುತ್ತಿದ್ದಾರೆ ಎನ್ನುವುದಷ್ಟು ಮಾತ್ರ ಅರ್ಥವಾಯಿತು.

'ಊಹೂ. ನಾನಿವತ್ತೇ ಆ ಕಿರೀಟ ಹಾಕಿಕೊಳ್ಳುತ್ತೇನೆ ಅಪ್ಪಾಜಿ.'

'ಕೃಷ್ಣ, ಅದು ಮಹಾರಾಜರ ಕಿರೀಟ. ಅದು ನಿನಗೆ ಬೇಡ. ನಿನಗೆ ಅದಕ್ಕಿಂತ ಒಳ್ಳೆಯ ಕಿರೀಟ ಕೊಡುತ್ತೇನೆ, ಬಾ.'

–ಎಂದು ಮಗನ ಮನಸ್ಸನ್ನು ಆ ಕಿರೀಟದ ಕಡೆಯಿಂದ ಹೊರಳಿಸಲು ಯತ್ನಿಸಿ ಹೇಳಿದರು ಮಹಾರಾಣಿ.

'ಬೇರೇದು ನನಗೆ ಬೇಡ. ನನಗೆ ಅದೇ ಬೇಕು.'

'ಬೇಡ ಎಂದುದನ್ನು ಕೇಳಬಾರದು ಕೃಷ್ಣಾ....'

ಮಹಾರಾಣಿ ಗಡುಸಾದ ಧ್ವನಿಯಲ್ಲಿ ಹೇಳಿದರು.

'ನನಗದು ಬೇಕು, ಆ ಕಿರೀಟವೇ ಬೇಕು. ಅಪ್ಪಾಜಿ, ನನಗದನ್ನು ಕೊಡಿ'–ಎಂದು ಕೃಷ್ಣ ಮಹಾರಾಜರ ತೊಡೆಯನ್ನು ತೋಳುಗಳಿಂದ ಸುತ್ತಿ ಕೇಳಿದ.

'ಇದು ನನ್ನದಲ್ಲ ಕೃಷ್ಣ. ಯಾರೋ ನನಗೆ ಇದನ್ನು ಕೊಟ್ಟಿದ್ದಾರೆ. ಒಂದು ದಿನ ಅವರೇ ಇದನ್ನು ನಿನಗೆ ಕೊಡುತ್ತಾರೆ ಕೃಷ್ಣ. ಅಲ್ಲದೆ ಇದಕ್ಕೆ ಅಷ್ಟು ಅಪೇಕ್ಷೆ ಪಡಬಾರದು. ಇದರ ತುಂಬಾ ಬರೀ ಮುಳ್ಳಿದೆ.'

'ಮುಳ್ಳಿಲ್ಲ, ಸುಳ್ಳು, ಅಪ್ಪಾಜಿ.'

'ಊಹೂ. ಸುಳ್ಳಲ್ಲ ಕೃಷ್ಣ, ನಾನು ಹೇಳಿದುದು ನಿಜ. ನೀನಿನ್ನೂ ಚಿಕ್ಕವನು. ಅದಕ್ಕೇ ಇದರಲ್ಲಿ ಮುಳ್ಳಿರುವುದು ನಿನಗೆ ಕಾಣುವುದಿಲ್ಲ.'

'ಮುಳ್ಳಿಲ್ಲ ಅಪ್ಪಾಜಿ. ನನಗೆ ಗೊತ್ತು. ನನಗೆ ಕೊಡಬಾರದೂಂತ ಹಾಗೆ ಹೇಳುತ್ತಿದೀರಿ.'

ಮಗನಾಡಿದ ಮಾತು ಕೇಳಿ, ಚಕ್ರವರ್ತಿಯ ಹೃದಯಕ್ಕೇಕೋ ಮುಳ್ಳು ಮುರಿದಂತಾಗಿ, ಆ ವ್ಯಥೆ ಮುಖದಲ್ಲಿ ತೇಲಿ ಮರೆಯಾಯಿತು. ಧ್ವನಿ ಕೊಂಚ ಗಂಭೀರವಾಯಿತು.

'ನನಗೆ ಇದರ ಮೇಲೆ ಇದಕ್ಕಾಗಿ ಸುಳ್ಳಾಡುವಷ್ಟು ಆಸೆಯಿಲ್ಲ ಕೃಷ್ಣ. ಎಂದಿದ್ದರೂ ಇದು ನಿನ್ನದೇ. ಇದೇ ನಿನ್ನ ಬಳಿ ಬರುವವರೆಗೂ ಸುಮ್ಮನಿರು.'

'ಎಂದೋ ಬೇಡ. ಅದು ನನಗಿವತ್ತೇ ಬೇಕು.'

ಮಹಾರಾಜರ ಧ್ವನಿಯಲ್ಲಾದ ಸೂಕ್ಷ್ಮ ಬದಲಾವಣೆಯನ್ನು ಗುರುತಿಸಿದ ಮಹಾರಾಣಿ, ತಂದೆಯ ಕಾಲುಸುತ್ತಿದ ಮಗನನ್ನು ತಮ್ಮತ್ತ ಎಳೆದುಕೊಂಡು ಹೇಳಿದರು—

'ಮಾತು ಅತಿಯಾಯಿತು ಕೃಷ್ಣಾ....'

'ಸ್ವಲ್ಪ ಸುಮ್ಮನಿರು ಲಕ್ಷ್ಮಿ....'

ಎಂದು ಮಗನ ಮೇಲಿನ ಸಿಟ್ಟಿನಿಂದ ಮುಖ ಕೆಂಪಾದ ಅರಸಿಯ ಬೆನ್ನನ್ನು ನೇವರಿಸಿ, ಮಗನ ಮುಖದತ್ತ ತೀಕ್ಷ್ಣವಾಗಿ ನೋಡುತ್ತಾ ಕೇಳಿದರು—

'ನಿನಗೀಗಲೇ ಇದನ್ನು ಕೊಟ್ಟರೆ ನಾನು ಕಾಡಿಗೆ ಹೋಗಬೇಕಾಗುವುದಲ್ಲಾ ಕೃಷ್ಣಾ....'

'ಏಕೆ?'

'ನನಗಿದನ್ನು ಕೊಟ್ಟವರು, ನನ್ನನ್ನು ಕಾಡಿಗೆ ಕಳಿಸುತ್ತಾರೆ....'

'ಕಳಿಸಲಿ.'

'ಕೃಷ್ಣಾ....'

ಮಗನ ಮಾತು ಕೇಳಿ ಮಹಾರಾಣಿ ಸಹನೆ ಸೋತು, ಕರ್ಕಶ ಧ್ವನಿಯಲ್ಲಿ ಮಗನ್ನು ಕರೆದರು.

'ಷ್....ಲಕ್ಷ್ಮಿ....ಹಾಗಾದರೆ ನಿನಗೆ ನಾನು ಬೇಕೋ, ಈ ಕಿರೀಟ ಬೇಕೋ ಕೃಷ್ಣ?'

'ಕಿರೀಟ!'

—ಖಚಿತವಾದ ಧ್ವನಿಯಲ್ಲಿ ಹೇಳಿದ ರಾಜಕುಮಾರ. ಮಗನಾಡಿದುದನ್ನು ಕೇಳಿ ಮಹಾರಾಣಿ ಚಾಟಿಯಏಟು ತಿಂದಂತೆ ತಲ್ಲಣಿಸಿದರು.

'ಅಪ್ಪಾಜಿ ಕಾಡಿಗೆ ಹೋದರೆ, ನಾನೂ ಕಾಡಿಗೆ ಹೋಗುತ್ತೇನಲ್ಲ ಕೃಷ್ಣಾ. ನಾನೂ ನಿನಗೆ ಬೇಡವೇ?'

—ದುಃಖ ತುಂಬಿತುಳುಕುವ ಧ್ವನಿಯಲ್ಲಿ ಮಗನನ್ನು ಕೇಳಿದರು ಮಹಾರಾಣಿ.

'ಹೋಗು. ನೀನೂ ಕಾಡಿಗೆ ಹೋಗು. ನನಗೆ ಕಿರೀಟ ಬೇಕು. ಅಪ್ಪಾಜಿ, ನನಗದನ್ನು ಕೊಡುತ್ತೀರೋ ಇಲ್ಲವೋ....' ಎಂದು ಕೃಷ್ಣ ಅಳು ಮೊಗ ಮಾಡಿದ.

'ನೀನು ಮಗನಲ್ಲ, ಹೊಟ್ಟೆಯಲ್ಲಿ ಹುಟ್ಟಿದ ವಿಷಕ್ರಿಮಿ' ಎಂದು ಕರ್ಕಶವಾಗಿ ಹೇಳಿ ಮಹಾರಾಣಿ, ಅಲ್ಲೇ ಇದ್ದ ಕಂಚಿನ ಸಣ್ಣ ಜಾಗಟೆ ಯನ್ನು ಬಾರಿಸಿ, ದಾಸಿಯನ್ನು ಕರೆದರು.

ದಾಸಿ, ಹೆಜ್ಜೆ ಸದ್ದಾಗದಂತೆ, ಆದರೆ ವೇಗವಾಗಿ ಬಂದು, ಅವ ರೀರ್ವರಿಗೂ ನಮಸ್ಕರಿಸಿ—

'ಏನಪ್ಪಣೆ ದೇವಿ?' ಎಂದಳು.

'ಯುವರಾಜನನ್ನು ಕರೆದುಕೊಂಡು ಹೋಗು' ಎಂದು ದಾಸಿಗೆ ಅಪ್ಪಣೆ ಮಾಡಿದರು ಮಹಾರಾಣಿ.

ದಾಸಿ, ಬಾಲಕನಾದರೂ ರಾಜಕುಮಾರನಿಗೆ ತೋರುವ ಗೌರವ ವನ್ನು ತೋರಿ, ಕೃಷ್ಣನನ್ನು ಎತ್ತಿಕೊಳ್ಳಲು ಹೋದಳು. ತಾನು ಕೇಳಿದ ಕಿರೀಟವನ್ನು ಕೊಡದಿದ್ದಕ್ಕಾಗಿ ಸಿಟ್ಟಿನಿಂದ ಬುಸುಗುಟ್ಟುತ್ತಿದ್ದ ಕೃಷ್ಣ, ತನ್ನನ್ನು ಎತ್ತಿಕೊಳ್ಳಲು ಬಂದ ದಾಸಿಯ ತೋಳನ್ನು ಕಟಕ್ಕನೆ ಕಡಿದ, ದಾಸಿಯ ತೋಳಿನಿಂದ ರಕ್ತ ಚಿಮ್ಮಿವಂತೆ. ನೋವಿನಿಂದ 'ಹಾ' ಎಂದು ಚೀರಹೊರಟ ದಾಸಿ, ಮಹಾರಾಜ-ಮಹಾರಾಣಿಯರ ಇದಿರು ಚೀರ ಲಾರದೆ ಹಾಗೇ ಆ ನೋವಿನ ಧ್ವನಿಯನ್ನು ಸೆರೆಹಿಡಿದು ತೋಳಲ್ಲಿ ತುಯ್ಯುವ ರಾಜಕುಮಾರನನ್ನು ಎತ್ತಿಕೊಂಡು ಹೊರಟಳು.

'ಕೆಂಚಲೆ, ಬಿಡು ಅವನನ್ನು ಕೆಳಗೆ.'

ಗದ್ದರಿಸಿ ಹೇಳಿದರು ಮಹಾರಾಣಿ. ಮಹಾರಾಣಿಯ ಕಠಿಣ ಧ್ವನಿ ಕೇಳಿ ರಾಜಕುಮಾರನನ್ನು ಕೆಳಗಿಳಿಸಿ ಹೆದರಿ ನಿಂತಳು ದಾಸಿ.

'ಹೋಗು ಅಲ್ಲಿರುವ ಛಡಿ ತೆಗೆದುಕೊಂಡು ಬಾ.'

ದಾಸಿಗೆ ಅಪ್ಪಣೆ ಮಾಡಿದರು ಮಹಾರಾಣಿ. ಆ ಮಾತು ಕೇಳಿ ದಾಸಿ ಮತ್ತಷ್ಟು ಗಾಬರಿಯಾಗಿ ನಡುಗುತ್ತಾ ನಿಂತಳು. ಅವಳು ತಮ್ಮ ಮಾತು ಕೇಳದುದನ್ನು ಕಂಡು, ಮಹಾರಾಣಿ ತಾವೇ ಅಷ್ಟು ದೂರ ವೇಗ ವಾಗಿ ನಡೆದು, ಛಡಿಯನ್ನು ತಂದು—

'ಕೃಷ್ಣ, ಬಾ ಇಲ್ಲಿ' ಎಂದು ಕರ್ಕಶವಾಗಿ ಕೂಗಿದರು. ತಾಯಿಯ ಆ ಚುರುಕಾದ ಧ್ವನಿ ಕೇಳಿ ಕೃಷ್ಣನೂ ಗಾಬರಿಯಾದ. ಅದುವರೆಗೂ ಸುಮ್ಮನಿದ್ದ ಮಹಾರಾಜರು—

'ಲಕ್ಷ್ಮೀ....' ಎಂದು ಮಹಾರಾಣಿಯ ಬಳಿ ಸಾರಿ, ಅವರ ಕೈ ಹಿಡಿದರು.

'ದಯವಿಟ್ಟು, ಪ್ರಭು, ಅಡ್ಡಿ ಬರಬೇಡಿ' ಎಂದವರೇ, ತಮ್ಮತ್ತ ತಿರುಗಿದ ಕೃಷ್ಣನ ಕೈ ಎಳೆದುಕೊಂಡು, ಅವನ ಅಂಗೈ ಮೇಲೆ ಛಡಿಯಿಂದ ಹೊಡೆದರು. ರಾಜಕುಮಾರನ ಮೃದುವಾದ ಅಂಗೈಯ ಮೇಲೆ ರಕ್ತದಲ್ಲಿ ಬರೆದಂತೆ ಮೂಡಿತು ಛಡಿಯ ಗುರುತು. ಏಟಿನ ನೋವು ತಡೆಯಲಾರದೆ ಕೃಷ್ಣ—'ಅಮ್ಮಾ' ಎಂದು ಚೀರಿದ.

'ತೊಲಗಾಚೆ. ಕೆಂಚಲೆ, ರಾಜಕುಮಾರನನ್ನು ಎಳೆದುಕೊಂಡು ಹೋಗು.' ಎಂದರು ಮಹಾರಾಣಿ.

ನೋವಿನಿಂದ ತಲ್ಲಣಿಸುವ ರಾಜಕುಮಾರನನ್ನು ಎತ್ತಿಕೊಂಡು ವೇಗವಾಗಿ ಕಣ್ಣು ಮರೆಯಾದಳು ದಾಸಿ. ದಾಸಿ ಕಣ್ಣುಮರೆಯಾದ ಕೂಡಲೇ, ಮಹಾರಾಣಿ ಕೈಯಲ್ಲಿದ್ದ ಛಡಿಯನ್ನು ಕೆಲಕ್ಕೆ ಬಿಸುಟು, ಉಕ್ಕಿಬಂದ ದುಃಖದ ಸೆಳತಕ್ಕೆ ಸೋತು, ಬಳಿಯಲ್ಲಿದ್ದ ವಿರಾಮಾಸನದ ಮೇಲೆ ಉರುಳಿದರು—ತಾವೇ ಛಡಿಯ ಏಟು ತಿಂದವರಂತೆ.

ದುಃಖದ ಬೇಗೆಯಲ್ಲಿ ಬೇಯುವ ಮಡದಿಯನ್ನು, ಎತ್ತಿ ಎದೆಗೊತ್ತಿಕೊಂಡು ಹೇಳಿದರು ಮಹಾರಾಜರು—

'ಲಕ್ಷ್ಮೀ....ಈ ದುಃಖದ ಹೆದರಿಕೆಗೇ ನಾನು ಅತಿ ಪ್ರೀತಿ ತೋರಿಸುವುದು ಬೇಡವೆಂದದ್ದು. ಹೋಗಲಿ ಬಿಡು....'

'ಪ್ರಭು, ನಿಮಗೆ ತಕ್ಕ ಮಗನನ್ನು ಕೊಡಲಿಲ್ಲ, ನಾನು ನಿರ್ಭಾಗ್ಯೆ' —ಎಂದರು ಮಹಾರಾಣಿ ಬಿಕ್ಕುತ್ತಾ.

'ಹಾಗನ್ನಬಾರದು ಲಕ್ಷ್ಮೀ. ತಾಯಿಯೇ ಹಾಗೆ ಹೇಳಬಹುದೆ. ಹುಡುಗಬುದ್ಧಿಯ ಮಾತನ್ನು ಅಷ್ಟು ಮನಸಿಗೆ ಹಚ್ಚಿ ಕೊಳ್ಳಬಾರದು.'

'ಇಲ್ಲ ಪ್ರಭು, ನನಗಿಂದು ತಿಳಿಯಿತು, ನಾನು ಹಡೆದುದು ಮಗನನ್ನಲ್ಲ, ದುಃಖವನ್ನು.'

'ಅಷ್ಟು ನಿರಾಶೆಯು ಕಠಿಣತೆಯನ್ನು ತಳೆಯಬಾರದು ದೇವಿ. ಇಂದು ದುಃಖವೆಂದು ಕಂಡುದು, ನಾಳೆ ಆನಂದವಾಗಬಹುದು.'

. 'ಇಲ್ಲ ಪ್ರಭು, ಇದು ಆನಂದವಾಗುವುದಿಲ್ಲ. ಕಹಿಸೋರೆಯ ಹೀಚು, ಬಲಿತಾಗಲೂ ವಿಷವೇ.'

'ಊಹೂ. ಅಂಕೆ ಇಲ್ಲದೆ ಬೆಳದದ್ದರಿಂದ ಸ್ವಲ್ಪ ಹಟಮಾರಿತನ ಬಂದಿದೆ. ಸರಿಯಾದ ಗುರುವಿನ ಬಳಿ ಸೇರಿದರೆ, ಸರಿಹೋಗುತ್ತಾನೆ. ಚಿಂತೆ ಮಾಡಬೇಡ ಲಕ್ಷ್ಮಿ, ಅಮೃತದಲ್ಲಿ ವಿಷ ಜನಿಸುವುದಿಲ್ಲ.'

'ಹಲಾಹಲ ಹುಟ್ಟಿದುದು ಕ್ಷೀರಸಾಗರದಲ್ಲೇ ಪ್ರಭು....'

'ಹುಚ್ಚು ಭೀತಿ. ಬಿಡು ಅದನ್ನು. ಇನ್ನು ಮೇಲೆ ಕೊಂಚ ಪ್ರೀತಿ ಕಡಮೆ ಮಾಡಿ, ಅಂಕೆಯಲ್ಲಿಡು. ಸರಿಹೋಗುತ್ತಾನೆ.'

—ಎಂದು ಮಹಾರಾಜರು ಲಕ್ಷ್ಮಿದೇವಿಯನ್ನು ಸಂತೈಸಿದರು. ಆದರೆ ಅವರಾಡಿದ ಮಾತಿನಲ್ಲಿ ಏಕೋ ಅವರಿಗೇ ನಂಬಿಕೆ ಇದ್ದಂತಿರಲಿಲ್ಲ. ಮಹಾರಾಣಿಯವರೂ ಸಮಾಧಾನವಾದಂತೆ ತೋರಿಸಿಕೊಂಡರಾದರೂ ಅವರೆದೆಯಲ್ಲೂ ಮುಳ್ಳು ಆಳುಕುತ್ತಲೇ ಇದ್ದಿತು. ಕೊರಗಿನ ಕಿಡಿ ಹೊತ್ತಿತು ಅವರ ಮಮತೆಯ ಹೂ ಬಳ್ಳಿಯಲ್ಲಿ.

೭

ಅಂದಿನಿಂದ ರಾಜಕುಮಾರನನ್ನು ದಾರಿಗೆ ತರುವ ವಿಚಾರ, ಉಳಿದೆಲ್ಲ ರಾಜಕಾರಣದ ಯೋಚನೆಗಳಿಗಿಂತ ಹಿರಿದಾಗಿ ಕಾಡತೊಡಗಿತು ಮಹಾರಾಜರನ್ನು. ಏನು ಕೆಲಸ ಮಾಡುತ್ತಿದ್ದರೂ, ಏನು ಯೋಚನೆ ಮಾಡುತ್ತಿದ್ದರೂ ಆ ಯೋಚನೆಯ ನಡುವೆ ತಟಕ್ಕನೆ ಹಟಮಾರಿ ಮಗನ ನೆನಪಾಗಿ, ಅವರ ಚಿತ್ತಜಲ ಕದಡುವುದು. ಹಾಗೇ ಚಿಂತಿಸುತ್ತಾ ಕುಳಿತುಕೊಳ್ಳುವರು—

'ಈ ರಾಜ್ಯ, ಈ ಸಿಂಹಾಸನ, ಈ ರಾಜಮುಕುಟಕ್ಕೆ ಯೋಗ್ಯನಾದಾನೇ ಕೃಷ್ಣ? ಇದೆಲ್ಲವನ್ನೂ ನಿರ್ವಹಿಸುವ ಶಕ್ತಿ ಬರುವುದೇ ಅವನಿಗೆ?'

ಕಾವೇರಿಯಿಂದ ಗೋದಾವರಿಯವರೆಗೆ ಹರಡಿದ ರಾಜ್ಯ, ಅದರ ಸುತ್ತಲೂ ಹೊತ್ತುಕಾಯುತ್ತಾ ನಿಂತ ವೈರಿಸಮೂಹ, ರಾಜ್ಯಾಡಳಿತದ

ಸಹಸ್ರ ಸಮಸ್ಯೆಗಳು ನೆನಪಾಗಿ, ಆವರೆದೆಯಲ್ಲ ನಿರಾಶೆಯು ಹೊಗೆ ಕವಿಯುವುದು. ತಲೆ ಕುಸಿದು ಕುಳಿತುಕೊಳ್ಳುವರು 'ಮಹಾರಾಣಿಯು ಗರ್ಭದಲ್ಲಿ, ಈ ರಾಜ್ಯಕ್ಕೆ ಯೋಗ್ಯನಾದ ಮತ್ತೊಬ್ಬ ಮಗನಾಗ ಬಾರದೇ?' ಎಂದು ಬಯಸಿ,

ಬಯಕೆ, ಆಸೆ ದುಃಖಕ್ಕೆ ದಾರಿ ಎಂದು ಮಹಾರಾಜರು ಓದಿ, ಕೇಳಿ ಅರಿತಿದ್ದರು. ಆದರೆ ಆ ಮಾತು ಇಷ್ಟು ಕಟು ಸತ್ಯವಾಗಿ ತಮ್ಮ ಜೀವನದಲ್ಲೇ ಮನವರಿಕೆಯಾಗುವುದೆಂದು ಊಹಿಸಿರಲಿಲ್ಲ. ಎಷ್ಟಾದರೂ ಸತ್ಯ ಊಹೆಗಿಂತ ವಿಚಿತ್ರ! ಒಮ್ಮೆ ಬಯಕೆಯ ಬಳಿಯಲ್ಲಿ ಬಿಟ್ಟ ಫಲವನ್ನು ಕಂಡೇ ಮಹಾರಾಜರಿಗೆ ಮತ್ತೊಮ್ಮೆ ಬಯಸಲೂ ಹೆದರಿಕೆಯಾಗಿತ್ತು.

ಈ ಚಿಂತೆ—ಬಯಕೆಗಳ ನಡುವೆಯೇ ದಿನಗಳುರುಳಿ ರಾಜಕುಮಾರ ಎಂಟುವರ್ಷ ವಯಸ್ಸಿನವನಾದ. ಅವನ ವಯಸ್ಸು ಹೆಚ್ಚಿದಂತೆ ಮಹಾರಾಜರ ಚಿಂತೆ ಹೆಚ್ಚಿತು. ಇಷ್ಟು ದಿನ ಚಿಕ್ಕವಯಸ್ಸು, ಬೆಳೆಯಲಿ ಎಂದು ದಿನ ದೂಡಿದುದಾಗಿತ್ತು. ಇನ್ನು ದಿನ ದೂಡುವಂತಿರಲಿಲ್ಲ. ಯಾರಾದರೂ ಸರಿಯಾದ ಗುರುಗಳ ಬಳಿಬಿಟ್ಟು ರಾಜಕುಮಾರನ ಬುದ್ಧಿ ತಿದ್ದಿಸಬೇಕು. ಇಲ್ಲವಾದರೆ ಬಲಿತ ಬುದ್ಧಿ ದಾರಿಗೆ ಬರುವುದೇ? ಹಾಗೆಂದುಕೊಂಡು, ತಮಗೆ ಸರಿಯೆಂದು ಕಂಡುಬಂದ ಒಬ್ಬಿಬ್ಬರನ್ನು ರಾಜಕುಮಾರನಿಗೆ ವಿದ್ಯಾಭ್ಯಾಸ ಮಾಡಿಸಲು ಗೊತ್ತುಮಾಡಿದರು. ಆದರೆ ಅಂತಿಂಥವರ ಕೈಯಲ್ಲಿ ಅದು ಆಗುವ ಕೆಲಸವಲ್ಲವೆಂದು ಬಹು ಬೇಗ ಮಹಾರಾಜರಿಗೆ ಮನವರಿಕೆಯಾಯಿತು — ರಾಜಕುಮಾರನಿಗೆ ಶಿಕ್ಷಣ ಕೊಡಲು ನೇಮಿಸಿದ ಚಂದ್ರಪ್ರಭಾಚಾರ್ಯರು ತಮ್ಮ ವಿಫಲತೆಯನ್ನು ಸೂಚಿಸಿದಾಗ.

ಆಚಾರ್ಯರು ಮಹಾರಾಜರನ್ನು ಕಂಡು, ಫಲ ಮಂತ್ರಾಕ್ಷತೆಯನ್ನಿತ್ತು ಹೇಳಿದರು—

'ಪ್ರಭು, ರಾಜಕುಮಾರರಿಗೆ ಪಾಠ ಹೇಳುವುದು ನನ್ನಿಂದ ಆಗದ ಕೆಲಸ ಮನ್ನಿಸಬೇಕು.'

ಅವರ ಮಾತಿನಲ್ಲಿ ಖಿನ್ನತೆ ತಾನೇತಾನಾಗಿ ಒಡಮೂಡಿತ್ತು.

'ಏನಾಯಿತು ಆಚಾರ್ಯರೆ?'

'ಏನೂ ಇಲ್ಲ ಪ್ರಭು.'

'ಊಹೂ. ಏನೋ ಆಗಿದೆ. ನೀವೇನೋ ವಿಷಯವನ್ನು ನಮ್ಮಿಂದ ಮುಚ್ಚಿಡುತ್ತಿದ್ದೀರಿ. ಏನಿದ್ದರೂ ನಿಶ್ಶಂಕೆಯಿಂದ ಹೇಳಿ. ರಾಜ ಕುಮಾರರ ವಿಷಯವೆಂದು ಸಂಕೋಚಪಡಬೇಕಾದುದಿಲ್ಲ. ನಿಮ್ಮ ವಿಷ ಯದಲ್ಲೇನಾದರೂ ತಪ್ಪು ನಡೆದುಕೊಂಡರೇ?'

'ಇಲ್ಲ ಪ್ರಭು. ಅವರಿಗೆ ಪಾಠ ಹೇಳುತ್ತೇವೆ ಎಂದು ಬಂದುದು ನಮ್ಮದೇ ತಪ್ಪಾಯಿತು. ನಮ್ಮಿಂದ ಅವರು ಕಲಿಯಬೇಕಾದುದೇನೂ ಇಲ್ಲ.'

'ಅಂದರೆ....'

ಅವರಾಡಿದ ಮಾತು ಕೇಳಿ ಚಕಿತರಾಗಿ ಕೇಳಿದರು ಮಹಾರಾಜರು.

'ನಿಜ ಪ್ರಭು. ಎಲ್ಲ ಪಾಠಗಳಿಗಿಂತಲೂ ದೊಡ್ಡದಾದ ಪಾಠ ವನ್ನು ರಾಜಕುಮಾರರು ಕಲಿತಿದಾರೆ....'

'ಯಾವ ಪಾಠವನ್ನು ?'

'ತಾವು ರಾಜಕುಮಾರರು, ಉಳಿದವರು ತಮ್ಮ ಆಶ್ರಿತವರ್ಗ ಎಂಬ ಪಾಠ ಅವರು ಕಲಿತಿದಾರೆ ಪ್ರಭು, ಆ ಪಾಠ ಬೆಳೆದ ನೆಲದಲ್ಲಿ ಬೇರಾವ ಪಾಠವೂ ನಾಟುವುದಿಲ್ಲ. ದೊರೆಗಳ ಅಪ್ಪಣೆಯಾದರೆ ಒಂದು ಮಾತು ಬಿನ್ನವಿಸಿಕೊಳ್ಳುತ್ತೇನೆ'

'ಹೇಳಿ ಆಚಾರ್ಯ?'

'ರಾಜಕುಮಾರರಿಗೆ ಪಾಠಹೇಳುವ ಮರ್ಯಾದೆ ತಪ್ಪಿದರೂ, ಅವರಮೇಲೆ ನನಗೆ ಮೊದಲಿದ್ದಷ್ಟೇ ಪ್ರೀತಿ ಇದೆ ಪ್ರಭು. ನನ್ನ ಮಾತನ್ನು ತಪ್ಪು ತಿಳಿಯಬಾರದು.'

'ನಮ್ಮ ಮುಂದೆ ಮಾತಾಡುವಾಗ ತಾವು ಆ ಬಗೆಯ ಸಂಕೋಚ ತೋರಿಸುವುದು ನಮಗೇ ಶ್ರೇಯಸ್ಕರವಲ್ಲ ಆಚಾರ್ಯ. ಹೇಳಬೇಕಾ ದುದನ್ನು ಆಶೀರ್ವಾದವೆಂದು ಹೇಳಿ.'

ಮಹಾರಾಜರಾಡಿದ ಮಾತನ್ನು ಕೇಳಿ, ವೃದ್ಧ ಚಂದ್ರಪ್ರಭಾ ಚಾರ್ಯರ ಕಣ್ಣಲ್ಲಿ ಅಯಾಚಿತವಾಗಿ ನೀರಾಡಿತು. ಹೇಳಿದರು—

'ಮುಕ್ತಕಂಠದಿಂದ ಹೇಳುತ್ತೇನೆ ಪ್ರಭು—ನೂರು ವರ್ಷ-ಅಲ್ಲ ಸಾವಿರ ವರ್ಷ ಬೆಳಕಾಗಿ ಬಾಳಿ.'

'ಭಗವದನುಗ್ರಹ'

'ರಾಜಕುಮಾರರ ವಿಷಯದಲ್ಲಿ ನಾನು ಹೇಳುವುದಿಷ್ಟೇ ಮಹಾ ಪ್ರಭು. ಅರಮನೆಯ ವಾತಾವರಣ ತಪ್ಪಿಸುವವರೆಗೂ ಅವರಿಗೆ ವಿದ್ಯೆ ಹತ್ತುವುದಿಲ್ಲ. ಹಾಗೇ ರಾಜಕುಮಾರರಿಗೆ ಯಾರಲ್ಲಿ ಗೌರವವಿದೆಯೋ, ಅವರನ್ನು ಗುರುಗಳಾಗಿ ನೇಮಿಸಿ. ತಾವು ನನ್ನಲ್ಲಿ ಏನೋ ನಂಬಿಕೆ ಯಿಟ್ಟು ದೊಡ್ಡ ಜವಾಬದಾರಿಯ ಕೆಲಸ ಒಪ್ಪಿಸಿದಿರಿ. ಪ್ರಭುವಿನ ಭರವಸೆಗೆ ತಕ್ಕವನಾಗಲಿಲ್ಲ ನಾನು. ಮನ್ನಿಸಬೇಕು. ಅಪ್ಪಣೆಯಾದರೆ ಹೋಗಿಬರುತ್ತೇನೆ.'

'ರಾಜಕುಮಾರರಿಗೆ ನಾವು ಬುದ್ಧಿಹೇಳುತ್ತೇವೆ ಆಚಾರ್ಯ. ದುಡುಕಿ ಅವಿನಯತೆಯ ಮಾತಾಡಿದ್ದರೆ ಕ್ಷಮಿಸಿ, ಮತ್ತೊಂದು ಬಾರಿ ಪ್ರಯತ್ನಮಾಡಿ.

'ಅದರಿಂದ ಉಪಯೋಗವಾಗುವುದಿಲ್ಲ ಪ್ರಭು. ಶಿಷ್ಯನಿಗೆ ಗುರು ವಿನಲ್ಲಿ ಗೌರವವಿಲ್ಲವಾದಲ್ಲಿ ವಿದ್ಯೆ ವಿಕಾಸವಾಗುವುದಿಲ್ಲ. ಆದ್ದರಿಂದ ಆ ಪ್ರಯತ್ನ ಬೇಡ. ನಮಗಿನ್ನು ಅಪ್ಪಣೆಯೇ?'

'ಸ್ವಲ್ಪ ತಡೆಯಿರಿ ಆಚಾರ್ಯ'

—ಎಂದು ಹೇಳಿ ಮಹಾರಾಜರು, ಬೆಳ್ಳಿಕಟ್ಟಿಗೆಯ ಆಳನ್ನು ಕರೆದು, ಭಂಡಾರದಿಯಿಂದ ಶಾಲುಜೋಡಿ, ನೂರು ನಿಷ್ಕ ನಾಣ್ಯಗಳನ್ನು ಹೊನ್ನ ಹರಿವಾಣದಲ್ಲಿ ತರಿಸಿ, ಆಚಾರ್ಯರಿಗಿತ್ತು ಹೇಳಿದರು—

'ಆಚಾರ್ಯ, ತಾವು ನಮ್ಮ ಮೇಲಿನ ಅಭಿಮಾನದಿಂದ ಏನಾಯಿ ತೆಂಬುದನ್ನು ಹೇಳದಿದ್ದರೂ, ರಾಜಕುಮಾರರಿಂದ ಅಪಚಾರವಾಗಿದೆ ಯೆಂಬುದಷ್ಟು ನಮಗೆ ಮನವರಿಕೆಯಾಗಿದೆ. ತಾವು ಅಸಮಾಧಾನಪಡ ಬಾರದು. ನಿಮ್ಮಂಥವರ ಅಸಮಾಧಾನದ ನಿಟ್ಟುಸಿರು ಸೋಕಿದರೆ ಈ ರಾಜ್ಯ ಕರ್ಪೂರದಂತೆ ದಹಿಸಿಹೋಗುತ್ತದೆ. ಹೋಗುವಾಗಲೂ ಒಳಿತಾಗಲೆಂದು ಹರಸಿಹೋಗಿ. ನಮ್ಮ ಮಕ್ಕಳು ನಿಮ್ಮಿಂದ ವಿದ್ಯಾ ದಾನ ಪಡೆವ ಭಾಗ್ಯ ಪಡೆದು ಬರಲಿಲ್ಲ. ಅದು ನಮ್ಮ ದೌರ್ಭಾಗ್ಯ.'

ದೊರೆಗಳ ಆ ಒಂದೊಂದು ಮಾತಿನಲ್ಲೂ ಅವರ ಹೃದಯದ ಅಪಾರ ಯಾತನೆ ತೆರೆತೂಗುತ್ತಿತ್ತು. ಅವರ ಮಾತನ್ನು ಕೇಳಿದ ಬಳಿಕ ಆಚಾರ್ಯರಿಗೆ ಮಾತಾಡಲಾಗಲಿಲ್ಲ, ಗಂಟಲು ಗದ್ಗದವಾಯಿತು. ಬರಲಾರೆನೆನ್ನುವ ಮಾತನ್ನು ಬಲವಂತವಾಗಿ ಎಳೆತಂದು—

'ಪ್ರಭು ಈ ರಾಜ್ಯಕ್ಕೆ ನಿಮ್ಮ ಸದ್ಗುಣವೇ ಪರಮ ರಕ್ಷಾದೇವತೆ' ಎಂದು ನುಡಿದು ಮರ್ಯಾದೆಯಿಂದ ಮಹಾರಾಜರಿತ್ತ ಉಡುಗೊರೆಯನ್ನು ಸ್ವೀಕರಿಸಿ 'ಚಿರಮಭಿವರ್ಧಿತಾಂ ರಾಷ್ಟ್ರಕೂಟ ಸಂತಾನ ಶ್ರೀಃ' ಎಂದು ಹರಸಿ, ತೆರಳಿದರು.

ಆಚಾರ್ಯರು ಕಣ್ಣಿದಿರಿನಿಂದ ಮರೆಯಾಗುವವರೆಗೂ ಪ್ರಯತ್ನ ಪೂರ್ವಕವಾಗಿ ಗಾಂಭೀರ್ಯವನ್ನು ಕಾಪಾಡಿಗೊಂಡಿದ್ದ ಚಕ್ರವರ್ತಿ, ಅವರು ಕಣ್ಣುಮರೆಯಾದ ಕೂಡಲೇ ಆಸನದ ಮೇಲೆ ಕುಸಿದು ಬಿದ್ದು ನಿಟ್ಟುಸಿರಿಟ್ಟರು.

ಆಚಾರ್ಯರು ಹೋಗುವುದನ್ನೇ ಕಾದಿದ್ದಂತೆ ಮರುಗಳಿಗೆಯೇ ರಾಜಕುಮಾರ ತಾನೇ ಮಹಾರಾಜರಿದುರು ಬಂದು ಕೇಳಿದ—

'ಅಪ್ಪಾಜಿ, ಆಚಾರ್ಯರು ಹೋದರೆ?'

'ಹೋದರು ಕೃಷ್ಣಾ. ಮತ್ತೆ ಬರುವುದಿಲ್ಲವೆಂದು ಅಪ್ಪಣೆ ಪಡೆದು ಹೋದರು.'

'ಒಳ್ಳೆಯದೇ ಆಯಿತು ಅಪ್ಪಾಜಿ, ಇನ್ನವರು ಬರುವುದೇ ಬೇಡ'

'ಗುರುಗಳ ವಿಷಯದಲ್ಲಿ ಅಗೌರವದ ಮಾತಾಡುವುದು ಶ್ರೇಯಸ್ಕರ ವಲ್ಲ ಕೃಷ್ಣ.'

'ಅವರು ಮಾತ್ರ ನಮ್ಮ ವಿಷಯದಲ್ಲಿ ಅಗೌರವದಿಂದ ನಡೆದು ಕೊಳ್ಳಬಹುದೇ ಅಪ್ಪಾಜಿ?'

'ಹಿರಿಯರು ಎಂದೂ, ಏನು ಮಾಡಿದರೂ ನಮಗೆ ಅಗೌರವವಲ್ಲ ಕೃಷ್ಣಾ. ಹಿರಿಯರು ಮಾಡಿದುದನ್ನು ಆಶೀರ್ವಾದವೆಂದು ಗ್ರಹಿಸ ಬೇಕು.'

'ಅಪಮಾನ ಮಾಡಿದರೂ....'

'ಬಹಳ ಚಿಕ್ಕವಯಸ್ಸಿನಲ್ಲೇ ಬಹುದೊಡ್ಡ ಮಾತುಗಳನ್ನಾಡುವು ದನ್ನು ಅಭ್ಯಾಸ ಮಾಡಿದೀಯ ಕೃಷ್ಣ. ಅದು ತಪ್ಪು. ಅಗೌರವ, ಅಪ ಮಾನ ಎಂದೆ. ನಮಗೆ ಅಪಮಾನ, ಅಗೌರವ ಇತರರಿಂದ ಆಗುವುದಿಲ್ಲ ಮಗೂ, ನಮ್ಮ ನಡತೆಯೇ ನಮಗೆ ಮಾನಾಪಮಾನವನ್ನುಂಟುಮಾಡು ವುದು. ನೀರನ್ನು ಕಲಕಿದಂತೆ ಗಾಳಿ, ಬೆಟ್ಟವನ್ನು ಕಲಕಲು ಸಾಧ್ಯವೇ? ಇಂಥ ಭಾವನೆಯನ್ನು ಬಿಡಬೇಕು ಕೃಷ್ಣ, ರಾಜಕುಮಾರ ನಡತೆಯಲ್ಲೂ ರಾಜಕುಮಾರನಾಗಿರಬೇಕು.'

'ನೀವು ಯಾವಾಗಲೂ ಹೀಗೆಯೇ ವಿಚಿತ್ರವಾಗಿ ಮಾತಾಡುತ್ತೀರಿ ಅಪ್ಪಾಜಿ. ನಿಮ್ಮೆಲ್ಲರ ಕಣ್ಣಿನಲ್ಲೂ ನಾನೇನು ಮಾಡಿದರೂ ತಪ್ಪೆ. ನಿಮಗೆ ನನ್ನ ಮೇಲೆ ಪ್ರೀತಿಯೇ ಇಲ್ಲ ಅಪ್ಪಾಜಿ.'

'ಪ್ರೀತಿ ಎಂದರೆ ಏನು ಕೃಷ್ಣಾ? ನೀನು ಮಾಡಿದುದೆಲ್ಲಾ ಸರಿ ಎನ್ನುವುದೇ ಪ್ರೀತಿಯೇ?'

'ಇಲ್ಲ. ಇತರರನ್ನು ಮೆಚ್ಚಿ, ನನ್ನಲ್ಲಿ ತಪ್ಪು ಕಾಣುವುದು ಪ್ರೀತಿಯೇ ಅಪ್ಪಾಜಿ? ಆ ಮುದುಕ....'

'ಕೃಷ್ಣ–ಮಾತು ಬೆಳಸುವಾಗ ಎಚ್ಚರವಿರಲಿ'

ಆದುವರೆಗೂ ಮೃದುವಾಗಿ ಮಾತನಾಡುತ್ತಿದ್ದ ಮಹಾರಾಜರು ಆಚಾರ್ಯರನ್ನು ಮಗ 'ಮುದುಕ' ಎಂದು ತಾತ್ಸಾರವಾಗಿ ಕರೆದುದನ್ನು ಕೇಳಿ ಬಿರುಸಾಗಿ, ಚುರುಕುಮುಟ್ಟುವ ಧ್ವನಿಯಲ್ಲಿ ಹೇಳಿದರು.

'ತಪ್ಪಾಯಿತು ಅಪ್ಪಾಜಿ.' ತುಟಿ ಕಚ್ಚಿ ಹೇಳಿದ ರಾಜಕುಮಾರ, 'ಆಚಾರ್ಯರು ಬೀದಿಯ ಭಿಕಾರಿಯಂತೆ ನನ್ನನ್ನು ಮಾತನಾಡಿಸ ಬಹುದೇ ಅಪ್ಪಾಜಿ?'

'ಏನು ಹೇಳಿದರು?'

'ಹೇಳಿಕೊಟ್ಟ ಪಾಠ, ಈದಿನ ಒಪ್ಪಿಸಲಿಲ್ಲ....'

'ತಪ್ಪಲ್ಲವೇ?'

'ಇರಬಹುದು ಅಪ್ಪಾಜಿ. ಆದರೆ ಅಷ್ಟಕ್ಕೇ ಅವರು 'ಬೇರೆಯವ ರಾಗಿದ್ದರೆ ಗೆಣ್ಣುಮುರಿಯುವಂತೆ ಏಟು ಬೀಳುತ್ತಿತ್ತು' ಎಂದರು....'

'ಆದಕ್ಕೆ ನೀನೇನು ಹೇಳಿದೆ?'

“ ‘ ಅರಮನೆಯ ವೇತನದಿಂದ ಜೀವಿಸುವವರಿಗೆ ರಾಜಕುಮಾರರು ಯಾರೆಂದು ಗೊತ್ತಿರಬೇಕು’ ಎಂದೆ....”

‘ ಆಡಬಾರದ ಮಾತಾಡಿದೆ ಕೃಷ್ಣಾ, ನಮ್ರತೆ ಇರಬೇಕಾದಲ್ಲಿ ದುರಹಂಕಾರದ ಮಾತನಾಡಿದೆ. ರಾಜಕುಮಾರ ಎನಿಸಿಕೊಂಡ ನಿನಗೆ ಆರೀತಿ ಮಾತಾನಾಡಲು ನಾಚಿಕೆಯಾಗಬೇಕಾಗಿತ್ತು. ನಿಮ್ಮ ತಾಯಿ ಈ ಮಾತು ಕೇಳಿದರೆ ಎಷ್ಟು ನೊಂದುಕೊಳ್ಳುತ್ತಾಳೆ, ಬಲ್ಲೆಯಾ ಕೃಷ್ಣ?’

‘ ಅಮ್ಮನಿಗೂ ಹೇಳಿ, ಆಕೆಯ ಕೈಯಲ್ಲೂ ನಿಮ್ಮಹಾಗೇ ಅನ್ನಿಸಿಕೊಂಡದ್ದಾಯಿತು ಅಪ್ಪಾಜಿ. ನೀವಿಬ್ಬರೂ ಒಂದೇ. ಎಲ್ಲರ ಕಣ್ಣಿನಲ್ಲೂ ನಾನೇ ಪಾಪಿ. ಒಬ್ಬರಿಗೂ ನನ್ನಮೇಲೆ ಪ್ರೀತಿ ಇಲ್ಲ.’

—ಎಂದು ಕೃಷ್ಣ ಸಿಟ್ಟಿನಿಂದ ನೆಲಕ್ಕೆ ಕಾಲಪ್ಪಳಿಸುತ್ತಾ ಬಿರುಗಾಳಿಯಂತೆ ಹೊರಟು ಹೋದ.

‘ ಅಯ್ಯೋ ನಿರ್ಭಾಗ್ಯ!’ ಎಂದು ನಿಟ್ಟುಸಿರು ಬಿಟ್ಟರು ಮಹಾರಾಜರು. ಮರುಗಳಿಗೆಯೇ ಅವರ ಹೃದಯದಲ್ಲಿ ಅಪಾರ ಕಹಿ ಕಲಕಿ ಬಂದು ತಮಗೆ ತಾವೇ ಹೇಳಿಕೊಂಡರು—

‘ ನಿರ್ಭಾಗ್ಯ....ನಿರ್ಭಾಗ್ಯ....ನೀನಲ್ಲ ಕೃಷ್ಣ, ಬಯಸಿ ಬಯಸಿ ನಿನ್ನಂಥ ಮಗನನ್ನು ಪಡೆದ ನಾನು ನಿರ್ಭಾಗ್ಯ.’

ಆ ಮಾತು ಅಂದುಕೊಳ್ಳುತ್ತಿದ್ದ ಹಾಗೇ ಚಕ್ರವರ್ತಿಗಳ ಕಣ್ಣೆದಿರು ಕತ್ತಲಪಡೆ ಬೀಡು ಬಿಟ್ಟಂತಾಯಿತು.

೭

ರಾಜಕುಮಾರನಿಗೆ ತಕ್ಕ ಗುರುಗಳನ್ನು ಆರಿಸುವುದು ಚಕ್ರವರ್ತಿಗಳಿಗೆ ದೊಡ್ಡದೊಂದು ಸಮಸ್ಯೆಯಾಯಿತು. ಹಟಮಾರಿಯೂ ಅಹಂಭಾವದ ಸ್ವಭಾವದವನೂ ಆದ ಅವನ ಮನಸ್ಸನ್ನು ಒಲಿಸಿಕೊಳ್ಳುವ ಶಕ್ತಿಯೂ ಗುರುವಾಗುವವರಲ್ಲಿ ಇರಬೇಕಾಗಿತ್ತಲ್ಲದೆ, ಮುಂದೆ ವಿಶಾಲವಾದ ಸಾಮ್ರಾಜ್ಯದ ಸಾರ್ವಭೌಮನಾಗತಕ್ಕವನಿಗೆ ಅಗತ್ಯವಾದ ವಿದ್ಯೆಗಳನ್ನು ಕಲಿಸಿ, ಆ ಮಹತ್ವದ ಹೊಣೆಗಾರಿಕೆಯನ್ನು ಹೊರಲು ಬೇಕಾದ ಶಿಸ್ತು, ಸಂಯಮ, ಅಂತಃಕರಣಗಳನ್ನು ರಾಜಕುಮಾರನ ಮನೋಭೂಮಿಯಲ್ಲಿ ಅರಳಿಸುವ ಶಕ್ತಿಯೂ ಅವರಿಗೆ ಇರಬೇಕಾಗಿತ್ತು. ಇಲ್ಲವಾ

ದಲ್ಲಿ ಅಂಥ ಗುರುವಿನಿಂದ ಉಪಯೋಗವಾಗುವಂತಿರಲಿಲ್ಲ. ಆದರೆ ಅಂಥ ಗುರುಗಳನ್ನು ಎಲ್ಲಿಂದ ತರುವುದು? ಈ ಗುರುತರವಾದ ಹೊಣೆಗಾರಿಕೆ ಯನ್ನು ಹೊರಬಲ್ಲ ಗುರು ಯಾರು?

ಚಂದ್ರಪ್ರಭಾಚಾರ್ಯರ ಪ್ರಸಂಗ ಅಂತಿಂಥವರಿಗೆ ಈ ಕಾರ್ಯ ವನ್ನು ಒಪ್ಪಿಸಿದರೆ ಎಂಥ ಕಹಿಯುಣಬೇಕಾಗುತ್ತದೆ ಎಂಬುದನ್ನು ಚಕ್ರ ವರ್ತಿಗಳಿಗೆ ಕಲಿಸಿತ್ತು. ಆದರೆ ಸರಿಯಾದ ಗುರು ಎಲ್ಲಿ ಸಿಗಬೇಕು?

ಅಂಥ ಗುರು ದೊರೆವವರೆಗೂ ರಾಜಕುಮಾರ ಸ್ವಚ್ಛಂದವಾಗಿ ಅಲೆದಾಡಿ ಕೊಂಡಿರಬೇಕೇ, ಅಂತಃಪುರದ ಪರಿವಾರದವರ ಕೈಗೊಂಬೆ ಯಾಗಿ. ಅದು ಇದ್ದದ್ದೂ ಅಪಾಯಕರ.

ಹಾಗಾದರೇನು ಮಾಡಬೇಕು ಎಂಬ ಹೊಯ್ದಾಟದಲ್ಲಿ ಚಕ್ರವರ್ತಿ ಗಳ ಚಿತ್ತವೃತ್ತಿ ತೂಗಾಡುತ್ತಿರುವಾಗಲೇ ಒಂದುದಿನ ಬನವಾಸಿ ಹನ್ನೆರಡು ಸಾವಿರದ ಮಂಡಲೇಶ್ವರರಾದ ಬಂಕೇಶರು ಚಕ್ರವರ್ತಿಗಳ ಭೇಟಿಗೆಂದು ರಾಜಧಾನಿಗೆ ಬಂದರು.

ಬಂಕೇಶರು ಚಕ್ರವರ್ತಿಗಳ ವಿಶ್ವಾಸಕ್ಕೆ ಪಾತ್ರರಾದ ಮಂಡಲಾಧಿ ಪತಿಗಳೂ, ನೆಚ್ಚಿನ ಸೇನಾಧಿಪತಿಗಳು ಅಷ್ಟೇ ಅಲ್ಲ, ಸಮಾನವಯಸ್ಕ ರಾದ ಅವರಲ್ಲಿ ಪ್ರಭು-ಸಾಮಂತ ಸಂಬಂಧಕ್ಕೂ ಮೀರಿದ ಆಪ್ತ ಸ್ನೇಹ ವಿತ್ತು. ಮಂಡಲೇಶ್ವರರೊಂದಿಗೆ ನಾಲ್ಕುದಿನ ಕಳೆದರೆ, ಚಕ್ರವರ್ತಿಗಳ ಮನಸ್ಸು ಎಷ್ಟೋ ಹಗುರಾಗುತ್ತಿತ್ತು. ಎಂತಲೇ ಅವರು ರಾಜಧಾನಿಗೆ ಬಂದ ಸುದ್ದಿ ಸಮ್ಮುಖದ ಕರಣೀಕರಿಂದ ತಿಳಿದಾಗ ಚಕ್ರವರ್ತಿಗಳಿಗೆ ಅವರನ್ನು ಬೇಗಕಾಣುವ ಆಸೆಯಾಯಿತು. ಬಂಕರಸರು ಭೇಟಿ ಬೇಡುವ ಮೊದಲೇ, 'ಮಾರ್ಗಾಯಾಸ ತೀರಿದ್ದರೆ ಬರಬಹುದು' ಎಂದು ತಾವೇ ಹೇಳಿ ಕಳುಹಿಸಿದರು.

'ಮಹಾರಾಜರ ಮಧ್ಯಾಹ್ನದ ಅಲ್ಪನಿದ್ರೆ ತೀರಿದ ಬಳಿಕ ಬಂಕರಸರು ಚಕ್ರವರ್ತಿಗಳ ಭೇಟಿಗೆ ಬಂದರು-ಕಾಣಿಕೆ ಸಹಿತ. ಕಾಣಿಕೆಯ ಹರಿ ವಾಣಗಳನ್ನು ಹೊತ್ತುತಂದ ಆಳುಗಳು, ಅದನ್ನು ಚಕ್ರವರ್ತಿಗಳು ಹಸ್ತಸ್ಪರ್ಶದಿಂದ ಸ್ವೀಕಾರಮಾಡಿದ ಬಳಿಕ ಅವನ್ನು ಅರಮನೆಯ ಭಂಡಾರಿಗೆ ಒಪ್ಪಿಸಲು ತೆಗೆದುಕೊಂಡು ಹೋದರು.

'ಬಹು ದಿನಗಳ ಮೇಲೆ, ಮಂಡಲೇಶ್ವರರಿಗೆ ರಾಜಧಾನಿಯು ನೆನಪಾದಂತಾಯಿತು.'–ಬಂಕರಸರ ವಂದನೆಯನ್ನು ಸ್ವೀಕರಿಸಿ, ಕೇಳಿದರು.

'ರಾಜಧಾನಿಯ ನೆನಪೇನೋ ನಿತ್ಯವೂ ಇತ್ತಲೇ ಸೆಳೆಯುತ್ತಿತ್ತು. ಆದರೆ ಕೆಲಸದ ಒತ್ತಡದಲ್ಲಿ ಇತ್ತಕಡೆ ಬಗಲಾಗಲಿಲ್ಲ. ಕೊಂಚ ಬಿಡುವಾದ ಕೂಡಲೇ ಧಾವಿಸಿ ಬಂದೆ.'

'ನಿಮ್ಮ ವಿಶ್ವಾಸಕ್ಕೆ ನಾವು ಚಿರಋಣಿಗಳು ಬಂಕರಸರೇ. ಮನೆಯಲ್ಲಿ ಸೌಭಾಗ್ಯವತಿಯವರು ಕ್ಷೇಮವೇ?'

'ಪ್ರಭುಗಳ ಅನುಗ್ರಹ, ಅರ್ಹಂತನ ಕೃಪೆ. ಮನೆಯ ಕಡೆ ಎಲ್ಲವೂ ಕ್ಷೇಮ.'

'ನಿಮ್ಮ ಚಿರಂಜೀವಿಗಳು ಹೇಗಿದಾರೆ–ಕೇಳುವುದೇನು-ತಂದೆಗೆ ತಕ್ಕ ಮಗ! ತಂದೆಯಂತೇ ಇರಬೇಕ್ಕು. ರಾಜಕುಮಾರರ ವಯಸ್ಸೇ ಅಲ್ಲವೇ ನಿಮ್ಮ ಚಿರಂಜೀವಿಗಳಿಗೂ.'

'ರಾಜಕುಮಾರರಿಗಿಂತ ಒಂದುವರ್ಷ ದೊಡ್ಡವನಿರಬೇಕು ಲೋಕಾದಿತ್ಯ. ಅವನ ಯೋಚನೆಯೇ ನನ್ನನ್ನು ಇಲ್ಲಿಯವರೆಗೂ ಎಳೆದುತಂದದ್ದು.'

ಬಂಕೇಶರ ಮಾತು ಕೇಳಿ ಚಕ್ರವರ್ತಿಗಳಿಗೆ ಮಂಡಲೇಶ್ವರರಿಗೂ ಪುತ್ರದುಃಖವೇ ಎನಿಸಿ ವ್ಯಥೆಯಾಯಿತು. ಆದರೂ ಅದನ್ನು ತೊರಗೊಡದೆ—

'ನಮ್ಮಿಂದ ಏನಾದರೂ ಆಗುವುದಿತ್ತೇನು?'—ಎಂದು ಕೇಳಿದರು.

'ಮಹತ್ಕಾರ್ಯವೊಂದು ಪ್ರಭುಗಳಿಂದ ಆಗಬೇಕಾದುದಿದೆ. ಅಪ್ಪಣೆಯಾದರೆ ಬಿನ್ನವಿಸಿಕೊಳ್ಳುತ್ತೇನೆ.'

'ನಮ್ಮಿಂದ ಆಗಬಹುದಾದ ಕಾರ್ಯ ಯಾವುದಿದ್ದರೂ ನಾವು ಮಾಡಿಕೊಡಲು ಸಿದ್ಧರಾಗಿದೇವೆ, ಹೇಳಿ.'

'ಆಶ್ರಿತರಲ್ಲಿ ಪ್ರಭುಗಳಿಗೆ ಪರಮವಾತ್ಸಲ್ಯ.'

'ನಿಜ. ಆಶ್ರಿತರಿಗೆ ಪ್ರಭುಗಳಲ್ಲಿ ಇರುವಷ್ಟೇ. ಅದಿರಲಿ–ವಾತ್ಸಲ್ಯದ ಮಾತಾಡುವಾಗಲೂ ನಿಂತೇ ಮಾತನಾಡಬೇಕೇ? ಆಸನ ಸ್ವೀಕಾರ ಮಾಡಿ.'

'ಪ್ರಭುಗಳಿದಿರು ನಿಂತು ಮಾತನಾಡುವುದೇ ನಮಗೆ ಶ್ರೇಯಸ್ಕರ.'

'ಇದು ಓಲಗಸಾಲೆಯಲ್ಲ, ಓಲಗವೂ ಅಲ್ಲ. ಕುಳಿತುಕೊಳ್ಳಿ. ನೀವು ಕುಳಿತು ಮಾತನಾಡಬೇಕೆಂಬುದು ನಮ್ಮ ಅಪೇಕ್ಷೆ.'

'ಪ್ರಭುಗಳ ವಿಶ್ವಾಸ ದೊಡ್ಡದು. ಆದರೂ ಇತರರು ಅದನ್ನು ತಪ್ಪುತಿಳಿಯಬಹುದು.'

'ಆ ಭೀತಿ ಏನೂ ಇಲ್ಲ. ಕುಳಿತುಕೊಳ್ಳಿ. ಬೇರಾರೂ ಈಗ ಬರುವಂತಿಲ್ಲ. ಒಂದುವೇಳೆ ಬಂದರೂ, ನಾವೇ ಮಂಡಲಾಧೀಶ್ವರರಿಗೆ ಅವರು ಮಾಡಿದ ತಪ್ಪಿಗಾಗಿ ಕುಳಿತುಕೊಳ್ಳುವ ಶಿಕ್ಷೆ ವಿಧಿಸಿದ್ದೇವೆಂದು ಹೇಳುತ್ತೇವೆ. ಆಯಿತೆ.... ಸಂಕೋಚ ಬೇಡ. ವೈನಿಂತಾಗ ಮಾತು ಹೃದಯದಿಂದ ಬರುವುದಿಲ್ಲ.'

—ಎಂದರು ಚಕ್ರವರ್ತಿಗಳು ನಗುತ್ತಾ. ಆ ವಿಶ್ವಾಸಕ್ಕೆ ಇದಿರಾಡಲಾರದೆ, ಬಂಕರಸರು ಆಸನ ಸ್ವೀಕಾರಮಾಡಿದರು.

'ಈಗ ಹೇಳಿ–ನಮ್ಮಿಂದ ನಿಮಗೇನಾಗಬೇಕಿತ್ತು ? ಯಾವ ಕಾರ್ಯಭಾರ ಇಷ್ಟು ದೂರ ನಿಮ್ಮನ್ನು ಎಳತಂದಿತು?'

'ಅದೇ ನನ್ನ ಚಿರಂಜೀವಿಯ ವಿಷಯ. ಅವನಿಗೆ ಸರಿಯಾದ ಗುರುಗಳೊಬ್ಬರನ್ನು ಗೊತ್ತುಮಾಡಿ, ಅವರ ವಶಕ್ಕೆ ಅವನನ್ನು ಒಪ್ಪಿಸಬೇಕಾಗಿದೆ.'

'ಅಂತೂ ನಮ್ಮಿರ್ವರಿಗೂ ಒಂದೇ ಸಮಸ್ಯೆ ಎಂದಂತಾಯಿತು'

'ಅಂದರೆ.... ಪ್ರಭುಗಳ ಮಾತು ಅರ್ಥವಾಗಲಿಲ್ಲ.'

'ನಮಗೂ ಅದೇ ಸಮಸ್ಯೆ. ರಾಜಕುಮಾರರಿಗೂ ಒಬ್ಬ ಸರಿಯಾದ ಗುರುಗಳು ಬೇಕಾಗಿದೆ. ಯಾರನ್ನಾದರೂ ದೃಷ್ಟಿಯಲ್ಲಿಟ್ಟಿರುವಿರೇನು?'

'ದೃಷ್ಟಿಯಲ್ಲೇನೋ ಒಬ್ಬರು ಇದಾರೆ. ಅವರು ಒಪ್ಪುವರೋ ಬಿಡುವರೋ ಅದು ಮುಂದಿನ ಮಾತು. ಅದಕ್ಕೆ ಮೊದಲು ಅವರನ್ನು ಬೇಡಲು ಚಕ್ರವರ್ತಿಗಳ ಅಪ್ಪಣೆಬೇಕು.'

'ಯಾರು ಹೇಳಿ?'

'ಪೂಜ್ಯ ಗುಣಸೇನಾಚಾರ್ಯರು.'

ಬಂಕೇಶರು ಹೇಳಿದ ಹೆಸರು ಕೇಳಿ ಚಕ್ರವರ್ತಿಗಳ ಮುಖ ಚಿಂತಾ ಗ್ರಸ್ತವಾಯಿತು. ಕೂಡಲೇ ಉತ್ತರ ಕೊಡದೆ ಕುಳಿತರು.

'ನನ್ನ ಬೇಡಿಕೆ ತಪ್ಪಾಗಿದ್ದರೆ ಪ್ರಭುಗಳು ಕ್ಷಮಿಸಬೇಕ.'

'ನಿಮ್ಮ ಬೇಡಿಕೆಯಲ್ಲೇನೂ ತಪ್ಪಿಲ್ಲ ಬಂಕರಸರೇ. ಆದರೆ ಅವರು ಇದಕ್ಕೆ ಒಪ್ಪುವರೇ ಎಂದು ಸಂದೇಹ. ಬಹು ದೊಡ್ಡ ಕಾರ್ಯದ ಹೊರೆ ಹೊತ್ತಿದಾರೆ ಆಚಾರ್ಯರು.'

'ತಪಸ್ಸಿನಲ್ಲಿದಾರೆಯೋ?.'

'ಹೂ. ಹಾಗೇ ಅನ್ನಬಹುದು. ನೀವು ಹೇಳುವ ದೃಷ್ಟಿಯ ತಪಸ್ಸಲ್ಲವಾದರೂ, ಬೇರೊಂದು ಬಗೆಯ ತಪಸ್ಸೇ ಅದು'

'ಏನೆಂದು ಕೇಳಬಹುದೇ?'

'ತಪ್ಪೇನೂ ಇಲ್ಲ. ತಮ್ಮ ಜೀವಮಾನ ಕಾಲದಲ್ಲಿ ಜಿನಸೇನಾ ಚಾರ್ಯರು ಮುಕ್ಕಾಲುಭಾಗ ಮುಗಿಸಿದ 'ಪೂರ್ವ ಪುರಾಣ'ವನ್ನು ಪೂರ್ಣಗೊಳಿಸುವ ಕಾರ್ಯದಲ್ಲಿ ನಿರತರಾಗಿದಾರೆ ಆಚಾರ್ಯರು. ಲೋಕೋದ್ಧಾರವಾಗುವ ಮಹಾಕಾರ್ಯ ಅದು. ಭಗವಜ್ಜಿನಸೇನಾ ಚಾರ್ಯರ ಭವ್ಯ ಕೃತಿಯನ್ನು ಪೂರ್ಣಮಾಡುವುದು, ಗುರುಗಳ ಪಟ್ಟಶಿಷ್ಯ ರಾದ ಗುಣಭದ್ರಾಚಾರ್ಯರಿಂದಲೇ ಸಾಧ್ಯ. ಎಂತಲೇ ಅವರೂ ಸದಾ ಆ ಕಾರ್ಯದ ತಪಸ್ಸಿನಲ್ಲಿ ನಿರತರಾಗಿದಾರೆ. ಈಚೀಚೆಗೆ ಹೆಚ್ಚಾಗಿ ಅರಮನೆಯತ್ತ ಕೂಡಾ ಬರುವುದಿಲ್ಲ. ಅದಕ್ಕೇ ಈ ಕೆಲಸಕ್ಕೆ ಅವ ರನ್ನು ಕೇಳಲು ಭೀತಿ.'

'ಹಾಗಾದರೆ ಈ ಬಯಕೆಯನ್ನು ಬಿಟ್ಟು ಬಿಡುವುದೇ ಮೇಲು....?'

'ಹಾಗೆ ಬೇಡ. ನಿಮ್ಮ ಬಯಕೆಯನ್ನು ಆಚಾರ್ಯರ ಕಿವಿಯ ಮೇಲೆ ಹಾಕಿ. ನಿಮ್ಮ ಬಿನ್ನಹವನ್ನು ಅವರು ಮನ್ನಿಸಿದರೆ ನಮ್ಮ ಸ್ವಾರ್ಥ ವನ್ನೂ ಅಷ್ಟು ಸಾಧಿಸಬಹುದು. ಬಸದಿಗೆ ಹೇಳಿ ಕಳಿಸಿ ತಿಳಿದುಕೊಳ್ಳು ತ್ತೇವೆ. ದರ್ಶನಕ್ಕೆ ಸಮಯವಿದೆ ಎಂದರೆ ಭೇಟಿ ಮಾಡೋಣ. ಒಂದು ವೇಳೆ ಅವರು ನಿಮ್ಮ ಚಿರಂಜೀವರನ್ನು ಶಿಷ್ಯರಾಗಿ ಸ್ವೀಕರಿಸಲು ಒಪ್ಪಿದರೆ, ಆಗ ನಾವು ಹೇಳಿದಂತೆ ಕೇಳಬೇಕು ನೀವು.'

'ಅಪ್ಪಣೆ ಕೊಡಿಸಿ ಪ್ರಭು.'

'ಆಚಾರ್ಯರು ಒಪ್ಪಿದ ಬಳಿಕ ಆ ಮಾತು. ಈಗ ಅದರ ಅವಸರವಿಲ್ಲ....ಆ ಮಾತು ಆಯಿತಲ್ಲ. ಮತ್ತೇನು ವಿಶೇಷ ನಿಮ್ಮ ಪ್ರಾಂತದತ್ತ? ಎಲ್ಲಾ ಕ್ಷೇಮವೇ? ತಲವನಪುರದ ಅರಸರು ಹೇಗಿದ್ದಾರೆ? ದಾಳಿಯ ಸಿದ್ಧತೆಗಳೇನೂ ಇಲ್ಲವಲ್ಲ.'

'ಗಂಗ ಅರಸು ರಾಚಮಲ್ಲರಿಗೆ ಆ ಧೈರ್ಯವಿಲ್ಲ. ಆದರೆ ಆ ಬಯಕೆ ಇಲ್ಲವೆಂದಲ್ಲ. ರಾಚಮಲ್ಲರ ಕುಮಾರಿ ಜಾಯಬ್ಬೆಯನ್ನು ನೊಳಂಬದೊರೆ ಪೊಳಲಚೋರರಿಗೆ ಕೊಟ್ಟು ವಿವಾಹವಾದುದು ಪ್ರಭುಗಳಿಗೆ ತಿಳಿದಿರಬೇಕು?'

'ಹೂ ನಮಗೂ ವಿವಾಹದ ಆಹ್ವಾನ ಪತ್ರಿಕೆ ಬಂದಿತ್ತು. ಗಂಗ ರಾಯಭಾರಿಗಳೇ ತಂದು ತಲುಪಿಸಿದರು.'

'ಆ ವಿವಾಹದ ಅಂತರ್ಯ, ರಾಷ್ಟ್ರಕೂಟರ ವಿರುದ್ಧ ಸಮರದಲ್ಲಿ ನೊಳಂಬರ ನೆರವು ಪಡೆಯುವುದೇ ಆಗಿದೆಯೆಂದು ಬೇಹುಗಾರರಿಂದ ತಿಳಿಯಿತು. ಶಿವಮಾರ ನೆಟ್ಟ ದ್ವೇಷದಬಳ್ಳಿ ಇನ್ನೂ ನಶಿಸಿಲ್ಲ. ನಾನೇನೋ ಎಚ್ಚರವಾಗಿದೇನೆ.'

'ಅದು ಇಷ್ಟು ಬೇಗ ನಶಿಸುವುದಲ್ಲ. ತಂದೆಯವರು ಅವರನ್ನು 'ಕೃತಘ್ನ ಗಂಗ'ರೆಂದು ಕರೆದುದು ತಪ್ಪಲ್ಲ. ಅಂತೂ ಈಗಲೂ ಆ ಬಿರುದನ್ನು ಸಾರ್ಥಕಪಡಿಸಿಕೊಳ್ಳುವ ಯತ್ನದಲ್ಲಿದ್ದಾರೆ ಎನ್ನಿ....'

'ಪ್ರಯತ್ನವೇನಿದ್ದರೂ ಫಲಿಸುವುದಿಲ್ಲ.'

'ಆದರೂ ಎಚ್ಚರವಾಗಿರಬೇಕು.'

'ನಾನು ಜೀವಂತನಾಗಿರುವವರೆಗೂ ಪ್ರಭುಗಳಿಗೆ ಆ ಚಿಂತೆ ಬೇಡ.'

'ನಿಮ್ಮ ವಿಷಯದಲ್ಲಿ ನಮಗೆ ಆ ಭರವಸೆ ಇದೆ. ಆದರೂ....'

'ಏನು ಸಂಶಯ ಪ್ರಭು?'

'ಸಂಶಯವಲ್ಲ. ಸಮರದ ಮಾತು ಬಂದರೆ ಬೇಸರವಾಗುತ್ತದೆ. ಅರಸರೆನ್ನಿಸಿಕೊಂಡವರಿಗೆ ಸದಾ ಯುದ್ಧಚಿಂತೆಯೊಂದೇ ಇರಬೇಕೇ? ಇನ್ನೆಷ್ಟು ನೆತ್ತರಿನಲ್ಲಿ ನೆಲ ನೆನೆದು, ಯುದ್ಧ ಬೇಡವೆಂಬ ಬುದ್ಧಿ ಬರಬೇಕೋ. ತಮ್ಮ ಕ್ಷುದ್ರ ದ್ವೇಷ, ಪ್ರತೀಕಾರಕ್ಕಾಗಿ ಎಷ್ಟುಜನ ನಿರಪರಾಧಿ

ಗಳಿಗೆ ಸಾವು ತರಬೇಕು? ಸ್ನೇಹ ಸಂಧಾನಗಳೆಲ್ಲಾ ಬರೀ ಹೆಸರಿಗೆ ಮಾತ್ರ ಉಳಿದಿರುವಂತೆ ಕಾಣುತ್ತದೆ, ಈ ಅರಸರಿಗಿರುವ ಸಮರಾತುರವನ್ನು ಕಂಡರೆ. ಅವರು ಸಿದ್ಧತೆ ಮಾಡಿಕೊಳ್ಳುತ್ತಿದ್ದಾರೆಂದು ನಾವು, ನಾವು ಸಿದ್ಧರಾಗುತ್ತಿದ್ದೇವೆಂದು ಇನ್ನೊಬ್ಬರು – ಈ ರಕ್ತಪಾತ ಸಿದ್ಧತೆಗೆ ಬಿಡುವೇ ಇಲ್ಲವೇ?'

'ನನಗೂ ಹಾಗೇ ಅನ್ನಿಸುತ್ತದೆ ಪ್ರಭು–ಈ ವ್ಯರ್ಥ ರಕ್ತಪಾತದಿಂದ ಜಗತ್ತಿಗೆಂದು ಮುಕ್ತಿ?'

'ಸೇನಾಧಿಕಾರಿಗಳಿಗೂ ಸಮರ ದ್ವೇಷವೇ?!'

'ಸೇನಾಧಿಪತಿಯೂ ಮನುಷ್ಯನಲ್ಲವೇ ಪ್ರಭು? ಶತ್ರುಗಳು ಸತ್ತಾಗ, ನೊಂದಾಗ ಹೃದಯಕ್ಕೆ ಉನ್ಮತ್ತ ಹರ್ಷವಾಗಬಹುದು. ಆದರೆ ಆ ಪ್ರಯತ್ನದಲ್ಲಿ ನಮ್ಮ ಪ್ರೀತಿಯ ಜನರೂ ಸಾಯುವುದಿಲ್ಲವೇ? ಆ ನೋವು ನಮ್ಮೆದೆಯನ್ನಿರಿಯುವುದಿಲ್ಲವೇ ಪ್ರಭು? ಒಮ್ಮೊಮ್ಮೆ ಸಮರವಾದಾಗಲೂ ನೂರಾರುಮಂದಿ ಮೆಚ್ಚಿನ ಭಟರನ್ನು ಕಳೆದುಕೊಂಡು, ಅವರ ಮನೆಯವರಿಗೆ ಅವರೆಲ್ಲರ ಸಾವಿನ ಸುದ್ದಿ ಹಂಚಲು ಹಿಂದಿರುಗುವಾಗ ಸೇನಾಧಿಪತಿಯ ಎದೆಯೂ ಬಿರಿದು ಹೋಗುತ್ತದೆ ಪ್ರಭು. ಆದರೇನು ಮಾಡುವುದು. ಕ್ಷತ್ರಿಯರಲ್ಲಿ ಅಹಿಂಸಾ ಬುದ್ಧಿ ತಪ್ಪು ಎಂದು ಜನ ಭಾವಿಸುತ್ತಿರುವವರೆಗೂ ಕತ್ತಿಗೆ ವಿಶ್ರಾಂತಿ ಕೊಡುವಂತಿಲ್ಲ.'

'ಅಂತೂ ನಮ್ಮಿಬ್ಬರ ಆಲೋಚನೆಗಳೂ ಒಂದೇ ಎಂದಹಾಗಾಯಿತು. ಎಂದೋ ಒಂದು ದಿನ ಈ ಸಮರದಾಹದಿಂದ ಜಗತ್ಪ್ರಳಯವಾಗಿ ಬಳಿಕ ಯುದ್ಧ ಬೇಡ, ಭಗವಂತನು ಕೊಟ್ಟ ಬುದ್ಧಿಯ ಶಕ್ತಿಯನ್ನು ಉಪಯೋಗಿಸಿ ವೈಮನಸ್ಯವನ್ನು ತೀರಿಸಿಕೊಳ್ಳೋಣ ಎಂಬ ಬುದ್ಧಿ ಬರುತ್ತದೆ ಲೋಕಕ್ಕೆ. ಹಾಗಾಗುವುದು ಖಂಡಿತ. ಆದರೆ ಆ ದಿನದವರೆಗೂ ನಾವಿಬ್ಬರೂ ಇರುವುದಿಲ್ಲ. ಆದ್ದರಿಂದ ಆ ಚಿಂತೆ ಏಕೆ? .... ಬರಬರುತ್ತಾ ನಮ್ಮ ಸ್ವಾರ್ಥಬುದ್ಧಿ ಹೆಚ್ಚುತ್ತಿದೆ ಬಂಕರಸರೇ.'

ಚಕ್ರವರ್ತಿಗಳ ಮಾತುಕೇಳಿ ಬಂಕರಸರಿಗೆ ಆಶ್ಚರ್ಯವಾಯಿತು. ಆ ಮಾತನ್ನು ನಂಬದೆ ಹೇಳಿದರು–

'ಚಿನ್ನಕ್ಕೆ ತುಕ್ಕು ಹಿಡಿಯುವುದಿಲ್ಲ ಪ್ರಭು.'

'ಹಾಗನ್ನುತ್ತೀರಾ—ನೋಡಿ. ನಿಮಗೆ ರಾಜಧಾನಿಯಲ್ಲಿ ಬೇರೆಕೆಲಸ ವಿತ್ತೇನೋ. ಆದರೆ ಇಲ್ಲೇ ಹಿಡಿದು ನಿಲ್ಲಿಸಿ ಬಿಟ್ಟೆವು ಇಷ್ಟು ಹೊತ್ತು. ಬಸದಿಗೆ ಚಾರರನ್ನು ಕಳಿಸಿ, ಅಲ್ಲಿಂದ ಸುದ್ದಿ ಬಂದಮೇಲೆ ನಿಮ್ಮ ಬಿಡಾರಕ್ಕೆ ಸುದ್ದಿ ಕಳಿಸುತ್ತೇವೆ. ಆಗಬಹುದೇ ? ಹಾಗೇ-ಈ ರಾತ್ರಿ ಇಲ್ಲೇ ಭೋಜನಕ್ಕೆ ಬರಬಹುದಲ್ಲ-ಪಂಙ್ತಿಲಾಭವನ್ನು ನೀಡುವುದಾದರೆ ಸಂತೋಷ.'

'ಅಪ್ಪಣೆ. ಅಂತೂ ನನ್ನಲ್ಲಿ ಪ್ರಭುಗಳಿಗೆ ತುಂಬಾ ವಿಶ್ವಾಸ. ಆ ವಿಶ್ವಾಸಕ್ಕೆ ಪಾತ್ರರಾಗುವ ಯೋಗ್ಯತೆ ನಮ್ಮದಾಗಲಿ ಎಂದು ಹಾರೈಸುತ್ತೇವೆ.'

'ಯಾರೂ ಕನ್ನಡಿಯ ಸಾಲ ತೀರಿಸುವುದಿಲ್ಲ ಬಂಕರಸರೇ.'

—ನಗುತ್ತಾ ಹೇಳಿದರು ಮಹಾರಾಜರು.

'ಪ್ರಭುಗಳು ಮನ್ನಿಸಬೇಕು. ನನಗೆ ಕತ್ತಿಯ ಭಾಷೆ ಅರ್ಥವಾದಂತೆ ಕಾವ್ಯಭಾಷೆ ಅರ್ಥವಾಗುವುದಿಲ್ಲ.'

'ಕಾವ್ಯವೇನೂ ಇಲ್ಲ ಬಂಕರಸರೇ. ನಾವು ಮುಖ ನೋಡಿಕೊಂಡಾಗ, ಕನ್ನಡಿ ನಮ್ಮ ಮುಖವನ್ನೇ ನಮಗೆ ತೋರಿಸುತ್ತದೆ. ಅದಕ್ಕಾಗಿ ಕನ್ನಡಿಗೆ ನೀವು—'ಸುಂದರವಾದ ಮುಖ ತೋರಿಸಿದೆ' ಎಂದು ಕೃತಜ್ಞತೆ ತೋರಿಸುತ್ತೀರಾ? ನಿಮ್ಮ ಮುಖ ಇದ್ದಂತೆ ತೋರಿಸುವುದು ಕನ್ನಡಿಯ ಧರ್ಮ. ನಾವೂ ಅಷ್ಟೇ—ನಿಮ್ಮ ವಿಶ್ವಾಸವನ್ನೇ ನಮ್ಮಲ್ಲಿ ಕಂಡು ಅದಕ್ಕೆ ಕೃತಜ್ಞತೆ ಅರ್ಪಿಸಬಾರದು ಎಂದೆ.'

'ಈ ಒಂದು ಮಾತಿಗೆ ನೂರುಜನ್ಮದ ಜೀವ ಕೊಡಬಹುದು ಪ್ರಭು, ಅಪ್ಪಣೆಯಾದರೆ ಬರುತ್ತೇನೆ. ಸನ್ನಿಧಾನಕ್ಕೆ ತುಂಬಾ ತೊಂದರೆ ಕೊಟ್ಟೆ ಬಹುಹೊತ್ತು ಮಾತನಾಡಿಸಿ.'

'ಇಂಥ ತೊಂದರೆ ಆಗಾಗ ಕೊಡುತ್ತಿರಿ.'

ಬಂಕರಸರು ಚಕ್ರವರ್ತಿಗಳಿಗೆ ಅಭಿಮಾನತುಂಬಿದ ಹೃದಯದಿಂದ ವಂದಿಸಿ ಬಿಡಾರಕ್ಕೆ ತೆರಳಿದರು.

ಆ ಸಂಜೆಯೇ ಆಚಾರ್ಯರ ಸಾಯಂಪೂಜೆ, ಉಪಹಾರ ಮುಗಿದ ಮೇಲೆ, ಚಕ್ರವರ್ತಿಗಳು ಬಂಕರಸರೊಡನೆ ಚೌವ್ವೀಸ ತೀರ್ಥಂಕರ

ಬಸದಿಯ ಬಳಿಯ ಆಶ್ರಮದಲ್ಲಿ ವಾಸವಾಗಿದ್ದ ಗುಣಭದ್ರಾಚಾರ್ಯರನ್ನು ದರ್ಶನಮಾಡಿದರು. ಚಕ್ರವರ್ತಿಗಳ ಪಂಚ ಸುವರ್ಣ ಕಲಶದ ಮೇನಾ ಬಸದಿಯ ಬಾಗಲಿಗೆ ಬರುತ್ತಿದ್ದ ಹಾಗೇ, ಆಚಾರ್ಯರು ಶಿಷ್ಯಸಮೇತ ರಾಗಿ ಚಕ್ರವರ್ತಿಗಳನ್ನು, ಅವರ ಹಿಂದೆ ಅಶ್ವಾರೋಹಿಗಳಾಗಿ ಬಂದ ಬಂಕರಸರನ್ನು ಆಶೀರ್ವಚನಗಳಿಂದ ಇದಿರುಗೊಂಡು, ಬಸದಿಯಲ್ಲಿ ಅವ ರಿಗೆ ತೀರ್ಥ ಪ್ರಸಾದಗಳನ್ನಿತ್ತು, ತಮ್ಮ ಅಧ್ಯಯನಮಂದಿರಕ್ಕೆ ಕರೆ ದೊಯ್ದರು.

'ಸಾಮ್ರಾಜ್ಯ ಕುಶಲವೇ ಮಹಾರಾಜ?'

ಗುಣಭದ್ರಾಚಾರ್ಯರು ತಮ್ಮ ಉಸಿರಿನಿಂದ ಗಾಳಿಯಲ್ಲಾಡುವ ಕ್ರಿಮಿಗಳಿಗೆ ತೊಂದರೆಯಾಗಬಾರದೆಂದು ಬಾಯಿಗೆ ತೆಳುವಾದ ಬಟ್ಟೆ ಅಡ್ಡವಿಟ್ಟುಕೊಂಡು ಕೇಳಿದರು, ಚಕ್ರವರ್ತಿಗಳೂ, ಬಂಕರಸರೂ ಕುಳಿತ ಮೇಲೆ.

'ಆಚಾರ್ಯರ ಕೃಪೆಯಿಂದ ಯಾವ ತೊಂದರೆಯೂ ಇಲ್ಲ. ಆಚಾ ರ್ಯರ ತಪಸ್ಸಾಧನೆ ನಿರ್ಬಾಧಿತವಾಗಿ ನಡೆಯುತ್ತಿದೆಯೇ?'

'ನಿಮ್ಮ ಆಳ್ವಿಕೆಯಲ್ಲಿ ಯಾವುದಕ್ಕೂ ಕೊರತೆಯಿಲ್ಲ. ಬಂಕರ ಸರೂ ಬಹುದೂರ ದಯಮಾಡಿಸಿದರು. ಬನವಾಸಿಯತ್ತ ಎಲ್ಲಾ ಕ್ಷೇಮವೇ?'

'ಆಚಾರ್ಯರ ಆಶೀರ್ವಾದ.'—ಎಂದರು ಬಂಕರಸರು, ಆಚಾರ್ಯ ರಿಗೆ ವಂದಿಸಿ.

'ಚಕ್ರವರ್ತಿಗಳೂ, ಅವರ ನೆಚ್ಚಿನ ಮಂಡಲೇಶ್ವರರೂ ಒಟ್ಟಿಗೇ ಬಂದುದರಲ್ಲಿ ಏನೋ ವಿಶೇಷ ಅರ್ಥವಿರಬೇಕು, ಅಲ್ಲವೇ?'

'ಆಚಾರ್ಯರಿಗೆ ತೊಂದರೆಯಾಗದಿದ್ದರೆ, ಒಂದು ಮನವಿ ಸಲ್ಲಿಸ ಬೇಕೆಂದು ಬಂದೆ. ಚಕ್ರವರ್ತಿಗಳೂ ಕೃಪೆಯಿಟ್ಟು ನನ್ನೊಂದಿಗೆ ಬಿಜಯ ಮಾಡಿದರು—ನನ್ನ ಮನವಿಯನ್ನು ತಾವೇ, ನನ್ನಪರವಾಗಿ ಹೇಳಲು.'

'ಅಂತೂ ಸರ್ವ ಸಿದ್ಧತೆ ಮಾಡಿಕೊಂಡೇ ಬಂದಿದೀರಿ. ಅಪ್ಪಣೆ ಯಾಗಲಿ. ನನ್ನಿಂದೇನಾಗಬೇಕು.'

'ಆಚಾರ್ಯರಿಗೆ ತೊಂದರೆಯಾಗದಿದ್ದರೆ, ನನ್ನ ಮಗನನ್ನು ಶಿಷ್ಯನನ್ನಾಗಿ ಸ್ವೀಕರಿಸಿ, ವಿದ್ಯಾನುಗ್ರಹ ಮಾಡಬೇಕು.'

ಬಂಕರಸರ ಮಾತು ಕೇಳಿ ಆಚಾರ್ಯರು ಒಂದುಗಳಿಗೆ ಚಿಂತಾಮಗ್ನರಾದರು. ಅದನ್ನು ಕಂಡು ಬಂಕರಸರು ಕೇಳಿದರು—

'ನನ್ನ ಬೇಡಿಕೆಯಿಂದ ಆಚಾರ್ಯರಿಗೆ ತೊಂದರೆಯಾಯಿತೆ?'

'ಊಹೂ, ತೊಂದರೆಯಿಲ್ಲ, ಕೈಯಲ್ಲಿ ಹಿಡಿದ ಕೆಲಸ ಮುಗಿದಿದ್ದರೆ ಚಿಂತೆ ಮಾಡುತ್ತಿರಲಿಲ್ಲ....'

'ನಿಜ. ಆಚಾರ್ಯರು ಬಹುದೊಡ್ಡ ಭಾರ ಹೊತ್ತಿದೀರ....'

'ದೊಡ್ಡಭಾರವೇನು ಬಂತು. ಭಗವಜ್ಜಿನಸೇನಾಚಾರ್ಯರು ಕಟ್ಟಿದ ಭವ್ಯ ಸೌಧಕ್ಕೆ ಚಿಲ್ಲರೆ ಗಾರೆ ಕೆಲಸಮಾಡುವುದಷ್ಟೇ ನಾನು ಮಾಡಬೇಕಾಗಿರುವ ಕಾರ್ಯ. ಅಷ್ಟೂ ನನ್ನಿಂದ ಆಗದೆ ತೊಳಲಾಡುತ್ತಿದ್ದೇನೆ. ಆ ಕೆಲಸವೊಂದು ಮುಗಿದಿದ್ದರೆ, ಯೋಚನೆಯನ್ನೇ ಮಾಡುತ್ತಿರಲಿಲ್ಲ....'

'ಅಂದರೆ ...' ನಿರಾಶೆಯ ಧ್ವನಿಯಲ್ಲಿ ಕೇಳಿದರು ಬಂಕರಸರು.

'ನಿರಾಶರಾಗಬೇಡಿ....ಆಚಾರ್ಯರು ನನಗೆ ಅನುಗ್ರಹಿಸಿದ ವಿದ್ಯೆಯನ್ನು ಸತ್ಪಾತ್ರರಲ್ಲಿ ದಾನಮಾಡಿದರೇ ಗುರುಋಣ ತೀರುವುದು. ಆದ್ದರಿಂದ ನಿಮ್ಮ ಮಾತಿಗೆ ಇಲ್ಲವೆನ್ನುವುದಿಲ್ಲ. ಆದರೆ ನೀವು ಒಂದು ಕೆಲಸ ಮಾಡಬೇಕು.'

'ಅಪ್ಪಣೆಯಾದರೆ ಹೇಳಿದುದನ್ನು ಮಾಡಲು ಸಿದ್ಧವಾಗಿದ್ದೇವೆ.'

'ಪೂರ್ವಪುರಾಣದ ಕೆಲಸ ಮುಗಿಯುವವರೆಗೂ ನಾನು ರಾಜಧಾನಿಯಿಂದ ಕದಲಲಾರೆ. ಆದ್ದರಿಂದ ನಿಮ್ಮ ಚಿರಂಜೀವಿಯನ್ನೇ ಇಲ್ಲಿ ಬಿಡಲು ಸಾಧ್ಯವಾದರೆ ಸಂತೋಷ.'

ಆಚಾರ್ಯರ ಮಾತಿಗೆ ಬಂಕರಸರು ಉತ್ತರ ಕೊಡುವ ಮೊದಲೇ ಅದುವರೆಗೂ ಸುಮ್ಮನಿದ್ದ ಚಕ್ರವರ್ತಿಗಳು ಹೇಳಿದರು—

'ಆಚಾರ್ಯರು ಕಾಲಜ್ಞಾನಿಗಳೆನ್ನುವುದರಲ್ಲಿ ಸುಳ್ಳಿಲ್ಲ. ನಾನು ಆಡಬೇಕೆಂದಿದ್ದ ಮಾತನ್ನು ತಾವೇ ಆಡಿ, ನನ್ನ ಭಾರ ಹಗುರಮಾಡಿದಿರಿ. ನಾವೂ ಈಗ ಮಾತಾಡಲು ಅಡ್ಡಿಯಿಲ್ಲ.'

'ಚಕ್ರವರ್ತಿಗಳೂ ಏನೋ ಉದ್ದೇಶವಿಟ್ಟುಕೊಂಡೇ ಬಂದಿರುವಂತಿದೆ.'—ಆಚಾರ್ಯರು ಕೇಳಿದರು.

'ಹೂವಿನ ಬಳಿ ದುಂಬಿ ನಿರುದ್ದೇಶವಾಗಿ ಬರುತ್ತದೆಯೇ? ಸ್ವಾರ್ಥವಿಲ್ಲದ ಸಂಸಾರಿಯುಂಟೇ ಆಚಾರ್ಯರೇ? ಬಂಕರಸರ ಪ್ರಾರ್ಥನೆ ನಮ್ಮ ಪ್ರಾರ್ಥನೆಗೆ ಪೀಠಿಕೆ.'

'ಮಹಾರಾಜರು ಅಪ್ಪಣೆಕೊಡಿಸಬೇಕು-ತಮ್ಮದೇನು ಪ್ರಾರ್ಥನೆ?'

'ಬಂಕರಸರು ಕೇಳಿದ ವರವೇ ನಾವು ಕೇಳುವುದೂ.'

'ಅಂದರೆ........'

'ಅವರ ಚಿರಂಜೀವಿಗೆ ಆದ ಅನುಗ್ರಹ ರಾಜಕುಮಾರರಿಗೂ ಆಗಬೇಕು. ರಾಜಕುಮಾರರ ವಿಷಯ ಆಚಾರ್ಯರಿಗೆ ತಿಳಿದಿರಬೇಕು. ಅದೊಂದು ದೊಡ್ಡ ಯೋಚನೆಯಾಗಿದೆ. ತಾವು ಅವರ ರಕ್ಷಣೆಯ ಹೊಣೆ ಹೊತ್ತರೆ, ದೊಡ್ಡ ಚಿಂತೆ ಪರಿಹರಿಸಿದಂತಾಗುತ್ತದೆ. ಬಂಕರಸರ ಮಕ್ಕಳೂ ಇಲ್ಲಿಗೇ ಬರುವುದಾದರೆ, ರಾಜಕುಮಾರರಿಗೂ ಒಳ್ಳೆಯ ಜೊತೆ ದೊರೆತಂತಾಗುತ್ತದೆ. ಹಾಗೆ ಮಾಡುವುದು ನಿಮಗೂ ಒಪ್ಪಿಗೆಯೇ ಬಂಕರಸರೇ? ನಿಮ್ಮ ಕುಮಾರ, ರಾಜಕುಮಾರರೊಂದಿಗೆ ಇರಲಿ. ಆಗಬಹುದೇ?'

ಚಕ್ರವರ್ತಿಗಳಾಡಿದ ಮಾತನ್ನು ಕೇಳಿ ಬಂಕರಸರಿಗೆ ಒಂದುಗಳಿಗೆ ಏನು ಹೇಳಬೇಕೆಂದು ತೋಚಲಿಲ್ಲ. ಕೃತಜ್ಞತಾ ಮೂಕವಾಗಿತ್ತು ಅವರ ಹೃದಯ.

'ಏನಾದರೂ ತೊಂದರೆಯಿದೆಯೇ ಬಂಕರಸರೇ?'—ಆಚಾರ್ಯರೇ ಕೇಳಿದರು.

'ತೊಂದರೆಯಿಲ್ಲ ಆಚಾರ್ಯ. ಪ್ರಭುಗಳ ಔದಾರ್ಯವನ್ನು ಕಂಡು ಮಾತು ಸೋತುಹೋಯಿತು. ತಲೆಯಮೇಲೆ ಬಂಗಾರದ ಕಿರೀಟವಿಡುತ್ತೇನೆ ಎನ್ನುತ್ತಿದಾರೆ ಚಕ್ರವರ್ತಿಗಳು. ಏನು ಹೇಳಲಿ.'

'ಬಂದಾಗ ಬಿಡಬಹುದೇ—ಹೂ ಎನ್ನಿ.'

—ಆಚಾರ್ಯರು ನಗುತ್ತಾ ಹೇಳಿದರು.

'ಪ್ರಭುಗಳ ಬಯಕೆ, ನನ್ನ ಪಾಲಿಗೆ ಮಹದಾಜ್ಞೆ.'

—ತಲೆಬಾಗಿ ನುಡಿದರು ಬಂಕರಸರು.

'ನಿಮ್ಮಿಬ್ಬರ ವಿಶ್ವಾಸ ಹೀಗೇ ಚಿರಂತನವಾಗಲಿ' ಎಂದು ಹರಸಿದರು ಗುಣಭದ್ರಾಚಾರ್ಯರು.

'ಅಂತೂ ನಾವಿಬ್ಬರೂ ಸಂಸಾರಿಗಳು ಸೇರಿ, ಆಚಾರ್ಯ ಕೊರಳಿಗೆ, ಬೇಡವೆಂದ ಸಂಸಾರವನ್ನು ಮತ್ತೆ ಕಟ್ಟುತ್ತಿದ್ದೇವೆ.'

—ಚಕ್ರವರ್ತಿಗಳು ಹೇಳಿದರು.

'ಹಾಗಲ್ಲ, ನಿಜವಾದ ಶ್ರವಣನನ್ನಾಗಿ ಮಾಡುತ್ತಿದೀರ.'

'ಅಂದರೆ....' ಆಚಾರ್ಯರ ಮಾತುಕೇಳಿ ಚಕಿತರಾಗಿ ಬಂಕರಸರು ಕೇಳಿದರು.

'ಶ್ರವಣ, ಸನ್ಯಾಸಿ, ಸ್ವಂತ ಸಂಸಾರದಿಂದ ದೂರನಾಗಿರುವುದು, ಒಂಟಿ ಮರದಂತೆ ಮೆರೆಯುವುದಕ್ಕಲ್ಲ, ಜಗತ್ಸಂಸಾರದ ಭಾರಹೊರಲು ವೈಯಕ್ತಿಕ ವ್ಯಾಮೋಹಗಳು ಅಡ್ಡಿಯಾಗಬಾರದೆಂದು. ನಾನು ಶ್ರವಣನಾಗುತ್ತೇನೆ ಎಂದೆ, ನೀವು ಈ ಪದವಿಯನ್ನು ನನಗೆ ನೀಡಿದಿರಿ.'

ಆಚಾರ್ಯರ ವಿಶಾಲ ಮನೋಭಾವನೆಯನ್ನು ಕಂಡು ನೃಪತುಂಗ ಚಕ್ರವರ್ತಿ—ಬಂಕರಸರಿಬ್ಬರೂ ಬೆರಗಾದರು.

ಕೊಂಚಹೊತ್ತು ಹಾಗೇ ಹಗುರವಾದ ಮನಸ್ಸಿನಿಂದ ಲೋಕಾಭಿರಾಮವಾಗಿ ಮಾತನಾಡುತ್ತಿದ್ದು, ಬಳಿಕ ಆಚಾರ್ಯರಿಗೆ ವಂದಿಸಿ, ಅಪ್ಪಣೆ ಪಡೆದು ಹೊರಟರು.

ಚಕ್ರವರ್ತಿಗಳು ಮೇನೆಯಲ್ಲಿ ಕುಳಿತು ಹೊರಟರು. ಅವರ ಹಿಂದೆಯೇ ಹೊರಡಲೆಂದು ಬಂಕರಸರು ಕುದುರೆ ಹತ್ತುವಾಗ, ಆಚಾರ್ಯರ ಶಿಷ್ಯನೊಬ್ಬನು ಅವಸರವಾಗಿ ಬಂದು—

'ಆಚಾರ್ಯರು ನಿಮ್ಮೊಂದಿಗೆ ಏನೋ ಮಾತನಾಡಬೇಕಂತೆ ಒಂದು ಗಳಿಗೆ ಬರಬೇಕು' ಎಂದ.

ಅನಿರೀಕ್ಷಿತವಾಗಿ ಬಂದ ಆಚಾರ್ಯರ ಕರೆಯನ್ನು ಕೇಳಿ, ಚಕಿತರಾಗಿ, ಶಿಷ್ಯರನ್ನು ಹಿಂಬಾಲಿಸಿಹೋದರು ಬಂಕರಸರು.

ಕತ್ತಲುಕವಿದ ಆಶ್ರಮದ ಕೈಸಾಲೆಯಲ್ಲೇ ಆಚಾರ್ಯರ ಬಂಕರಸರಿಗಾಗಿ ಕಾದುನಿಂತಿದ್ದರು.

'ಹೊರಡುವಾಗ ಹಿಂದಕ್ಕೆ ಕರೆದೆ....ಒಂದು ಮಾತು ನಿಮಗೇ ಹೇಳುವುದಿತ್ತು.'

—ಆ ಮಾತನಾಡಿದ ಆಚಾರ್ಯರ ಭಾರವಾದ ಧ್ವನಿಯನ್ನು ಕೇಳಿ, ಬಂಕರಸರಿಗೆ ಮತ್ತಷ್ಟು ಆಶ್ಚರ್ಯವಾಯಿತು. ಹಾಗೇ ಏಕೋ ಅರ್ಥವಾಗದ ಭೀತಿ ಕವಿಯಿತು, ಅವರ ಹೃದಯದಲ್ಲಿ.

'ಏನು? ಅಪ್ಪಣೆಯಾಗಬೇಕು.'

'ಚಕ್ರವರ್ತಿಗಳಿಗೆ ಇನ್ನುಮುಂದೆ ಈಗಿರುವುದಕ್ಕಿಂತಲೂ ಹೆಚ್ಚಾಗಿ ನಿಮ್ಮ ನೆರವು ಬೇಕು ಬಂಕರಸರೇ?'

'ಅಂದರೆ ನನ್ನ ನಿಷ್ಠೆಯಲ್ಲಿ ಆಚಾರ್ಯರಿಗೆ ಸಂಶಯವೇ?'

'ಇಲ್ಲ.'

'ಹಾಗಾದರೆ ಮತ್ತೇಕೆ ಈ ವಿಚಿತ್ರ ಅಪ್ಪಣೆ?'

'ಈ ವರ್ಷದಿಂದ ಚಕ್ರವರ್ತಿಗಳಿಗೆ ಕುಜದೆಸೆ ಆರಂಭವಾಗುತ್ತದೆ. ಕುಜದೆಶೆ ೭ ವರ್ಷ, ಬಳಿಕ ರಾಹುದೆಶೆ ೧೮ ವರ್ಷ ಚಕ್ರವರ್ತಿಗಳಿಗೆ ತುಂಬಾ ಕ್ರೂರವಾದ ಕಾಲ. ಹಲಬಗೆಯ ದುಃಖ ಅವರನ್ನು ಹತ್ತಿ ಕಾಡಬಹುದು. ಅದಕ್ಕಾಗಿಯೇ ನಾನೂ ರಾಜಧಾನಿಯನ್ನು ಬಿಟ್ಟು ಕದಲುವುದಿಲ್ಲವೆಂದದ್ದು. ನೀವೂ ಅವರ ಬೆನ್ನ ನೆರಳಾಗಿ ಕಾದಿರಬೇಕು. ಈಗಿರುವ ಎಚ್ಚರದ ಹತ್ತರಷ್ಟು, ನೂರುಪಾಲು ಎಚ್ಚರಬೇಕು. ರಾಜ ಕುಮಾರರಿಗೂ ಈಗ ಗ್ರಹದೆಶೆ ಚನ್ನಾಗಿಲ್ಲ. ರಾಜ್ಯಕ್ಕೂ ವಿಪತ್ತು ಒದಗುವ ಸಂಭವವಿದೆ. ಗೋಲಯ ಭಟ್ಟರು ಮೊನ್ನೆ ಬಂದು ಹೇಳಿ ಹೋದರು. ಚಕ್ರವರ್ತಿಗಳಿಗೇ ಇದನ್ನು ಹೇಳಿ, ಅವರ ಮನಸ್ಸು ನೋಯಿಸಲು ಬಾಯಿ ಬರಲಿಲ್ಲ. ಅವರ ಬಲಗೈಯಾದ ನಿಮಗೆ ಹೇಳಿ ದೇನೆ. ನಿಮ್ಮ ದೊರೆಯನ್ನು ಕಾಪಾಡಿಕೊಳ್ಳಬೇಕು.'

—ಇಂದೇ ಚಕ್ರವರ್ತಿಗೆ ವಿಪತ್ತು ಕಾದಿದೆಯೋ ಏನೋ ಎಂಬಷ್ಟು ಕಕ್ಕುಲತೆಯಿಂದ ಹೇಳಿದರು ಆಚಾರ್ಯರು.

'ನಿಮ್ಮ ಆಶೀರ್ವಾದ ಬಲವೊಂದಿರಲಿ ಆಚಾರ್ಯ, ನನ್ನ ಪ್ರಾಣ ಒಪ್ಪಿಸಿಯಾದರೂ ದೊರೆಯನ್ನು ಕಾಪಾಡಿಕೊಳ್ಳುತ್ತೇನೆ.'

'ನಿಮ್ಮಂಥ ಆಪ್ತರನ್ನು ಪಡೆದ ಚಕ್ರವರ್ತಿಗಳು ಧನ್ಯರು.'

'ಅಲ್ಲ ಆಚಾರ್ಯ, ಚಕ್ರವರ್ತಿಗಳು ನಮ್ಮ ಹಲಜನುಮದ ಪುಣ್ಯದ ಪುರುಷರೂಪ. ಅಂಥವರಿಗೇ ಮತ್ತೆ ಮತ್ತೆ ಈ ಕ್ರೂರ ಕಾಟ ಒದಗಬೇಕೇ ಆಚಾರ್ಯ? ಹುಟ್ಟಿದಂದಿನಿಂದಲೂ ಚಕ್ರವರ್ತಿಗಳ ಬಾಳು ಇದೇ ದುಃಖಗೀತೆಯಾಯಿತು. ಇದೇನು ವಿಧಿಯಣಕ?'

'ಗಂಧವನ್ನು ಅರೆದಾಗಲೇ ಅದು ವಾಸನೆ ಬೀರುವುದು, ಚಿನ್ನ ಪುಟಕ್ಕೆ ಬಿದ್ದಾಗಲೇ ಹೊಳೆಯುವುದು, ಧೂಪ ಅಗ್ನಿದಗ್ಧವಾದಾಗಲೇ ಸುವಾಸನೆ ಬೀರುವುದು—ಇದು ಭಗವನ್ನಿಯಮ ಬಂಕರಸರೇ. ಅದಕ್ಕೆ ನಾವು ಇದಿರೆ? ಕಷ್ಟದ ಉಳಿಯಲ್ಲಿ ಕೆತ್ತಿ, ಚಕ್ರವರ್ತಿಗಳ ಬಾಳನ್ನು ಸುಂದರ ಶಿಲ್ಪವಾಗಿ ಮಾಡಬೇಕೆಂದು ದೈವೇಚ್ಛೆ. ನಡೆಯಲಿ. ಅಂತೂ ನೀವು ಮಾತ್ರ ಎಚ್ಚರ ಬಿಡಬೇಡಿ.'

'ನಿಮ್ಮ ಆಶೀರ್ವಾದದ ರಕ್ಷೆ ಇರಲಿ, ಆಚಾರ್ಯ'

'ಅದು ಸದಾ ನಿಮ್ಮದೆ.'—ಎಂದು ತಲೆಮುಟ್ಟಿ ಹರಸಿದರು ಆಚಾರ್ಯರು.

'ಕೃತಾರ್ಥನಾದೆ' ಎಂದು ಬಂಕರಸರು, ಚಿಂತಾಭಾರದಿಂದ ನಿಧಾನವಾಗಿ ಹೊರಬಂದು, ಆಳು ಹಿಡಿದಿದ್ದ ಕುದುರೆಯನ್ನು ಹತ್ತಿ ಪಂಜಿನವನು ದಾರಿ ತೋರುತ್ತಿರಲು ಕುದುರೆಯನ್ನು ಮುಂದೆ ನಡೆಸಿದರು. ಅವರ ಹಿಂದೆ ಮುಂದೆ ಅಂಗರಕ್ಷಕರ ಕುದುರೆಗಳು ಓಡಿದವು.

## ೮

ಕತ್ತಲು ಕವಿವ ಮೊದಲು, ಅಸ್ತಮಯ ಸೂರ್ಯ ರಕ್ತಾರುಣ ಉಜ್ವಲಕಾಂತಿಯಿಂದ ಥಳಥಳಿಸುವಂತೆ ನೃಪತುಂಗ ಚಕ್ರವರ್ತಿಗಳ ಬಾಳು ಬೆಳಕಿನ ಹೊಳೆಯಾಯಿತು, ಮಹಾರಾಜ್ಞಿಯವರು ಮತ್ತೆ ಗರ್ಭಧಾರಣೆ ಮಾಡಿದುದು ತಿಳಿದಾಗ. ರಾಜಕುಮಾರ ಕೃಷ್ಣನು ಗುಣಭದ್ರಾಚಾರ್ಯರ ಶಿಷ್ಯನಾದಮೇಲೆ, ಮಹಾರಾಜರಿಗೆ ಆ ದಿಕ್ಕಿನ ಚಿಂತೆ ಕಡಮೆಯಾಗಿ, ಹೃದಯ ಹಗುರಾದ ಹೊತ್ತಿನಲ್ಲಿ ಮಹಾರಾಣಿಯವರು ಗರ್ಭವತಿಯರಾದುದು, ಅವರಿಗೆ ಮತ್ತಷ್ಟು ಸಂತೋಷವನ್ನುಂಟು ಮಾಡಿತು. ಹೂವು ಅರಳುವಮುನ್ನ ಅರೆಬಿರಿದ ತುಂಬುಮೊಗ್ಗುಗಳ ಪರಿಮಳಮಯ ಅಲಂಕಾರದಿಂದ ಚೆಲುವಾದ ಬಳ್ಳಿಯಂತೆ, ಮೂಡಲಿರುವ ರವಿ

ಕಾಂತಿಯು ಆಗಮನಸೂಚಕವಾದ ರಕ್ತಸುವರ್ಣಪ್ರಭಾತಕಾಂತಿಯಿಂದ ಕಮನೀಯವಾದ ನೀಲ ಬಾಂದಳದಂತಿದ್ದರು ಮಹಾರಾಜ್ಞಿ. ತುಂಬು ಗರ್ಭವತಿಯಾದ ಮಹಾರಾಣಿಯವರು ಅಂತಃಪುರದಲ್ಲಿ ನಿಧಾನವಾಗಿ ನಡೆಯುವುದನ್ನು ಕಂಡಾಗ, ನದಿಯ ವಕ್ಷದಮೇಲೆ, ಗಂಭೀರಗತಿಯಿಂದ ಚಲಿಸುವ ಹಂಸೆಯ ನೆನಪಾಗುವುದು ಮಹಾರಾಜರಿಗೆ. ಮೊದಲೇ ಲಾವಣ್ಯಲಕ್ಷ್ಮಿಯಂತಿದ್ದ ಮಹಾರಾಣಿಯವರ ರೂಪಕಾಂತಿಯಿಂದು, ಹುಣ್ಣಿಮೆಯ ತಣ್ಗದಿರನ ತುಂಬುಕಾಂತಿಯಂತೆ ಆಹ್ಲಾದಕಾರಿಯಾಗಿತ್ತು.

ದೇಶದಲ್ಲಿ ಶಾಂತಿ, ಮನೆಯಲ್ಲಿ ಉಲ್ಲಾಸ–ಬೇಗುದಿಯ ದಿನಗಳಿದ್ದುದೂ ಮರೆತುಹೋಯಿತು ಮಹಾರಾಜರಿಗೆ. ಕಷ್ಟದ, ಚಿಂತೆಯ ದಿನಗಳು ಕಳೆದು, ಇನ್ನು ಎಲ್ಲಾ ಸುಖ-ಶಾಂತಿ-ಸಮಾಧಾನದ ದಿನಗಳು ಎಂದವರು ಹಗುರವಾದ ಹೃದಯದಿಂದ ನಿಟ್ಟುಸಿರು ಬಿಡುವಾಗ ಗಂಗದೊರೆ ರಾಚಮಲ್ಲನು ಮೃತನಾಗಿ, ಯುವರಾಜನಾಗಿದ್ದಾಗಲೇ ರಾಷ್ಟ್ರಕೂಟರ ಮೇಲೆ ಹಲ್ಲುಮಸೆಯುತ್ತಿದ್ದ ನೀತಿಮಾರ್ಗ್ಗ ಪಟ್ಟಕ್ಕೆ ಬಂದು, ಚಕ್ರವರ್ತಿಗಳ ಚಿತ್ತಶಾಂತಿ ಭಂಗವಾಯಿತು. ಅವನಿಂದ ಕೂಡಲೇ ಯಾವ ಭೀತಿಯೂ ಇಲ್ಲವಾದರೂ, ಆತ ಸಿಂಹಾಸನದ ಮೇಲೆ ಬಲವಾಗಿ ಕುಳಿತು ಬೇರೂರುವವರೆಗೂ–ಕಡಮೆಯೆಂದರೆ ಒಂದೆರಡು ವರ್ಷಗಳ ಕಾಲವಾದರೂ–ಯುದ್ಧಭಯವಿಲ್ಲವಾದರೂ ಹಾಗೆಂದು ನಿಶ್ಚಿಂತೆಯಿಂದ ಇರುವಂತಿರಲಿಲ್ಲ. ಯಾವ ಗಳಿಗೆಗೇನೋ ಎಂದುಸಿದ್ಧವಾಗಿರಬೇಕಾದ ಪರಿಸ್ಥಿತಿ ಪ್ರಾಪ್ತವಾಗಿತ್ತು ನೀತಿಮಾರ್ಗನ ಸಿಂಹಾಸನಾರೋಹಣದಿಂದ.

ದಕ್ಷಿಣದ ಕಡೆಯಿಂದ ಈ ಅಪಾಯದ ಗಂಟೆ ಮೊಳಗುತ್ತಿರುವಾಗಲೇ, ಉತ್ತರದಿಂದಲೂ ಅಪಾಯದ ಕೂಗು ಕೇಳಿ ಬಂದಿತು. ಉತ್ತರದಲ್ಲಿ ಪ್ರತೀಹಾರ ಮಿಹಿರಭೋಜನು, ಮತ್ತೊಮ್ಮೆ ಭೃಗುಕಚ್ಛದ ಮೇಲೆ ದಾಳಿಮಾಡಲು ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದಾನೆಂಬ ಅಪಾಯದ ಸುಳಿವು, ಚಕ್ರವರ್ತಿಗಳಿಗೆ, ಪರ್ಶಿಯದಿಂದ ಚೀನಾದವರೆಗೆ ವ್ಯಾಪಿಸಿದ ಕೀರ್ತಿಯ ನೃಪತುಂಗ ಚಕ್ರವರ್ತಿಗಳ ದರ್ಶನ ಮಾಡಲೆಂದು ಬಂದ, ಅರೇಬಿಯಾದ ಪ್ರವಾಸಿ ಸುಲೇಮಾನನಿಂದ ತಿಳಿಯಿತು.

ದಕ್ಷಿಣ ಭಾರತದ ರಾಜಧಾನಿಗಳಲ್ಲೆಲ್ಲಾ ತಲೆಮಣಿಯಾದ ಮಾನ್ಯಖೇಟ ಪ್ರಮುಖ ವ್ಯಾಪಾರಕೇಂದ್ರವೂ ಆಗಿತ್ತು. ಗೋಲಕೊಂಡದ ವಜ್ರ, ಪೈಠಣದ ಮಸ್ಲಿನ್ ಬಟ್ಟೆಗಳನ್ನು ಕೊಳ್ಳಲು ದೇಶ ವಿದೇಶಗಳಿಂದ ಪ್ರತಿದಿನ ವ್ಯಾಪಾರಿಗಳು ಮಾನ್ಯಖೇಟಕ್ಕೆ ಬರುತ್ತಿದ್ದರು. ಎಲ್ಲಕ್ಕಿಂತ ಹೆಚ್ಚಾಗಿ ಸೇನೆಗೆ ಬೇಕಾದ ಕುದುರೆಗಳು ಸಿಂಧ್, ಅರೇಬಿಯಾಗಳಿಂದ ಬರುತ್ತಿದ್ದುದರಿಂದ, ಕುದುರೆಯ ಮಾರಾಟಕ್ಕಾಗಿ, ಪರ್ಶಿಯದ ದ್ರಾಕ್ಷಾರಸ, ಯವನ ದಾಸಿಯರನ್ನು ಮಾರಲು ನೂರಾರು ಮಂದಿ ಮುಸ್ಲಿಂ ವ್ಯಾಪಾರಿಗಳು ಮಾನ್ಯಖೇಟಕ್ಕೆ ಬರುತ್ತಿದ್ದರು. ಎಷ್ಟೋ ಜನ ಅಂಥವ್ಯಾಪಾರಿಗಳು ರಾಜಧಾನಿಯಲ್ಲೇ ನೆಲಸಿದ್ದರು. ಅವರಿಗಾಗಿ ಮಸೀದಿಯೂ ಒಂದು ಇತ್ತು ರಾಜಧಾನಿಯಲ್ಲಿ. ಅಲ್ಲದೆ, ಅವರ ವ್ಯವಹಾರಗಳನ್ನು ಅವರ ಧರ್ಮರೀತಿಯಲ್ಲಿ ಬಗೆಹರಿಸಲು, ಅವರ ಧರ್ಮಗುರು–ಖಾಜಿ–ಗೆ ಅಧಿಕಾರ ಕೊಡಲ್ಪಟ್ಟಿತ್ತು.

ಸಿಂಧ್‌ನಲ್ಲಿ ನೆಲಸಿದ ಅರಬಿಯುವರು ನೆರೆಯ ಹಿಂದೂರಾಜ್ಯಗಳ ಮೇಲೆ ದಾಳಿಮಾಡಿ ಹಿಂಸೆ ಮಾಡುತ್ತಿದ್ದರೂ, ಅದಕ್ಕೆ ಪ್ರತೀಕಾರವಾಗಿ ತಾವು ಇಲ್ಲಿ ಮುಸ್ಲಿಮರ ಮೇಲೆ ಇಲ್ಲದ ಭಾರ ಹೇರಿ ಹಿಂಸಿಸುವ ಬುದ್ಧಿ ಚಕ್ರವರ್ತಿಗಳಿಗಿರಲಿಲ್ಲ. ಪರಮತೀಯರೆಂದು ಅವರ ಬಗ್ಗೆ ಅಸಹನೆಯೂ ಇರಲಿಲ್ಲ. ಅದಕ್ಕಿಂತಲೂ ಮಿಗಿಲಾಗಿ, ವ್ಯಾಪಾರಕ್ಕೆಂದು ಕಡಲಾಚೆಯಿಂದ ಬರುವ ಆ ಸಾಹಸಿಗಳ ಬಗ್ಗೆ ಅಭಿಮಾನವೇ ಇತ್ತು. ಚಕ್ರವರ್ತಿಗಳ ಆಪ್ತಮಿತ್ರರಲ್ಲಿ ಮಾನ್ಯಖೇಟದ ಖಾಜಿ ಸೈಯದ್ ಇಮಾಂರವರೂ ಒಬ್ಬರು.

ಧರ್ಮಾಭಿಮಾನಿಗಳಾದ ನೃಪತುಂಗ ಚಕ್ರವರ್ತಿಗಳು ಸಕಲ ಧರ್ಮಗಳ ಸಾರವನ್ನೂ ತಿಳಿಯಬೇಕೆಂಬ ಆಸೆಯುಳ್ಳವರಾಗಿದ್ದರು. ಬ್ರಾಹ್ಮಣ, ಜೈನ, ಬೌದ್ಧ ಎಲ್ಲ ಮತಗಳ ಗ್ರಂಥಗಳನ್ನೂ ಓದುತ್ತಿದ್ದರು. ತಿಳಿದವರೊಂದಿಗೆ ವಿಚಾರಮಾಡಿ, ಆಯಾ ಮತಗಳ ಹಿರಿಮೆಯನ್ನರಿತು ಸಂತೋಷಪಡುತ್ತಿದ್ದರು. ಶಿಲಾಹಾರ ಸಾಮಂತ ಪುಲ್ಲಶಕ್ತಿಯ ಸಚಿವ ವಿಷ್ಣು ಕೃಷ್ಣಗಿರಿಯ ಬೆಟ್ಟದಲ್ಲಿದ್ದ ಸಂಘಾರಾಮದ ಭಿಕ್ಷುಗಳಿಗಾಗಿ ವಸತಿ ಮಂದಿರಗಳನ್ನು ಕಟ್ಟಿಸಿ, ವೈಶಾಖ ಶುದ್ಧ ಪೂರ್ಣಿಮೆಯ ದಿನ ಬುದ್ಧ ಭಗ

ಹಾನನ ಜನ್ಮದಿನೋತ್ಸವ ಮಾಡಿಸಿದಂದು, ಚಕ್ರವರ್ತಿಗಳೇ ಆ ಉತ್ಸವಕ್ಕೆ ಬಿಜಯ ಮಾಡಿಸಿ, ಅಲ್ಲಿನ ಚೈತ್ಯದ ಪೂಜೆಗಳು ಸತತವಾಗಿನಡೆಯಲೆಂದು ನೂರು ದ್ರಮ್ಮಗಳ ಕಾಣಿಕೆ ಒಪ್ಪಿಸಿ ಬಂದಿದ್ದರು. ಸ್ವತಃ ಚಕ್ರವರ್ತಿಗಳಿಗೆ ಅಹಿಂಸಾಪ್ರಧಾನವಾದ ಜಿನಧರ್ಮದಲ್ಲಿ ಹೆಚ್ಚಿನ ಆಸಕ್ತಿ ಇದ್ದರೂ, ಎಲ್ಲ ಧರ್ಮಗಳ ಬಗ್ಗೆಯೂ ಸಮಾನ ಗೌರವವಿತ್ತು, ಸಮಾನ ಪ್ರೇಮವಿತ್ತು. ಗೊರವನಾಗಲಿ, ಕಾಪಾಲಿಕನಾಗಲಿ, ಶ್ರವಣನಾಗಲಿ-ಭಿಕ್ಷುವಾಗಲಿ, ವೇದಾಧ್ಯಾಯಿಯಾಗಲಿ-ಖಾಜಿಯಾಗಲಿ ಎಲ್ಲರೂ ಒಂದೇ ಅವರ ದೃಷ್ಟಿಯಲ್ಲಿ. 'ಚಕ್ರವರ್ತಿ ವೈಯಕ್ತಿಕವಾಗಿ ಯಾವ ಧರ್ಮದಲ್ಲೇ ಶ್ರದ್ಧೆ ತೋರಿದರೂ, ಚಕ್ರವರ್ತಿಯಾಗಿ ಆ ಬಗೆಯ ಭೇದಮಾಡಿದರೆ, ಅಂಥ ಅರಸನಿಗೆ ವಿನಾಶ ತಪ್ಪದು. ಚಕ್ರವರ್ತಿ ಚಕ್ರವರ್ತಿಯಾಗಿ ಪಾಲಿಸಬೇಕಾದುದು ಪ್ರಜಾ ಧರ್ಮವೊಂದೇ.' ಎಂದು ಜಿನಸೇನಾಚಾರ್ಯರು ಅವರ ಮನದಲ್ಲಿ ನಾಟುವಂತೆ ಹೇಳಿದ್ದರು. ದಂಡಿಯ 'ಕಾವ್ಯಾದರ್ಶ'ದ ರೀತಿಯಲ್ಲಿ, ತಾವೇ ಕವಿ ಶ್ರೀವಿಜಯರಿಂದ ಬರೆಸಿದ 'ಕವಿರಾಜ ಮಾರ್ಗ' ವೆಂಬ ಅಲಂಕಾರ ಗ್ರಂಥದಲ್ಲಿ 'ಕಾವ್ಯ ಪರಧರ್ಮಗಳಿಗೆ, ಪರಧರ್ಮೀಯರಿಗೆ ನೋವನ್ನುಂಟುಮಾಡದಂತಿರಬೇಕಾದುದು ಕಾವ್ಯದ ಅಗತ್ಯವಾದ ಗುಣಗಳಲ್ಲೊಂದು' ಎಂದು ಹೇಳಿ ಬರೆಸಿದ್ದರು.

ಚಕ್ರವರ್ತಿಗಳ ಈ ವಿಶಾಲ ಧರ್ಮದೃಷ್ಟಿಯಿಂದಾಗಿಯೇ, ಸಕಲ ಧರ್ಮೀಯರೂ ನಿಶ್ಚಿಂತೆಯಿಂದ ರಾಜಧಾನಿಯಲ್ಲಿ ಬಂದು ನೆಲಸುವಂತಾಗಿ ಮಾನ್ಯಖೇಟ ಹತ್ತಾರುಬಣ್ಣದ ಸುಂದರ, ಪ್ರಫುಲ್ಲ ಪುಷ್ಪಗಳಿಂದ ತುಂಬಿದ ಉದ್ಯಾನದಂತಿತ್ತು. ಖಾಜಿ ಸೈಯದ್ ಇಮಾಂರು ಆ ಉದ್ಯಾನದ ಒಂದು ಪರಿಮಳ ಪುಷ್ಪ.

ಸದಾ ಶುಭ್ರವಾಗಿ, ಕೊಕ್ಕರೆಯ ಗರಿಯಂತೆ ಬೆಳ್ಳಗಿರುವ, ಮೊಳಕಾಲುವರೆಗೆ ಬರುವ ಅಂಗಿ; ಪಾದದ ಬಳಿ ಕಚ್ಚಿಕೊಂಡು, ಮೇಲೆ ಅಗಲವಾದ ಪಾಯಿಜಾಮಾ; ನೆತ್ತಿಯಮೇಲೆ ಬಿಳಿದಾರದಲ್ಲೇ ಕಸೂತಿ ಮಾಡಿದ ಬಿಳಿಯ ಬಟ್ಟೆಯ ಟೋಪಿ; ನಯವಾದ ಜರಿಯ ಕಸೂತಿಕೆಲಸ ಮಾಡಿದ, ಆದರೆ ಆಡಂಬರವಿಲ್ಲದ ಪರ್ಷಿಯದ ಮೋಜು ಕಾಲಲ್ಲಿ; ತೆಳುವಾದ ಆದರೆ ಧೃಡವಾದ ದೀರ್ಘ ದೇಹಯಷ್ಟಿ; ಬಿಳಿದಾಗಿ ಎದೆ

ಯನ್ನಾಲಂಗಿಸಿದ ಗಡ್ಡ, ಮೊನಚಾದ ಮೂಗು, ಸದಾ ಹಾಸ್ಯದಿಂದ ನಗುವ ಕಣ್ಣುಗಳ ಖಾಜಿಗಳನ್ನು ನೋಡಿದರೆ ಎಲ್ಲರಿಗೂ ಪ್ರೀತಿಯೇ, ಅಭಿಮಾನವೇ. ಅಷ್ಟುದೂರದಲ್ಲಿ ಅವರು ಬರುತ್ತಿದ್ದರೆ, ಬರುತ್ತಿರುವವರು ಅವರೇ ಎಂದು ಸಾರಿ ಹೇಳುವುದು, ಅವರ ಕಿವಿಯ ಸಂದಿನಲ್ಲಿಟ್ಟ ಅತ್ತರಿನಲ್ಲದ್ದಿದ ಅರಳೆಯ ಪರಿಮಳ. ಅದರ ಖ್ಯಾತಿ ಮಾನ್ಯಖೇಟದ ತುಂಬಾ ಹರಡಿತ್ತು. ಅಷ್ಟೇ ಹೆಸರುವಾಸಿಯಾದುದು, ಅವರು ದಿನವೂ ಸ್ನೇಹಿತರಿಗೆ ತಪ್ಪದೆ ಕೊಡುತ್ತಿದ್ದ ಗುಲಾಬಿಯ ಹೂವು.

ಖಾಜಿಗಳ ಈ ಹೂವು–ಪರಿಮಳದ ವಿಷಯವಾಗಿ ಚಕ್ರವರ್ತಿಗಳೇ ಹಾಸ್ಯಮಾಡಿದ್ದರು, ಒಮ್ಮೆ ಖಾಜಿಗಳು ಅವರಿಗೆ, ತಮ್ಮ ಸ್ನೇಹದಂತೇ ಹಿತವಾದ ಪರಿಮಳ ಬೀರುವ ಗುಲಾಬಿಯ ಹೂವನ್ನು ಒಪ್ಪಿಸಿದಾಗ.

'ಕೈಯಲ್ಲಿ ಗುಲಾಬಿ– ಕಿವಿಯಲ್ಲಿ ಅತ್ತರ್! ಇದು ಎಂದೂ ತಪ್ಪುವುದಿಲ್ಲವೇ ನಿಮಗೆ?'

'ಊಹೂ. ಎಂದೂ ತಪ್ಪುವುದಿಲ್ಲ, ಇರಲೇಬೇಕು.'

'ನೀವು ಧರ್ಮಗುರುಗಳು. ನಿಮಗೆ ಅದು ಒಪ್ಪುವುದೇ?'

'ಏಕೆ? ಅದು ತಪ್ಪೆ?'

'ಹಾಗಲ್ಲ, ನಮ್ಮಲ್ಲಿ ಈ ಪುಷ್ಪ ಪರಿಮಳಾಲಂಕಾರ ವಿಟಯೋಗ್ಯವಾದುದೆಂದು ಹೇಳಿದೆ. ಇವು ವಿಲಾಸವಸ್ತುಗಳೆಂದು ಹೆಸರಾಗಿವೆ. ಆದ್ದರಿಂದ ನಿಮ್ಮಂಥವರಿಗೆ ಅದು ನಿಷಿದ್ಧ ಎನ್ನುತ್ತಾರೆ.'

'ಹಾಗೆಂದರೆ ಇವು ಹೇಯವಾದುವೆಂದೇ?'

'ಒಂದು ರೀತಿಯಲ್ಲಿ.'

'ಹಾಗಾದರೆ ಭಗವಂತನಿಗೆ ನಾವು ಇವನ್ನು ಅರ್ಪಿಸುತ್ತೇವಲ್ಲಾ, ಅದು ತಗಬಹುದೇ, ಷಹಾನ್‌ಷಹ. ನನಗೇನೋ ಅದು ತಪ್ಪು ಭಾವನೆಯೆಂದೇ ತೋರುತ್ತದೆ. ನಮ್ಮ ಪೈಗಂಬರರು ಹೇಳಿದಾರೆ ಕುರಾನ್-ಎ-ಷರೀಫ್‌ನಲ್ಲಿ– 'ಒಂದು ದುಡ್ಡಿದ್ದರೆ ರೊಟ್ಟಿ ತೆಗೆದುಕೋ. ಎರಡು ದುಡ್ಡಿದ್ದರೆ ಒಂದು ದುಡ್ಡಿಗೆ ರೊಟ್ಟಿ-ಇನ್ನೊಂದು ದುಡ್ಡಿಗೆ ಹೂವು ತೆಗೆದುಕೋ' ಎಂತ. ನಮ್ಮ ದೊಡ್ಡ ಕವಿಗಳೊಬ್ಬರು ಹೇಳಿದಾರೆ 'ದೇವರ ಮುಂದ ಹಾಸ ಭೂಮಿಯಲ್ಲಿ ಹೂವಾಗಿ ಅರಳಿದೆ. ಅದರ ಅರ್ಪಣೆಯಿಂದ ದೇವ

ದೇವನಿಗೆ ಸಂತೋಷವಾಗುವಷ್ಟು ಬೇರಾವುದರಿಂದಲೂ ಆಗುವುದಿಲ್ಲ. ನಲ್ಲೆಯ ನಗುಮೊಗ ನೋಡಿ ಉಲ್ಲಾಸಪಡುವ ಪ್ರಿಯನಂತೆ ದೇವರು ಆನಂದಪಡುತ್ತಾನೆ—ಹೂವು ಅರ್ಪಿಸಿದಾಗ' ಎಂತ.'

'ಭಗವಂತನಿಗೆ ಅರ್ಪಿಸುವುದು ಸರಿ–ಆದರೆ ನೀವು ಎಲ್ಲರಿಗೂ ಹೂವು ಕೊಡುತ್ತೀರಲ್ಲಾ....'

'ಎಲ್ಲರೂ ಭಗವಂತನ ಅವತಾರನೇ ಅಲ್ಲವೆ ಬಾದಷಹ? ಖುದಾ ನಮ್ಮ ಕಣ್ಣಿಗೆ ಕಾಣುವುದು ಮನುಷ್ಯನ ರೂಪದಲ್ಲೇ. ಇವರಿಗೆ ಕೊಟ್ಟ ಹೂವು ಆತನನ್ನೇ ಸೇರುತ್ತದೆ. ಬ್ರಾಹ್ಮಣ ಪಂಡಿತರೊಬ್ಬರು ಹೇಳಿದ್ದರು– 'ಎಲ್ಲ ನದಿಗಳೂ ಕಡಲಿಗೆ ಹರಿಯುವ ಹಾಗೆ, ಎಲ್ಲಿ, ಯಾರಿಗೆ, ಯಾವ ರೂಪಕ್ಕೆ ವಂದಿಸಿದರೂ ಕೇಶವನಿಗೇ ಸೇರುತ್ತದೆ' ಎಂದು ಹೇಳಿದೆಯಂತೆ, ಅವರ ಮಂತ್ರಗಳಲ್ಲಿ. ಈಗ ಹೇಳಿ ಬಾದಷಹ ನಾನು ನಿಮಗೆ ನೀಡಿದ ಹೂವು ಯಾರಿಗೆ ಕೊಟ್ಟ ಹಾಗಾಯಿತು?'

ಅಂದು ಖಾಜಿಗಳಮಾತಿಗೆ ಮನಸೋತು, ಅವರಸ್ನೇಹಕ್ಕೆ ಹೃದಯ ವನ್ನು ಅರ್ಪಿಸಿದ್ದರು ಚಕ್ರವರ್ತಿಗಳು. ಅಂದಿನಿಂದ ಚಕ್ರವರ್ತಿಗಳ ಅಂತ ರಂಗ ಸ್ನೇಹಿತರಲ್ಲಿ ಖಾಜಿಗಳೂ ಒಬ್ಬರಾಗಿದ್ದರು.

ಅವರೇ ಸುಲೇಮಾನ್ ಚಕ್ರವರ್ತಿಗಳ ದರ್ಶನಕ್ಕಾಗಿ ಬಂದ ಸುದ್ದಿ ಯನ್ನು ಮುಟ್ಟಿಸಿ, ಆತನಿಗೆ ದರ್ಶನಕೊಡಬೇಕೆಂದು ಕೇಳಿದರು.

'ಸುಲೇಮಾನ್ ಬಹಳ ದೊಡ್ಡ ಮನುಷ್ಯರು. ಅಗತ್ಯವಾಗಿ ಬಾದ ಷಹರು ಆತನಿಗೆ ಭೇಟಿ ದಯಪಾಲಿಸಬೇಕು.'

'ಹಾಗೇ ನಾವೇ ನೇರವಾಗಿ ಭೇಟಿಯ ಅಪ್ಪಣೆ ಕೊಡುವುದು ಸೂಕ್ತವಾಗಲಾರದು. ನೀವೂ ಬಲ್ಲಿರಲ್ಲ. ಸಂಧಿ-ವಿಗ್ರಹ ಸಚಿವರನ್ನು ಭೇಟಿ ಮಾಡಿ, ಅವರ ಮೂಲಕ ಬಂದು ಕಾಣಬೇಕು. ವಿದೇಶೀಯರ ವ್ಯವಹಾರವೆಲ್ಲಾ ಅವರಿಗೆ ಸೇರಿದ್ದು. ಒಮ್ಮೆ ಸಚಿವ ವಿಜಯಾದಿತ್ಯರಿಗೆ ನಿಮ್ಮ ಮಿತ್ರರ ಭೇಟಿ ಮಾಡಿಸಿ. ಅವರಿಗೂ ಸಮಾಧಾನವಾಗುತ್ತದೆ. ನಿಮ್ಮ ಕೆಲಸವೂ ಆಗುತ್ತದೆ.'

'ಬಾದಷಹರ ಮಾತು ಸರಿ. ಹಾಗೇ ಮಾಡುತ್ತೇನೆ. ಅಧಿಕಾರಿ ಗಳಿಗೆ ಅಸಮಾಧಾನವಾದರೆ, ಅರಸುತನ ಕಷ್ಟವಾಗುತ್ತದೆ.'

'ಅಂದ ಹಾಗೆ—ನಿಮ್ಮ ಮಿತ್ರರು ಏಕೆ ಬಂದಿದಾರೆ ಮಾನ್ಯಖೇಟಕ್ಕೆ?'

'ವ್ಯಾಪಾರಿಗಳಾಗಿ.'

'ಆದಕ್ಕಾಗಿಯೇ ಬಂದಿದ್ದರೆ ನಮ್ಮನ್ನು ನೋಡಬೇಕೆನ್ನಲು ಕಾರಣ ವೇನು? ಭೂತೋತ್ಪತ್ತ್ಯಾಯದ ವಿಷಯವಾಗಿದ್ದರೆ ಅರ್ಥಸಚಿವರನ್ನು ಕಂಡಿದ್ದರೂ ಸಾಕಾಗಿತ್ತು....'

'ಸುಲೇಮಾನ್ ಬಂದಿರುವುದಕ್ಕೆ ವ್ಯಾಪಾರ ನೆಪ ಮಾತ್ರ. ನಿಜವಾದ ಕಾರಣ ದೇಶಗಳನ್ನು ನೋಡುವ ಬಯಕೆ. ಅರಬ್‌ನಿಂದ ಸಿಂಧ್‌ಗೆ ಬಂದವರು, ಧಾರಾನಗರ, ಕನ್ಯಾಕುಬ್ಜ, ಗಯಾ, ಪೌಂಡ್ರವರ್ಧನ, ತ್ರಿಪುರಿ, ಅವಂತಿಪುರಗಳಿಗೆ ಹೋಗಿದ್ದರಂತೆ. ಅಲ್ಲೆಲ್ಲಾ ಬಾದಷಹರ ಖ್ಯಾತಿಯನ್ನು ಕೇಳಿ, ತಮ್ಮ ದರ್ಶನಕ್ಕಾಗಿ ಇಲ್ಲಿಗೆ ಬಂದಿದಾರೆ.'

'ಅಂತೂ ನಮ್ಮ ಕೀರ್ತಿ ಬಹಳ ದೂರ ವ್ಯಾಪಿಸಿದಂತಿದೆ, ಅಲ್ಲವೇ?' ನಗುತ್ತಾ ಕೇಳಿದರು ಚಕ್ರವರ್ತಿಗಳು.

'ಅಷ್ಟೇಕೆ ಷಹಾನ್‌ಷಹ, ಅರಬಿ, ಪರ್ಷಿಯಾ, ಗ್ರೀಸ್‌ಗಳಲ್ಲೂ ಬಾದಷಹರ ಹೆಸರು ಹಬ್ಬಿದೆಯಂತೆ, ಸುಲೇಮಾನರೇ ಹೇಳಿದರು.'

'ಹೊಗಳಿಕೆಯಲ್ಲಿ ನಿಮ್ಮ ಸ್ನೇಹಿತರು ಪಂಡಿತರಾಗಿರುವಂತಿದೆ. ನಿಮಗೂ ಅವರ ಗಾಳಿ ತಗಲಿದಂತಿದೆ.'

'ತೋಬಾ, ತೋಬಾ, ಉಂಟೇ—ಹೊಗಳಿಕೆ ಹರಾಂ!'

—ಗಲ್ಲಬಡಿದುಕೊಂಡು ಹೇಳಿದರು ಖಾಜಿಗಳು.

'ವಿನೋದಕ್ಕೆ ಹೇಳಿದೆ. ಇಷ್ಟು ಊರು, ದೇಶ ತಿರುಗಿ ಏನು ಮಾಡುತ್ತಾರಂತೆ ನಿಮ್ಮ ಮಿತ್ರರು?'

'ಅದೆಲ್ಲದರ ವಿಚಾರವಾಗಿ ದೊಡ್ಡದೊಂದು ಗ್ರಂಥ ಬರೆಯುತ್ತಿದಾರೆ "ಸಿಲ್‌ಸಿಲಾ ತುವ್ವಾರಿಖ್' ಎಂತ. ನಾನು ಹೇಳಿದರೆ ಹೊಗಳಿಕೆ ಎನ್ನುತ್ತೀರ. ಅವರನ್ನು ನೋಡಿ ತಾವೇ ಅಪ್ಪಣೆ ಕೊಡಿಸಿ.'

'ಅಷ್ಟು ದೇಶಸುತ್ತಿದವರಿಂದ ನಮಗೂ ಉಪಯೋಗವಾಗಬಹುದು. ಅಗತ್ಯವಾಗಿ ಕರೆದು ತನ್ನಿ ನಿಮ್ಮ ಮಿತ್ರರನ್ನು.'

ತಮ್ಮ ಬೇಡಿಕೆ ಸಲಿಸಿದ್ದಕ್ಕಾಗಿ ಚಕ್ರವರ್ತಿಗಳನ್ನು ವಂದಿಸಿ ತೆರಳಿದರು ಖಾಜಿಗಳು.

ಅದಾದ ಎರಡು ದಿನಕ್ಕೆ ಓಲಗಸಾಲೆಯಲ್ಲಿ, ಸುಲೇಮಾನ್‌ಗೆ ಭೇಟಿ ಕೊಟ್ಟರು ಚಕ್ರವರ್ತಿಗಳು.

೬

ಪ್ರವಾಸಿ ಸುಲೇಮಾನ್ ತನ್ನ ಪ್ರವಾಸದಲ್ಲಿ ಹತ್ತಾರು ರಾಜಾಸ್ಥಾನಗಳನ್ನು ಕಂಡಿದ್ದ. ಆದರೆ ನೃಪತುಂಗ ಚಕ್ರವರ್ತಿಯ ಓಲಗಸಾಲೆಯ ವೈಭವದಿದಿರು ಅವೆಲ್ಲವೂ ಪೇಲವವಾಗಿ ಕಂಡವು ಆತನಿಗೆ.

ನಿಂತವನು ಹಸುಮಗುವೆಂದು ತೋರುವಷ್ಟು ಎತ್ತರವಾದ ಓಲಗಸಾಲೆಯ ಇಬ್ಬದಿಯಲ್ಲೂ, ಸಾಲಭಂಜಿಕಾ ವಿಗ್ರಹಗಳಿಂದಲಂಕೃತವಾದ, ಕಮಲಗರ್ಭದಿಂದ ಮೂಡಿಬಂದ ನಾಲ್ಕು, ಎಂಟು, ಹನ್ನೆರಡು, ಹದಿನಾರು ಕೋಣಗಳ, ಬೆಳ್ಳಿಯತಗಡಿನಿಂದ ಅಲಂಕೃತವಾದ ಬಗೆಬಗೆಯ ಚಿತ್ರಗೆಲಸದ ಉನ್ನತ ಸ್ತಂಭಪಂಙ್ತಿ; ಆ ಸ್ತಂಭದ ಮೇಲುಭಾಗದಲ್ಲಿ, ಓಲಗಸಾಲೆಯ ಛಾವಣಿಯನ್ನು ಎತ್ತಿಹಿಡಿದ ಜೀವಂತ ಸ್ತ್ರೀಯರೋ ಎಂಬಂತಿರುವ, ಉಡ್ಡಾಣಭಂಗಿಯಲ್ಲಿರುವ ಅಪ್ಸರಾಪ್ರತಿಮೆಗಳು; ಕೆಳಗೆ ತೂಗಿದ ಅವರ ಕಟಿಹಾರದ ಸಣ್ಣ ಬಂಗಾರದ ಸರಪಳಿಗಳತುದಿಯ ಬಟ್ಟಲಿನಲ್ಲಿ ಪ್ರಕಾಶಮಾನವಾಗಿ, ಸಣ್ಣಪರಿಮಳವನ್ನು ಹರಡುತ್ತಾ ಉರಿಯುವ ಗಂಧ ತೈಲದ ದೀಪಗಳು; ಕಂಬಗಳ ಬೋದಿಗೆಗಳಿಂದ ತೂಗುಬಿಟ್ಟ ಮುತ್ತಿನ ಕುಚ್ಚುಗಳು; ಓಲಗಸಾಲೆಯ ನಾಲ್ಕುಬದಿಯ ಭಿತ್ತಿಯ ಮೇಲೂ, ರಾಮಾಯಣ, ಭಾರತ, ಭಾಗವತ, ಪುರಾಣಗಳ ಕಥೆಯನ್ನು ಹಾಡುವ ಬೆಂಕಿಯ ಬಣ್ಣದಿಂದ ಬರೆಯಲ್ಪಟ್ಟಂತೆ ಥಳಥಳಿಸುವ, ಈಗಲೋ ಇನ್ನೊಂದುಗಳಿಗೆಯಲ್ಲೋ ಗೋಡೆಯಿಂದ ಜೀವದಾಳಿ ಎದ್ದುಬರುವವೇನೋ ಎನ್ನುವಂಥ ಚಿತ್ರಗಳು;

ಪರಿಮಿತವಾಗಿದ್ದರೂ ಅಪರಿಮಿತವೆಂಬ ಭ್ರಾಂತಿಯನ್ನು ಮೂಡಿಸುವ ಓಲಗಸಾಲೆಯ ವಿಸ್ತಾರ, ಆ ವಿಸ್ತಾರಕ್ಕೂ—ಅದು ನೆಲವಲ್ಲ, ಕಮಲಪುಷ್ಪಗಳಿಂದ, ಹಂಸಪಂಙ್ತಿಯಿಂದ, ಭೃಂಗಮಾಲೆಯಿಂದ ರಂಜಿತವಾದ ಸರೋವರ ಎಂಬ ಭ್ರಾಂತಿಯನ್ನುಂಟು

ಮಾಡುವ, ಜಲದ ತೆಳುಹಸಿರು–ನೀಲಿ ಬೆರೆತ ಮೃದು ಬಣ್ಣದ, ಹಂಸದ ತುಪ್ಪಳದಷ್ಟು ಮೃದುವಾದ ರತ್ನಗಂಬಳಿ; ಅಂಕಣಕ್ಕೊಂದು ಬಾರಿ, ಬೆಳಕು ಬರಲು, ಸೂರು ಬಿಡಿಸಿದೆಡೆಯಲ್ಲಿ ಸಣ್ಣಗೆ ವೀಣಾಧ್ವನಿ ಮಾಡುತ್ತಾ, ಪರಿಮಳದ ಜಲವನ್ನು ತುಂತುರುತುಂತರಾಗಿ ಚಿಮ್ಮುವ, ಬಗೆಬಗೆಯ ಪಕ್ಷಿ, ಮೃಗ, ಪುರುಷಾಕಾರದ ವಿಗ್ರಹಗಳನ್ನೊಳಗೊಂಡ ಚಿಕ್ಕ ಕಾರಂಜಿಗಳು.

ಒಂದೊಂದು ಅಂಕಣವೂ ಚಕ್ರವರ್ತಿಯ ಪ್ರಭುತ್ವವನ್ನು ಒಪ್ಪಿಕೊಂಡ ಬೇರೆಬೇರೆ ದೇಶಗಳ ಕಲಾ ಸೌಭಾಗ್ಯದ ಪ್ರದರ್ಶನಾಲಯದಂತೆ, ಅಲ್ಲಿನ ವಸ್ತು ವಿಶೇಷಗಳಿಂದ ಮನೋಹರವಾಗಿ ಅಲಂಕರಿಸಲ್ಪಟ್ಟಿವೆ. ಆ ಅಂಕಣದ ವಿಶಾಲ ದ್ವಾರ ಪ್ರದೇಶದಲ್ಲಿ ಆಯಾ ದೇಶದ ಸೈನಿಕರ ವಿಶಿಷ್ಟ ಉಡುಪು, ಶಸ್ತ್ರಗಳನ್ನು ಧರಿಸಿದ ಭಟರು ನೋಡುವವನ ಮನದಲ್ಲಿ ಗೌರವದೊಂದಿಗೆ ಭೀತಿಯನ್ನೂ ಮೂಡಿಸುತ್ತಾ ದ್ವಾರಪಾಲಕರಂತೆ ನಿಂತಿದಾರೆ. ಅಪ್ಪಣೆ ಪಡೆದು ಓಲಗಸಾಲೆಯನ್ನು ಪ್ರವೇಶಿಸಿದವರನ್ನು ಅಮೃತಶಿಲೆಯಲ್ಲಿ ಕಡೆದ ವಿಗ್ರಹದಂತೆ ಸುಂದರಿಯರಾದ, ಶ್ವೇತ ವಸ್ತ್ರಧಾರಿಗಳಾದ ಯುವನಸ್ತ್ರೀಯರು, ಕೈಯಲ್ಲಿ ಹಿಡಿದ ಬಂಗಾರದ ಕಟ್ಟಿಗೆಯಿಂದ ದಾರಿತೋರುತ್ತಾ, ಒಂದು ಅಂಕಣವನ್ನು ದಾಟಿಸುವರು. ಆ ಅಂಕಣದಿಂದ ಮತ್ತೊಬ್ಬರು ಬೇರೆ ವೇಷ್ಟಿಧಾರಿಗಳಾದ ಸುಂದರಿಯರು ದಾರಿತೋರುತ್ತಾ ಮುಂದಿನ ಅಂಕಣಕ್ಕೊಯ್ದು, ಅಲ್ಲಿನ ಕಾವಲು ಭಟರ ಬಳಿ, ಬಂದವರ ಹೆಸರು, ದಿಸೆಗಳನ್ನು ತಿಳಿಸಿ ಒಪ್ಪಿಸುವರು. ಹೀಗೆ ಅಂಕಣ ಅಂಕಣ, ಹದಿನಾರು ಅಂಕಣಗಳನ್ನು ದಾಟಿ ಬಂದರೆ ಅಂಕಣ ವಿಸ್ತೀರ್ಣದ, ನಡುವೆ ಚೌಕಾಕಾರದ ಬಯಲುಳ್ಳ, ನಾಲ್ಕು ಬದಿಗಳಲ್ಲೂ ವಿವಿಧ ವರ್ಣ, ಪರಿಮಳದ ಪುಷ್ಪಗಳನ್ನು ಹೊತ್ತ, ಚಿತ್ರ ಚಿತ್ರವಾಗಿ ಕತ್ತರಿಸಿ ಬೆಳೆಸಿದ ಗಿಡ ಬಳ್ಳಿಗಳ ಸಾಲುಗಳ ಅಂಚನ್ನು ಧರಿಸಿದ ಓಲಗಸಾಲೆಯ ಅಂಗಳ. ಅದರ ವಿಸ್ತಾರಕ್ಕೂ ಸಾಲಾಗಿ ನಿಂತ, ನೋಡಿದವರ ಎದೆಗಳಲ್ಲಿ ದಿಗ್ಗನೆ ಭಯಕಪಿಸುವ ಶಸ್ತ್ರಧಾರಿಗಳಾದ ಅಂಗರಕ್ಷಕರ ಪಡೆ. ಆ ಪಡೆಯ ನಾಯಕನಿಗೆ ಓಲಗಸಾಲೆಯ ಅಧಿ

ಕಾರಿಗಳು ಕೊಟ್ಟ ಅಪ್ಪಣೆಯ ಕುರುಹನ್ನು ತೋರಿಸಿ, ನಂತರ ಸಿಂಹಾಸನ ಶಾಲೆಯನ್ನು ಪ್ರವೇಶಿಸಬೇಕು.

ಅದುವರೆಗಿನ ವೈಭವವೇ ಕಣ್ಣು ಕುಕ್ಕಿಸಿದ್ದರೆ, ಸಿಂಹಾಸನ ಶಾಲೆಯ ಭವ್ಯ ವೈಭವ ನೋಡುವವನನ್ನು ಸಮ್ಮೂಢಚಿತ್ತನನ್ನಾಗಿ ಮಾಡುತ್ತದೆ. ಕತ್ತಲಲ್ಲಿ ಬಂದವನು, ತಟಕ್ಕನೆ ಬಹು ಉಜ್ವಲವಾದ ಬೆಳಕನ್ನು ಕಂಡಂತಾಗುವುದು—ಆಗತಾನೇ ಬೆಂಕಿಯಿಂದ ಹೊರತೆಗೆದಂತೆ ಥಳಥಳಿಸುವ ಮೆರುಗಿನ ಕಂಚಿನ ಕಂಭಗಳ ಸಿಂಹಾಸನ ಶಾಲೆಯನ್ನು ಹೊಕ್ಕರೆ. ಭರತಾಗಮದ ಅರವತ್ತುನಾಲ್ಕು ಭಂಗಿಗಳನ್ನು ಸೂಚಿಸುವ ನರ್ತಕಿಯರ, ಪುರುಷಪ್ರಮಾಣದ ವಿಗ್ರಹಗಳನ್ನು ಧರಿಸಿದ ಅರವತ್ತುನಾಲ್ಕು ಕಂಚಿನ ಕಂಭಗಳು, ಸ್ಥಿರಪ್ರಕಾಶದಿಂದ ಹೊಳೆವ ದೀಪಗಳಂತೆ, ಒಂದನ್ನೊಂದು ಪ್ರತಿಬಿಂಬಿಸುತ್ತಾ, ಬೆಳಕು ಚೆಲುತ್ತಾ ನಿಂತಿವೆ. ಸುಮಾರು ಐನೂರು ಜನರು ಕುಳಿತುಕೊಳ್ಳುವಷ್ಟು ವಿಸ್ತಾರವಾದ ಸಿಂಹಾಸನಶಾಲೆ ಕನ್ನಡ ರಾಜ್ಯಲಕ್ಷ್ಮಿಯ ವೈಭವೋಪೇತವಾದ ರಂಗಮಂದಿರದಂತಿದೆ. ಅದರ ನಡುವೆ, ನಾನಾ ರತ್ನಾಲಂಕಾರಗಳಿಂದ ಥಳಥಳಿಸುತ್ತಾ, ಜ್ವಾಲಾಮಾಲಿಯಂತೆ ಬೆಳಗುವ, ಶ್ವೇತಛತ್ರದಿಂದೊಡಗೂಡಿದ ಸುವರ್ಣ ಸಿಂಹಾಸನ. ಅದರಿಂದ ಅಷ್ಟು ದೂರಕ್ಕೆ ಅರ್ಧವೃತ್ತಾಕಾರದಲ್ಲಿ, ಬೇರೆಬೇರೆ ಸಚಿವರು, ಮಾಂಡಲಿಕರು, ಮನ್ನೆಯರ ಸ್ಥಾನಮಾನಗಳಿಗೆ ಉಚಿತವಾದ ಆಸನ ಪಂಕ್ತಿ. ಸಿಂಹಾಸನದ ಇಬ್ಬದಿಯಲ್ಲಿ, ಎರಡು ದಂತದ ಕೆತ್ತನೆಗೆಲಸದ ಪೀಠದ ಮೇಲೆ, ನವಿಲಿನ ಬಿಡಿಸಿದ ರೆಕ್ಕೆಯಂತಿರುವ, ವಜ್ರ ವೈಢೂರ್ಯ, ಪುಷ್ಯರಾಗ, ಪದ್ಮರಾಗ, ಮಣಿ ಮೌಕ್ತಿಕಗಳ ಚಿತ್ರಗೆಲಸದಿಂದ ಹೊಳೆಯುವ ಬೆನ್ನಿನ ಮಯೂರಾಸನಗಳು ಇಡಲ್ಪಟ್ಟಿವೆ—ಒಂದು ಪ್ರಧಾನ ಸಚಿವರಿಗೆ, ಮತ್ತೊಂದು ಯುವರಾಜರಿಗೆ. ಸಿಂಹಾಸನದ ಬೆನ್ನಕಡೆಯ ಇಬ್ಬದಿಯಲ್ಲಿ ಎತ್ತರವಾದ ಎರಡು ಸುವರ್ಣ ಸ್ತಂಭಗಳಮೇಲೆ, ಪ್ರಭೂತವರ್ಷ ಗೋವಿಂದ ಚಕ್ರವರ್ತಿಗಳಿಗೆ ಶರಣಾಗತಿಯ ಸೂಚನೆಯೆಂದು ಸಿಂಹಳದ ಅರಸು ಕಳುಹಿಸಿದ ಆತನ ಮತ್ತು ಆತನ ಪ್ರಧಾನಿಯ ಮೂರ್ತಿಗಳು ಚಾಮರಧಾರಿಗಳಾಗಿ ನಿಂತಿವೆ. ಸಿಂಹಾಸನವಿಟ್ಟ ಅಂಕಣದ

ಸೂರು ಸಹಸ್ರದಳವಿಕಸಿತ ಶ್ವೇತ ಪದ್ಮದಂತೆ ಅರಳಿದೆ, ಇಡೀಅಂಕ ಣಕ್ಕೆ ಪದ್ಮಛತ್ರ ಹಿಡಿದು. ಪದ್ಮ ಗರ್ಭದಲ್ಲಿ ಸಿಂಹಾಸನಕ್ಕೆ ರಕ್ಷೆಯಾಗಿ ಮೂಡಿದೆ—ತ್ರಿಮೂರ್ತಿ, ಅಷ್ಟ ದಿಕ್ಪಾಲಕರು, ಅಷ್ಟಮಾತೃಗಳು, ಗಣಪತಿ,ಆಂಜನೇಯರ ವಿಗ್ರಹಗಳು, ವಿಶಿಷ್ಟ ಮಂಡಲಗಳಲ್ಲಿ. ಕಮಲದ ಗೊಂಡೆಯಿಂದ ಇಳಿಬಿದ್ದ ಮುತ್ತು, ರತ್ನಗಳ ಗೊಂಚಲುಗಳ ಚಿನ್ನದ ಸರ ಪಳಿಯ ಕೊನೆಯಲ್ಲಿ, ಗರಿಬಿಚ್ಚಿನಿಂತಿದೆ-ಸಿಂಹಾಸನಕ್ಕೆ ಕಾವಲಾದ, ರಾಷ್ಟ್ರ ಕೂಟ ಲಾಂಛನ—ಸುವರ್ಣ ಗರುಡ, ನೋಡುವವರ ಎದೆಯಲ್ಲಿ ಭಯ ಹೊತ್ತಿಸುತ್ತಾ.

ಉಸಿರು ಬಿಗಿಹಿಡಿಸುವಂಥ ಸಿಂಹಾಸನಶಾಲೆಯ ವೈಭವದ ಭವ್ಯತೆಯನ್ನು ಮೂಕವಿಸ್ಮಯದಿಂದ ನೋಡುತ್ತಾ, ಚಕ್ರವರ್ತಿಗಳ ಆಗಮನವನ್ನು ಇದಿರುನೋಡುತ್ತಿದ್ದ ಅರಬಿಯ ಪ್ರವಾಸಿ ಸುಲೇಮಾನ್, ಅವರನ್ನು ಚಕ್ರವರ್ತಿಗಳಿಗೆ ಪರಿಚಯಮಾಡಿಕೊಡುವ ಭಾರ ಹೊತ್ತ ತಮ್ಮ ಅಧಿಕಾರ ಸೂಚಕವಾದ 'ವಜ್ರದ ಬಯಸಣಿಗೆ'ಯನ್ನು ಹಿಡಿದ ನಗರ ಶ್ರೇಷ್ಠಿಗಳು ಮತ್ತು ಕಾಜಿಗಳ ನಡುವೆ.

ಅರಬಿಯ ವ್ಯಾಪಾರಿಗೆ ಚಕ್ರವರ್ತಿಗಳು ದರ್ಶನ ಕೊಡುವ ವಿಶೇಷ ಸಭೆಗೆ ನಗರದ ಪ್ರಮುಖರೆಲ್ಲರೂ ಆಹ್ವಾನಿತರಾಗಿ ಬಂದು, ಸಭೆ ತುಂಬಿ ದ್ದರೂ, ಉಸಿರು ಹೊಯ್ಯುವ ಸದ್ದೂ, ಗಾಳಿ ಹಾಕುತ್ತಾ ಅಲ್ಲಲ್ಲಿ ನಿಂತ ದಾಸಿಯರು ಬೀಸುವ ನವಿಲುಗರಿಯ ಬೀಸಣಿಗೆಯ ಮೃದು ಶಬ್ದವೂ ಕೇಳುವಷ್ಟು ನಿಶ್ಶಬ್ದವಾಗಿತ್ತು ಸಭೆ.

ಸ್ವಲ್ಪಹೊತ್ತಿನಲ್ಲೇ ಚಕ್ರವರ್ತಿಗಳ ಆಗಮನ ಸೂಚಕವಾಗಿ, ಭೇರಿ ತಾಡನವಾಗಿ, ಪಂಚ ಮಹಾವಾದ್ಯಗಳು ಮೊಳಗಿದವು. ಅವುಗಳ ಸದ್ದು ಅಡಗುತ್ತಿದ್ದ ಹಾಗೇ, ರಾಷ್ಟ್ರಕೂಟ ಅರಸರ ಸಾರ್ವಭೌಮತ್ವ ಸೂಚಕವಾದ ವೀಣೆ, ಕೊಳಲು, ಶಂಖಗಳ ತಿವಳಿವಾದ್ಯ ಧ್ವನಿ ದೂರ ದಿಂದ ಹತ್ತಿರವಾಗಿ ಕೇಳಿ ಬಂದು ಕರಗಿ ಹೋಗುವ ವೇಳೆಗೆ, ಕಲಶ, ಕನ್ನಡಿ ಹಿಡಿದ ಸುಮಂಗಲಿಯರು, ಆಶೀರ್ವಾದ ಮಂತ್ರ ಪಠಿಸುವ ಪುರೋಹಿತರು, ರಾಜ ಲಾಂಛನಗಳನ್ನು ಹಿಡಿದ ಊಳಿಗದವರು, ಮಕರ ತೋರಣ, ಗರುಡಪತಾಕೆ, ಹನುಮ ಧ್ವಜ, ವರಾಹ ಲಾಂಛನಗಳನ್ನು

ಹಿಡಿದವರು ಸಿಂಹಾಸನ ಶಾಲೆಯ ಪಾರ್ಶ್ವದ್ವಾರದಿಂದ, ಇಬ್ಬಿಬ್ಬರಾಗಿ, ಸಾಲುಸಾಲಾಗಿ ಪ್ರವೇಶಿಸಿದರು. ಸ್ವಲ್ಪಹೊತ್ತಿನಲ್ಲೇ ವಂಧಿಮಾಗಧರ ಸ್ತುತಿಪಾಠ ಕೇಳಿಬಂದಿತು—ಮೃದುಮಧುರವಾಗಿ—

'ಸ್ವಸ್ತಿ–ಸಮಧಿಗತ ಪಂಚಮಹಾಶಬ್ದ, ಮಹಾರಾಜಾಧಿರಾಜ, ರಾಜ ಪರಮೇಶ್ವರ, ಪರಮ ಭಟ್ಟಾರಕ, ಶ್ವೇತಾತಪತ್ರತ್ರಯ ಕಲಹ ಕಾಹಲ ಶಂಖ, ಪಾಳಿಧ್ವಜೋರುಕೇತುಪತಾಕಾಛ್ಛಾದಿತ ದಿಗಂಬರಂ, ನಿರ್ಜಿತ ವೈರಿ ರಿಪುನಿವಹ ಕಾಲದಂಡಂ, ದುಷ್ಟ ಮದಭಂಜನಂ, ಅಮೋಘ ರಾಮಂ, ಪರಚಕ್ರಪಂಚಾನನಂ, ಸುರಾಸುರವರ್ಧನಂ, ವೈರಿ ಭಯಂಕರಂ, ಬದ್ಧಮನೋಹರಂ, ಅಭಿಮಾನ ಮಂದಿರಂ, ರಟ್ಟ ವಂಶೋದ್ಭವಂ, ಗುರುಡಲಾಂಛನಂ,ತಿವಳಿಪೆರೆಘೋಷಣಂ, ಲಟ್ಟಲೂರು ಪುರಪರಮೇಶ್ವರಂ, ಶ್ರೀಮದಮೋಘವರ್ಷ ನೃಪತುಂಗ ನಾಮಾಂಕಿತ ಲಕ್ಷ್ಮೀ ವಲ್ಲಭೇಂದ್ರಂ.... ಅವಧಾರು, ಅವಧಾರು.'

ಸ್ತುತಿಪಾಠ, ಸ್ವಸ್ತಿವಾಚನಗಳನ್ನು ಮಾಡುವವರು ಬಂದು ಹೋಗುತ್ತಿದ್ದಹಾಗೇ, ಸಭೆ ಚಕ್ರವರ್ತಿಗಳ ಆಗಮನಕ್ಕಾಗಿ ಎದ್ದು ತಲೆಬಾಗಿಸಿ ನಿಂದಿತು

ಬಿಚ್ಚುಗತ್ತಿ ಹಿಡಿದ ಯುವನ ಸುಂದರಿಯರ ಪಡೆಯ ನಡುವೆ, ದಿವ್ಯ ವಸ್ತ್ರಾಲಂಕಾರ ಭೂಷಿತೆಯರೂ, ಶ್ವೇತ ವಸ್ತ್ರಧಾರಿಯರೂ ಆದ ಸುಂದರಿಯರಿಬ್ಬರು ಚಾಮರವಿಕ್ಕುತ್ತಿರಲು, ಛತ್ರಧಾರಿಗಳು ಹಿಡಿದ ಮೂರು ಬೆಳ್ಗೊಡೆಗಳ ಕೆಳಗೆ, ರಾಜಾಲಂಕಾರ ಭೂಷಿತರಾದ ಚಕ್ರವರ್ತಿಗಳು ಪ್ರವೇಶಿಸಿದರು. ಸಭೆಗೆಸಭೆ ತಲೆಬಾಗಿ ವಂದಿಸಿತು—ಗಾಳಿಗೆ ಬಾಗುವ ಭತ್ತದ ಹಸುರಿನಂತೆ.

ಚಕ್ರವರ್ತಿಗಳು ಸಿಂಹಾಸನದ ಬಳಿ ಬಂದಾಗ, ರಾಜಪುರೋಹಿತ, ಪ್ರಧಾನಾಮಾತ್ಯರು ಚಕ್ರವರ್ತಿಗೆ ಕೈಗೊಟ್ಟು, ಸಿಂಹಾಸನವನ್ನು ಹತ್ತಿಸಿದರು. ಸಿಂಹಾಸನವನ್ನು ಹತ್ತಿದ ಚಕ್ರವರ್ತಿಗಳು ಸಭೆಗೆ ವಂದನೆ ಮಾಡಿ, ವೀರಮಂಡಿ ಹಾಕಿ, ಸಿಂಹಾಸನದ ಮೇಲೆ ಕುಳಿತುಕೊಳ್ಳುತ್ತಿದ್ದ ಹಾಗೇ ಆಸನದ ಮೇಲಿನ ಶ್ವೇತಛತ್ರದಲ್ಲಿ ಅಳವಡಿಸಿದ ಕೀಲುಗೊಂಬೆ ಚಕ್ರವರ್ತಿಗಳ ತಲೆಯಮೇಲೆ ಪುಷ್ಪವೃಷ್ಟಿಮಾಡಿತು.

ಸಭೆಯ ಆರಂಭದ ಕಾರ್ಯಕಲಾಪಗಳು ಮುಗಿದಮೇಲೆ, ಸಂಧಿ ವಿಗ್ರಹ ಸಚಿವರು, ಸಭೆಗೆ ಸುಲೇಮಾನರ ಪರಿಚಯಮಾಡಿಕೊಟ್ಟು, ಅವರ ಪ್ರಮಾಣಪತ್ರಗಳನ್ನು ಚಕ್ರವರ್ತಿಗಳಿಗೆ ಅರ್ಪಿಸಿದ ಬಳಿಕ, ಸುಲೇಮಾನರು ಚಕ್ರವರ್ತಿಗಳಿಗಾಗಿ ತಂದಿದ್ದ ಕಾಣಿಕೆಯ ವಸ್ತುಗಳನ್ನು ಆಳುಗಳು ಚಿನ್ನದಹರಿವಾಣದಲ್ಲಿ ತಂದು ಚಕ್ರವರ್ತಿಗಳ ಇದಿರು ಹಿಡಿದು ಅವರು ಹಸ್ತಸ್ಪರ್ಶಮಾಡಿದ ಬಳಿಕ ತೆಗೆದುಕೊಂಡುಹೋದರು. ಆ ಬಳಿಕ ಸುಲೇಮಾನರು, ಖಾಜಿಗಳೊಡನೆ ಸಿಂಹಾಸನದ ಬಳಿಸಾರಿ ಉಚಿತ ರೀತಿಯಲ್ಲಿ ನಮಸ್ಕರಿಸಿದರು.

ಸುಲೇಮಾನರ ವಂದನೆಯನ್ನು ಮಂದಹಾಸಪೂರ್ವಕವಾಗಿ ಸ್ವೀಕರಿಸಿ ಚಕ್ರವರ್ತಿಗಳು, ಮೃದು ಗಂಭೀರ ಧ್ವನಿಯಲ್ಲಿ ಅವರ ಯೋಗಕ್ಷೇಮ, ಅವರ ದೇಶದ, ದೊರೆಗಳ ಆರೋಗ್ಯಾಭಿವೃದ್ಧಿ, ಅವರ ಪ್ರವಾಸದ ಅನುಭವಗಳನ್ನು ವಿಚಾರಿಸಿ, ಸುಲೇಮಾನರಿಗೆ 'ರಾಷ್ಟ್ರಕೂಟ ರಾಜ್ಯದಲ್ಲಿ ಎಲ್ಲಿ ಬೇಕಾದರೂ ಪ್ರವಾಸಮಾಡಬಹುದು. ನಮ್ಮ ಸಚಿವರು ನಿಮಗೆ ಬೇಕಾದ ಅನುಕೂಲಗಳನ್ನು ಮಾಡಿಕೊಡುತ್ತಾರೆ' ಎಂದು ಆಶ್ವಾಸನ ಕೊಟ್ಟರು.

ಆ ದಿನ ಸಭೆಯಲ್ಲಿ ಚರ್ಚೆಯಾಗಬೇಕಾಗಿದ್ದ ವಿಷಯಗಳ ಆಲೋಚನೆ ಮುಗಿದಮೇಲೆ, ಓಲಗ ಮುಗಿದು, ಚಕ್ರವರ್ತಿಗಳು ಅಂತಃಪುರಕ್ಕೆ ತೆರಳಿದರು. ಸಭೆಯೂ ಚದರುವ ಮುನ್ನ ಸಂಧಿ- ವಿಗ್ರಹ ಸಚಿವರು ಖಾಜಿಗಳಿಗೆ—

'ಚಕ್ರವರ್ತಿಗಳು ನಿಮ್ಮ ಮಿತ್ರರನ್ನು ಈ ಸಂಜೆ ಮಂತ್ರಾಲೋಚನಾಗಾರದಲ್ಲಿ ಕಾಣಲು ಬಯಸುತ್ತಾರೆ, ಕರೆದು ತನ್ನಿ. ಎಷ್ಟು ಹೊತ್ತಿಗೆ ಬರುವುದಾಗಿ ಹೇಳಿದರೆ, ಆ ವೇಳೆಗೆ ರಥ ಕಳಿಸುತ್ತೇವೆ.' ಎಂದರು.

ಖಾಜಿ ಸೈಯದ್ ಇಮಾಂರು ಸಂಜೆಯವೇಳೆಗೆ ಬರುವುದಾಗಿ ತಿಳಿಸಿದರು.

ಸಂಜೆ ಮಂತ್ರಾಲೋಚನಾಗಾರದಲ್ಲಿ ಚಕ್ರವರ್ತಿಗಳನ್ನು ಕಂಡಾಗ ಸುಲೇಮಾನ್ ಚಕಿತನಾದ. ಓಲಗದ ವೈಭವಕ್ಕೆ, ಇಲ್ಲಿಯ ಸಮುಚಿತ

ಸರಳತೆಗೂ ಎಷ್ಟು ಅಂತರ!

ಬಾಗಿಲಬಳಿಯ ಆಳು ಇವರ ಆಗಮನವಾರ್ತೆಯನ್ನು ಸೂಚಿಸಿದ ಕೂಡಲೇ, ಚಕ್ರವರ್ತಿಗಳೇ ಎದ್ದು ಬಾಗಿಲವರೆಗೂ ಹೋಗಿ, ಅವರನ್ನು ಇದಿರುಗೊಂಡು ಕರೆತಂದು, ಕೂಡಲು ಪೀಠವನ್ನು ತೋರಿಸಿದರು. ಬೆಳಗಿನ ಓಲಗದ ವೈಭವ ಕಂಡ ಸುಲೇಮಾನರಿಗೆ, ಚಕ್ರವರ್ತಿಯ ಬಳಿಯ ಪೀಠದ ಮೇಲೆ ಕೂಡಲು ಧೈರ್ಯವಾಗಲಿಲ್ಲ; ಹಿಂಜರಿದರು. ಅವರ ಮನೋಭಾವ ಚಕ್ರವರ್ತಿಗಳಿಗೆ ಅರ್ಥವಾಯಿತು. ನಗುತ್ತಾ—

'ಕುಳಿತುಕೊಳ್ಳಿ. ನೀವು ಕುಳಿತುಕೊಳ್ಳಲೇ ಹಿಂಜರಿದರೆ, ನಾವು ನಿಮ್ಮೊಂದಿಗೆ ಮನಬಿಚ್ಚಿ ಮಾತನಾಡುವುದೆಂತು?' ಎಂದರು. ಖಾಜಿ ಸೈಯದ್ ಇಮಾಂರು, ಚಕ್ರವರ್ತಿಗಳ ಮಾತನ್ನು ಅರಬಿ ಭಾಷೆಯಲ್ಲಿ ಸುಲೇಮಾ಼ನ್‌ಗೆ ತಿಳಿಸಿದರು. ಮಹಾರಾಜರ ಮಾತನ್ನರಿತ ಸುಲೇಮಾ಼ನ್, ಅವರ ಮನದ ಸರಳತೆಗೆ ಮಾರುಹೋದರು.

'ಅಬ್ಬಾ! ಏನು ವೈಭವ ತಮ್ಮ ಆಸ್ಥಾನದ್ದು! ಬಗದಾದಿನ ಕಲೀಫರ ಆಸ್ಥಾನದ ವೈಭವ ಮತ್ತೆಲ್ಲಿಯೂ ಇಲ್ಲವೆಂದು ತಿಳಿದಿದ್ದೆ. ಆದರೆ ತಮ್ಮ ಆಸ್ಥಾನದ ಇದಿರು ಅದು ಸೂರ್ಯನ ಮುಂದೆ ಹಣತೆ. ಹಿಂದೂಸ್ಥಾನ ವಜ್ರವೈಢೂರ್ಯಗಳ ಸೀಮೆ ಎಂದು ಕೇಳಿದ್ದೆ. ಅದೆಲ್ಲವೂ ನಿಮ್ಮಲ್ಲೇ ಸೇರಿಯಾಗಿರುವಂತಿದೆ.'

—ಎಂದರು ಸುಲೇಮಾ಼ನ್.

'ನಿಜ. ಈ ವೈಭವವೆಲ್ಲಾ ನಿಮ್ಮಷ್ಟೇ ನಮಗೂ ಸಂತೋಷ ಕೊಡುತ್ತದೆ. ಆದರೂ ಒಂದೊಂದು ವೇಳೆ, ಇದೇ ಭಯಕ್ಕೂ ಕಾರಣ ವಾಗುತ್ತದೆ. ಅಲ್ಲವೇ ಖಾಜಿಗಳೇ?'

'ನಿಜ ಬಾದಷಹ, ಶ್ರೀಮಂತಿಕೆಗೇ ಚೋರಭಯ. ಅದಕ್ಕೇ ಬಡತನ ಪರಮಶ್ರೇಷ್ಠ ಎನ್ನುತ್ತಾರೆ.'

—ಎಂದರು ಸೈಯದ್ ಇಮಾಂ ಚಕ್ರವರ್ತಿಗಳ ಮಾತಿಗೆ ಸಮ್ಮತಿ ಸೂಚಿಸುತ್ತಾ.

'ಬಡತನ ಶ್ರೇಷ್ಠವೆಂದು ನಾವು ಒಪ್ಪುವುದಿಲ್ಲ.'

'ಏಕೆ?'

‘ ಶ್ರೀಮಂತಿಕೆಯೂ ಶ್ರೇಷ್ಠವಲ್ಲ, ಬಡತನವೂ ಶ್ರೇಷ್ಠವಲ್ಲ ಸಮಾನತೆಯೇ ಶ್ರೇಷ್ಠವಾದದ್ದು. ಎಲ್ಲಿ ಅಸಮಾನತೆಯೊ ಅಲ್ಲಿ ವಿಷಮತೆ, ದ್ವೇಷ, ಕ್ರೋಧ, ಅಸೂಯೆ. ಶ್ರೀಮಂತಿಕೆಯೇ ಇಲ್ಲವಾದಲ್ಲಿ ಭೀತಿಯೇ ಇಲ್ಲ.’

‘ ಸರ್ವ ಶ್ರೀಮಂತರಾದ ಚಕ್ರವರ್ತಿಗಳು ಈ ಮಾತು ಹೇಳುವುದೇ ?’ —ಸುಲೇಮಾನ್ ನಡುವೆ ಬಾಯಿಹಾಕಿ ಕೇಳಿದರು.

‘ ಸುತ್ತಮುತ್ತ ಕಾಣುವ ಆಡಂಬರವನ್ನು ನೋಡಿ ಹೇಳುವ ಹಾಗೆ ಕಾಣುತ್ತದೆ. ಆದರೆ ಇದೆಲ್ಲಾ ನಮ್ಮದಲ್ಲ!....’

‘ ಮತ್ತೆ ಯಾರದು ಬಾದಷಹ ? ’

‘ ದೇವರದು, ಪ್ರಜೆಗಳದು. ನಾವು ಕೆರೆಯ ನೀರು ಕಾಯುವ ತೂಬಿನ ಬಾಗಿಲು. ಕೆರೆಯಲ್ಲಿ ಬೇಕಾದಷ್ಟು ನೀರಿರುತ್ತದೆ. ಆದರೆ ಆ ಬಾಗಿಲು ಏನು ನೀರು ಕುಡಿಯಲು ಸಾಧ್ಯ ಹೇಳಿ. ನಮಗಿರುವುದೆಲ್ಲಾ ಆ ನೀರನ್ನು ಕಾಪಾಡುವ ಚಿಂತೆ ಮಾತ್ರ. ಆ ಚಿಂತೆಗಾಗಿಯೇ, ತಮ್ಮನ್ನು ಮತ್ತೆ ನೋಡಬೇಕೆಂದು ಬಯಸಿದ್ದು.?

ಚಕ್ರವರ್ತಿಗಳ ಬಾಯಿಂದ ಬಂದ ಮಾತನ್ನು ಕೇಳಿ ಸುಲೇಮಾನ್ ಚಕಿತರಾದರು. ರಾಜ್ಯದ ಬಗ್ಗೆ ಆರೀತಿ ಮಾತನಾಡುವ ಮಹಾರಾಜರನ್ನು ಅವರು ಕಂಡದ್ದು ಅದೇ ಮೊದಲು. ಗೌರವದಿಂದ ಎದ್ದುನಿಂತು ತಲೆಬಾಗಿ ವಂದಿಸಿ ಹೇಳಿದರು—

‘ ಖುದಾ ನಿಮಗೆ ಕೋಟಿವರ್ಷ ಆಯುಸ್ಸುಕೊಡಬೇಕು ಖಾವಂದ್, ಈ ದೇಶದ ಜನ ಭಾಗ್ಯವಂತರು.’

‘ ನಿಮ್ಮ ಅಭಿಮಾನಕ್ಕೆ ನಾವು ಕೃತಜ್ಞರು. ಆದರೂ ನಮ್ಮ ಬಗ್ಗೆ ತಪ್ಪು ಅಭಿಪ್ರಾಯವಿಟ್ಟುಕೊಂಡು ಹೋಗಬೇಡಿ.’

‘ ಏಕೆ ಖಾವಂದ್ ? ’

‘ ಖಾಜಿ ಸಾಹೇಬರನ್ನು ಕೇಳಿ ಹೇಳುತ್ತಾರೆ. ನಿಮಗೆ ಈ ದೇಶದ ಜನದ ಪರಿಚಯವಿಲ್ಲ. ಆ ಜನದ ಹಿರಿಮೆಯಲ್ಲಿ ಅಣುಅಂಶವೂ ನಮಗಿಲ್ಲ. ನಾವು ಸೂರ್ಯನನ್ನು ಬಿಂಬಿಸುವ ಮುಕುರ ಮಾತ್ರ. ಆಜನ ನಮ್ಮಲ್ಲಿ

ಇಟ್ಟ ವಿಶ್ವಾಸ, ನಂಬಿಕೆಯನ್ನು ಉಳಿಸಿಕೊಳ್ಳುವಂತೆ ಬಾಳಿದರೆ ಅದಕ್ಕಿಂತ ದೊಡ್ಡ ಸಿದ್ಧಿ ಬೇರೊಂದಿಲ್ಲ ನಮಗೆ.'

ಚಕ್ರವರ್ತಿಗಳ ಮಾತು ಕೇಳಿದಂತೆ, ಗಳಿಗೆಗಳಿಗೆಗೆ ಸುಲೇಮಾನರ ಅಚ್ಚರಿ ಹೆಚ್ಚಾಗಿ, ಗೌರವ ಇಮ್ಮಡಿ, ಮುಮ್ಮಡಿಯಾಗುತ್ತಿತ್ತು.

'ಇಷ್ಟುಹೊತ್ತು ನಮ್ಮ ಪ್ರಶಂಸೆಯೇ ಆಯಿತು. ಅದಕ್ಕಲ್ಲ ನಾವು ತಮ್ಮನ್ನು ಕರೆಸಿದ್ದು....'

'ಅಪ್ಪಣೆಯಾಗಲಿ....'

'ತಾವು ಉತ್ತರದ ಸೀಮೆಗಳನ್ನೆಲ್ಲಾ ಸುತ್ತಿ ಬಂದಿದೀರಂತೆ. ಎಲ್ಲ ರಾಜಾಸ್ಥಾನಗಳನ್ನೂ ಹೊಕ್ಕುಬಂದಿರೆಂದು ಹೇಳಿದರು ಖಾಜಿಗಳು. ಆ ಸೀಮೆಗಳಲ್ಲಿ, ಆ ದೊರೆಗಳಿಗೆ ನಮ್ಮ ವಿಷಯದಲ್ಲಿ, ನಮ್ಮ ದೇಶದ ವಿಷಯ ದಲ್ಲಿ ಏನು ಭಾವನೆಯಿತ್ತೆಂಬುದೇನಾದರೂ ಗೊತ್ತಾಗಿದ್ದರೆ ತಿಳಿಸಬೇಕು.'

'ಎಲ್ಲ ಕಡೆಯಲ್ಲೂ ತಮ್ಮ ಹೊಗಳಿಕೆಯೇ ಕೇಳಿಬಂದು, ಅದಕ್ಕೆಂದೇ ತಮ್ಮ ದರ್ಶನಮಾಡಲು ಬಂದೆ.'

'ನಮ್ಮ ವಿಷಯದಲ್ಲಿ ಎಲ್ಲೂ, ಯಾವ ಬಗೆಯ ಅಸಮಾಧಾನವೂ ವ್ಯಕ್ತವಾದುದು ಕಾಣಲಿಲ್ಲವೇ ?....ತಾವು ಮುಖ್ಯನಾಗಿ ಯಾವ ವ್ಯಾಪಾರ ಮಾಡುತ್ತೀರಿ.'

'ಕುದುರೆಗಳದು.'

'ಏನಾದರೂ ವ್ಯಾಪಾರವಾಯಿತೆ ? ಯಾವ ಅರಸರು ತೆಗೆದು ಕೊಂಡರು....?'

'ಬೇರೆ ಕಡೆ ಹೆಚ್ಚೇನೂ ವ್ಯಾಪಾರವಾಗಲಿಲ್ಲ. ಕನ್ಯಾಕುಬ್ಜದ ಅರಸರು ಮಾತ್ರ ಎರಡುಸಾವಿರ ಕುದುರೆಗಳು ಬೇಕು ಎಂದರು.'

'ಎಂಥ ಕುದುರೆಗಳು ಬೇಕೆಂದು ಹೇಳಿದರು....'

'ದೀರ್ಘಪ್ರವಾಸಮಾಡಿಯೂ ದಣಿಯದಂಥ, ವೇಗವಾಗಿ ಓಡುವ ಕುದುರೆಗಳು ಬೇಕು, ಆದಷ್ಟು ಬೇಗ ತರಿಸಿಕೊಡುವ ಏರ್ಪಾಟುಮಾಡಿ ಎಂದರು. ಅವರು ಯಾರಮೇಲೋ ಯುದ್ಧಕ್ಕೆ ಸಿದ್ಧತೆಮಾಡಿಕೊಳ್ಳು ತ್ತಿರುವಂತಿದೆ....'

'ಹಾಗೆಂದು ಹೇಳಿದರೇ ?'

'ಆ ವಿಷಯ ಎಲ್ಲಿಯಾದರೂ ಹೇಳುತ್ತಾರೆಯೇ? ಅವರಾಡಿದ ಮಾತಿನಮೇಲೆ ಅರ್ಥಮಾಡಿಕೊಂಡೆ. ಅಂತೂ ಯಾವುದೋ ದೂರ ದೇಶದಮೇಲೆ ಯುದ್ಧಕ್ಕೆ ಹೊರಡುವ ಆಲೋಚನೆ ಇರುವಂತಿದೆ.'

'ನಮಗಾಗಿ ತಾವು ಒಂದು ಕೆಲಸ ಮಾಡಬೇಕು....'

'ಏನು?'

'ಮತ್ತೆ ತಾವು ಕನ್ಯಾಕುಬ್ಜದತ್ತ ಹೋಗುವ ಸಂಭವವಿದೆಯೇ?'

'ಇದೆ.'

'ಹೋದರೆ ...ಹೋದಾಗ ... ಈ ಯುದ್ಧಸಿದ್ಧತೆ ಯಾರಮೇಲೆಂದು ತಿಳಿಯಲು ಪ್ರಯತ್ನಮಾಡಿ, ತಿಳಿದುಬಂದರೆ ನಮಗೆ ತಿಳಿಸುತ್ತೀರಾ?'

ಚಕ್ರವರ್ತಿಗಳ ಮಾತನ್ನು ಕೇಳಿ ಖಾಜಿಗಳು ನಕ್ಕರು.

'ಏಕೆ ನಗುತ್ತೀರಿ?'

'ಅಂತೂ ನಮ್ಮ ಸುಲೇಮಾನ್ ತಮ್ಮ ಗೂಢಚಾರರಾಗಬೇಕೆಂದು ಬಾದಷಹರ ಇಚ್ಛೆ ಇರುವಂತಿದೆ.'

'ನಿಜ. ಅದು ಕಟುವಾಗಿ ಕಂಡರೂ ಸತ್ಯ. ಈರೀತಿ ಮರೆಯಲ್ಲಿ ಪರರ ವಿಷಯ ತಿಳಿಯುವುದು ನಮಗೂ ಒಪ್ಪದ ವಿಷಯ. ಆದರೇನು ಮಾಡುವುದು ಖಾಜಿಗಳೇ. ನಮಗೆ ಈ ಸುದ್ದಿ ಸಂಗ್ರಹವೂ ಬೇಡ, ಸಮರವೂ ಬೇಡ. ನಾವು ಬೇಡವೆಂದರೂ ಬೇರೆಯವರು ಬಿಡದಿರುವಾಗ ಏನು ಮಾಡುವುದು?'

'ಪರಿಣಾಮ ಏನಾಗುವುದೆಂದು ತಿಳಿದು ತಿಳಿದೂ, ಅವರೇಕೆ ಮೇಲೆ ಬೀಳುವ ಪ್ರಯತ್ನಮಾಡುತ್ತಾರೋ ನಾನರಿಯೆ'—ಎಂದರು ಖಾಜಿ ಸಯ್ಯದ್ ಇವರಾ.

'ಶಾಂತಿಪ್ರಿಯತೆ ಹೇಡಿತನವೆಂದು ತಿಳಿಯುವ ಜನ ಅವರು....ಏನು ಮಾಡುವುದು? ಆದರೂ... ಆದರೂ ಸುಲೇಮಾನರಿಗೆ ನಮ್ಮ ಮಾತು ಅಪ್ರಿಯವಾದರೆ, ಆ ಮಾತನ್ನು ಮರೆತು ಮನ್ನಿಸಿ....'

'ಗೂಢಚಾರ ಕೆಲಸಮಾಡುವುದು ನನಗೂ ಇಷ್ಟವಿಲ್ಲ ಬಾದಷಹ. ಆದರೂ ತಮ್ಮ ಮಿತ್ರನಂತೆ ಗೊತ್ತಾದ ವಿಚಾರ ತಮಗೆ ತಿಳಿಸುತ್ತೇನೆ.'

'ಅಷ್ಟುಮಾಡಿದರೆ ನಮಗೂ, ನಮ್ಮ ರಾಜ್ಯಕ್ಕೂ ಮಹದುಪಕಾರ ಮಾಡಿದಂತಾಗುತ್ತದೆ.'

'ನಮ್ಮ ಸ್ನೇಹದಿಂದ ತಮಗೆ ಅಲ್ಪ ಸಹಾಯವಾದರೆ, ನಮ್ಮ ಸ್ನೇಹವೂ ಸಾರ್ಥಕವಾದಂತಾಗುತ್ತದೆ.'

'ಆ ವಿಶ್ವಾಸಕ್ಕೆ ನಾವು ಚಿರಋಣಿಗಳು. ವಿಶ್ವಾಸಋಣವನ್ನು ಪ್ರತಿಫಲಕೊಟ್ಟು ತೀರಿಸಲು ಸಾಧ್ಯವಿಲ್ಲವಾದರೂ ನಮ್ಮಿಂದ ತಮಗೆ ಯಾವುದೇ ರೀತಿಯಲ್ಲಾದರೂ ಸಹಾಯವಾಗುವುದಿದ್ದರೆ ಸಂಕೋಚವಿಲ್ಲದೆ ತಿಳಿಸಬೇಕು. ನಮ್ಮಿಂದ ಆದುದನ್ನು ಮಾಡಲು ನಾವೂ ಸಿದ್ಧರಿದೇವೆ.'

'ಬಾದಷಹರಿಗೆ ನಮ್ಮ ಮೇಲೆ ಅಷ್ಟು ಕೃಪೆ ಇದ್ದರೆ, ಇಲ್ಲೊಂದು ನಮ್ಮ ಅಂಗಡಿ ತೆಗೆಯಲು ಅಪ್ಪಣೆ ಕೊಡಿಸಬೇಕು. ಆಬಗ್ಗೆ ನಗರ ಶ್ರೇಷ್ಠಿಗಳಲ್ಲಿ ವಿಚಾರಮಾಡಿದೆ. ಸಂಧಿ-ವಿಗ್ರಹ ಸಚಿವರ ಅಪ್ಪಣೆ ಇಲ್ಲದೆ, ಪರದೇಶೀಯರು ಇಲ್ಲಿ ಅಂಗಡಿ ತೆಗೆಯುವಂತಿಲ್ಲ ಎಂದರು. ಆದ್ದರಿಂದ, ಅದೊಂದು ಅಪ್ಪಣೆಯಾದರೆ, ಅನುಗ್ರಹವಾಗುತ್ತದೆ.'

'ಆಗಲಿ, ವಿಜಯಾದಿತ್ಯರೊಂದಿಗೆ ಮಾತನಾಡುತ್ತೇವೆ. ನಗರ ಶ್ರೇಷ್ಠಿಗಳೂ ಒಪ್ಪಬೇಕು. ಇದವರ ವೃತ್ತಿಗೆ ಸಂಬಂಧಿಸಿದ ವಿಚಾರ. ಅವರು ಕೂಡದು ಎಂದು ಶ್ರೇಣಿಯಲ್ಲಿ ತೀರ್ಮಾನಮಾಡಿದರೆ ನಾವಾರೂ ಏನೂ ಮಾಡುವಂತಿಲ್ಲ.'

'ನಿಮ್ಮದೇಶದಲ್ಲಿ ಇದೊಂದು ಬಹಳ ಒಳ್ಳೆಯ ಪದ್ಧತಿ ಷಹಾಣಷಹ. ವೃತ್ತಿಯವರೇಒಂದು ಗುಂಪಾಗಿದ್ದು,ಅವರಿಗೆ ಇಷ್ಟು ಅಧಿಕಾರ-ಸ್ವಾತಂತ್ರ್ಯ ವಿರುವುದು, ನಿಜವಾಗಿಯೂ ವೃತ್ತಿಗಳು ಬೆಳೆಯಲು ತುಂಬಾ ಅನುಕೂಲ ವಾಗುತ್ತದೆ. ನಾನೂ ನಗರಶ್ರೇಷ್ಠಿಗಳೊಂದಿಗೆ ಈ ಶ್ರೇಣಿಪದ್ಧತಿಯ ವಿಚಾರ ಚರ್ಚೆಮಾಡಿ ತಿಳಿದುಕೊಂಡೆ.'

'ಬರೀ ವ್ಯಾಪಾರಿಗಳಿಗೇನು ಸುಲೇಮಾನ್, ಧರ್ಮದಲ್ಲೂ ಅಷ್ಟೆ— ಬ್ರಾಹ್ಮಣರ ಅಗ್ರಹಾರ, ಜೈನರಸಂಘ, ಬೌದ್ಧರ ವಿಹಾರಗಳದೇ ಅಂತಿಮ ತೀರ್ಪು, ಅವರವರಿಗೆ ಸಂಬಂಧಿಸಿದ ವಿಚಾರದಲ್ಲಿ. ಈ ಅಗ್ರಹಾರಗಳು, ಶ್ರೇಣಿಗಳು ನಡೆಸುವ ವಿದ್ಯಾಲಯಗಳನ್ನು ನೋಡಬೇಕು ನೀವು. ಓ-ಖುದಾ ಸಂತುಷ್ಟನಾಗುವ ನೋಟ!'

'ಇಂಥ ಬಾದಷಹರಿದ್ದರೆ ದೇಶದ ಸೌಭಾಗ್ಯಕ್ಕೇನು ಕಡಮೆ ಹಜರತ್ ?'

'ಒಬ್ಬೊಬ್ಬರೂ ಅವರ ಕೆಲಸಮಾಡಿಕೊಂಡು, ಬರೀ ಮೇಲ್ವಿಚಾರಣೆಗೆ ನೀವಿರಿ ಎಂದರೆ, ನಾವೂ ಇದೇವೆ ಎಂದು ಓಡಾಡಿಕೊಂಡಿರಲು ಏನು ಕಷ್ಟಪಡಬೇಕು ಹೇಳಿ?' ಚಕ್ರವರ್ತಿಗಳು ನಗುತ್ತಾ ಕೇಳಿದರು.

'ಬಾದಷಹರು ಕ್ಷಮಿಸಬೇಕು, ನಿಮ್ಮ ಸಂತೋಷಕ್ಕೆ ಭಂಗತರುತ್ತಿದೇನೆ.'

'ಏನು ಹೇಳಿ.'

'ಸುಲೇಮಾನಿಗೆ ನಿಮ್ಮ ಸೀಮೆ ಎಂದರೆ ಹುಚ್ಚುಹಿಡಿದು ಹೋಗಿದೆ. ಇವೊತ್ತೆಲ್ಲಾ ಕುಳಿತರೂ ಮಾತು ಮುಗಿಯುವುದಿಲ್ಲ. ಆದರೆ ನಮಗೆ ನಮಾಜ್‌ನ ವೇಳೆ....'

'ಕ್ಷಮಿಸಿ. ಆ ವಿಚಾರ ನಮಗೂ ಮರೆತುಹೋಗಿತ್ತು.... ಸಾಧ್ಯವಾದರೆ ಹೋಗುವ ಮುನ್ನ ಮತ್ತೊಮ್ಮೆ ಬಂದು ಭೇಟಿಮಾಡಿ ಹೋದರೆ ತುಂಬಾ ಸಂತೋಷವಾಗುತ್ತದೆ.'

'ನಮಗೆ ಬೇಕಾದ ಮಾತನ್ನೇ ಬಾದಷಹರೂ ಹೇಳಿದರೆ ಪಾಲಿಸಲು ಕಷ್ಟವೇ ?' ಎಂದರು ಖಾಜಿಗಳು ನಗುತ್ತಾ.

ಅವರಿಬ್ಬರೂ ಚಕ್ರವರ್ತಿಗಳಿಗೆ ವಂದಿಸಿ ತೆರಳಿದರು.

ಅವರು ತೆರಳಿದ ಬಳಿಕ ಅದುವರೆಗೂ ಗೆಲುವಾಗಿದ್ದ ಚಕ್ರವರ್ತಿಗಳ ಮುಖ ಚಿಂತಾಗ್ರಸ್ತವಾಯಿತು.

'ಕನ್ಯಾಕುಬ್ಜದ ಮಿಹಿರಭೋಜ ಯುದ್ಧಸಿದ್ಧತೆ ಮಾಡಿಕೊಳ್ಳುತ್ತಿದ್ದಾನೆ.' ಯಾರ ವಿರುದ್ಧ ಆ ಸಿದ್ಧತೆಯೆಂಬುದು ಚಕ್ರವರ್ತಿಗಳಿಗೆ ಗೊತ್ತು. ಅವನ ದ್ವೇಷದ ಮೊದಲ ಗುರಿ, ಅವನ ದಾಳಿಗೂ, ರಾಷ್ಟ್ರಕೂಟ ರಾಜ್ಯಕ್ಕೂ ನಡುವೆ ದುರ್ಗದ ಬಾಗಿಲಿನಂತಿದ್ದ ಸೌರಾಷ್ಟ್ರ; ಅದಾದ ಬಳಿಕ ಕರ್ನಾಟಕ. ಗೋವಿಂದ ಚಕ್ರವರ್ತಿಗಳ ಧಾಳಿಗೆ ಸಿಕ್ಕಿ ಪ್ರತೀಹಾರ ನಾಗಭಟ್ಟ, ಸಿಂಹಾಸನ ಬಿಟ್ಟು ಓಡಿ ಕಾಡುಮೇಡು ಅಲೆದುದನ್ನು ಮಿಹಿರ ಭೋಜ ಮರೆತಿರಲಿಲ್ಲ. ತನ್ನಜ್ಜನಿಗಾದ ಅಪಮಾನದ ಸೇಡು ತೀರಿಸಲು ಸರ್ಪದಂತೆ ಹೊತ್ತು ಕಾಯುತ್ತಿದ್ದ.

ಸುಲೇಮಾನರು ಹೇಳಿದುದನ್ನು ಕೇಳಿದಮೇಲೆ, ಇನ್ನು ಅವನನ್ನು ಎದುರಿಸುವ ದಿನ ದೂರವಿಲ್ಲ ಎನಿಸಿ, ಚಕ್ರವರ್ತಿಗಳ ಹೃದಯದ ಶಾಂತಿ ಕಲಕಿ, ಅಶಾಂತಿಯ ತೆರೆ ಹೊಯ್ದಾಡತೊಡಗಿತು.

ಬೇಡಬೇಡವೆಂದರೂ ಬೆನ್ನುಹತ್ತಿದೆ ಯುದ್ಧ. 'ದೇವರ ಚಿತ್ತ ವಿದ್ದಂತಾಗಲಿ' ಎಂದುಕೊಂಡರು. ಭಾರವಾದ, ಬಿಸಿಯಾದ ನಿಟ್ಟುಸಿರು ಅವರ ಚಿತ್ತದ ಬೇಗೆಗೆ ಸಾಕ್ಷಿಯೆಂಬಂತೆ ಹೊರಬಂದು ಗಾಳಿಯಲ್ಲಿ ಬೆರೆಯಿತು.

ತೋಳುಗಳಿಂದ ಕಣ್ಣುಮುಚ್ಚಿ, ಅಲ್ಲೇ ಇದ್ದ ವಿರಾಮಾಸನದಮೇಲೆ ಮೈಚಾಚಿದರು

## ೧೦

ಗರ್ಭವತಿಯಾದ ಮಹಾರಾಣಿಯವರಿಗೆ ಬಯಕೆಯೊಂದು ಮೂಡಿತು. ಪರಿವಾರದ ಬಹುಜನರಿಂದ ಮಹಾರಾಣಿಯವರು ಬನವಾಸೀಪ್ರಾಂತದ ಪ್ರಕೃತಿಸೌಂದರ್ಯದ ವಿಚಾರವನ್ನು ಬಹುವಾಗಿ ಕೇಳಿದ್ದರು. ದೂರದ ಬನವಾಸಿಯಿಂದ ಯಾವ ಯಾವ ಕಾರಣಕ್ಕೋ, ಹೇಗೋ ಮಾನ್ಯಖೇಟದ ವರೆಗೂ ಬಂದು, ಅರಮನೆಯ ಆಶ್ರಿತರ ವರ್ಗವನ್ನು ಸೇರಿದ ಆ ಜನ ಗಳಿಗೆ ಗೊಂದುಬಾರಿ ತಮ್ಮ ನಾಡನ್ನು ನೆನೆಸಿಕೊಳ್ಳುವುದನ್ನು ಕೇಳಿದ್ದರವರು. ಮಲ್ಲಿಗೆಯ ಹೂವಿನ ನವಿರಾದ ವಾಸನೆ ಗಾಳಿಯಲ್ಲಿ ಸುಳಿದರೆ, ದುಂಬಿಯ ಝೇಂಕಾರ ಕೇಳಿದರೆ, ರಾಜಧಾನಿಯ ಹೊರಗೆ, ಕಾಹಿನೀನದಿಯ ದಡ ದಲ್ಲಿರುವ ರಾಜೋದ್ಯಾನದಲ್ಲಿ ಸುತ್ತುವಾಗ ಕೋಗಿಲೆಯ ಇಂಚರ ಕೇಳಿದರೆ 'ಏನಿದು? ಇದು ಮಲ್ಲಿಗೆಯೋ, ಇದು ಕೋಗಿಲೆಯೇ–ಎಲ್ಲಾ ಬೀಕಲು. ಇದರ ಆನಂದವನ್ನು ಸವಿಯಬೇಕೆಂದರೆ ಬನವಾಸಿಗೇ ಹೋಗಬೇಕು' ಎನ್ನುವರು.

ಮಹಾರಾಣಿಯವರ ಆಪ್ತದಾಸಿ ಕೇತಲೆಯೂ ಬನವಾಸಿಯ ಕನ್ಯೆ. ದಿನಕ್ಕೊಂದುಬಾರಿಯಾದರೂ ಅವಳು ಬನವಾಸಿಯನ್ನು ನೆನೆಸಿಕೊಳ್ಳುವಳು ಏನಾದರೂ ನೆಪಮಾಡಿಕೊಂಡು. ಪುಷ್ಪಬಂಧಕಲೆಯಲ್ಲಿ ಮಹಾಚತುರೆ ಅವಳು. ಹೆಡೆಬಿಚ್ಚಿದ ಹಾವಿನಹಾಗೆ, ಗರಿಬಿಚ್ಚಿದ ನವಿಲಿನಹಾಗೆ,

ಅರಳಿದ ಕಮಲದಂತೆ ಹೂದಂಡೆಯನ್ನು ಕಟ್ಟುವುದನ್ನು ಕಂಡು, ಅವಳ ಚಾತುರಿಯನ್ನು ಹೊಗಳಿದರೆ—

'ನಾನು ಯಾವ ಮೂಲೆಯ ಸೊಪ್ಪು ದೇವಿ, ಬನವಾಸಿಯ ಹುಡುಗಿಯರು ಹೂವು ಕಟ್ಟುವುದಿರಲಿ, ರಂಗೋಲಿಯಲ್ಲಿ ಹೂವು ಬಿಡಿಸಿದರೆ ದುಂಬಿಗಳು ಬಂದು ಮುತ್ತುತ್ತವೆ; ಅಂಥಾ ಚದುರೆಯರು! ಅಲ್ಲದೆ ಇಲ್ಲಿಯ ಹೂವು ತಾನೇ ಏನು ದೇವಿ. ಅಲ್ಲಿಯ ಮಲ್ಲಿಗೆಯನ್ನೋ, ಸಂಪಿಗೆಯನ್ನೋ ಮುಡಿದರೆ, ಮುಖಕ್ಕೆ ಅವಗುಂಠನವಿಲ್ಲದೆ ಹೊರಗೆ ಬರುವುದಾಗುವುದಿಲ್ಲ. ಮುಖಕ್ಕೇ ಮುತ್ತುತ್ತವೆ ದುಂಬಿಗಳು, ಅಷ್ಟು ವಾಸನೆ!'

—ಎನ್ನುವಳು.

ಅವರ ಬಾಯಿಂದ ಬನವಾಸಿಯ ಹೊಗಳಿಕೆಯನ್ನು ಕೇಳಿದಾಗ ಮಹಾರಾಣಿಯವರು 'ಹುಟ್ಟಿದೂರು ಯಾರಿಗೆ ಪ್ರಿಯವಲ್ಲ' ಎಂದುಕೊಂಡರೂ, ಬಾರಿ ಬಾರಿ ಆ ಹೊಗಳಿಕೆಯನ್ನು ಕೇಳಿದಾಗ ತಾವೂ ಒಮ್ಮೆ ನೋಡಬೇಕು ಎನಿಸುವುದು. ಆದರೆ ಅದಕ್ಕೆ ಬಿಡುವೆಲ್ಲಿ?

ಒಂಟಿಯಾಗಿ ಹೋಗಿ ಬರಬಹುದಾದರೂ ಅದವರಿಗೆ ಇಷ್ಟವಿಲ್ಲ. ಚಕ್ರವರ್ತಿಗಳೂ ಜೊತೆಗೆ ಬರಬೇಕೆಂದರೆ, ಅವರಿಗೆ ದಿನದ ಇಪ್ಪತ್ತು ನಾಲ್ಕುಗಂಟೆಯ ಹೊತ್ತು ಸಾಲದೆಂಬಷ್ಟು ಆಡಳಿತದ ಚಿಂತೆ. ದೂರದ ಬನವಾಸಿಯಿರಲಿ, ಹತ್ತಿರದ ಅಜಂತಾ, ಏಲಾಪುರದ ಕೈಲಾಸ ದೇವಾಲಯಗಳನ್ನು ನೋಡಿ ಬರಲೂ, ಗಂಡನಮನೆಗೆ ಬಂದಮೇಲೆ ಹತ್ತುವರ್ಷ ಕಾಯಬೇಕಾಗಿ ಬಂದಿತ್ತು. ಅಂಥದವರಲ್ಲಿ ಇನ್ನು ಬನವಾಸಿಯ ಯೋಚನೆಯೇ—ಎಂದು ಒತ್ತಿ ಬಂದ ಬಯಕೆಯನ್ನು ಹಾಗೇ ಮರೆಯುತ್ತಿಸುವರು.

ಅಷ್ಟು ದಿನದಿಂದ 'ಈಗಬೇಡ, ಈಗಬೇಡ' ಎಂದು ಮರೆಯುತ್ತಿಸಿದ ಬಯಕೆ ಈಗ ಅದನ್ಯವಾಗಿ ಕೆರಳಿತ್ತು. ಏಕೋ ಅವರ ಮನಸ್ಸಿಗೆ 'ಬನವಾಸಿಗೆ ಹೋದರೆ ಈಗ ಹೋಗಬೇಕು, ಇಲ್ಲವಾದರೆ ಇಲ್ಲ' ಎನಿಸಿತು. ಆದುದರಿಂದ ಮನದಾಸೆಯನ್ನು ತಳಿಯಲಾರದೆ, ಪತಿಗೆ ಹೇಳುವುದೋ ಬೇಡವೋ ಎಂದುಕೊಳ್ಳುತ್ತಲೇ ಹೊತ್ತುಕಾದು ಹೇಳಿದರು—

'ಬಿಡುವಿದ್ದರೆ ನಾಲ್ಕುದಿನ ಬನವಾಸಿ ಪ್ರಾಂತ್ಯದತ್ತ ಹೋಗಿ ಬರೋಣ'—ಎಂದು.

ಎಂದೂ ತನಗೆ ಇಂಥದು ಬೇಕು ಎಂದು ಕೇಳದ ಮಡದಿಯ ಮನದಾಸೆಯನ್ನರಿತು ಚಕ್ರವರ್ತಿಗಳಿಗೆ, ಆ ಬಯಕೆಯನ್ನು ತೀರಿಸಬೇಕೆನಿಸಿದರೂ, ಸುಲೇಮಾನರು ಹೇಳಿದುದನ್ನು ಕೇಳಿದಮೇಲೆ, ರಾಜಧಾನಿಯನ್ನು ಬಿಟ್ಟು ಕದಲಲು ಮನಸಾಗಲಿಲ್ಲ. ಯಾವದಿನ, ಏನಾಗುವುದೋ. ಆದರೂ ಅದಕ್ಕಾಗಿ ಮಹಾರಾಣಿಯ ಬಯಕೆಯನ್ನು, ಅದೂ ಗರ್ಭಿಣಿಯ ಬಯಕೆಯನ್ನು ಬೇಡ ಎನ್ನುವುದು ಹೇಗೆ? ಆ ಬಯಕೆಯನ್ನುಸಲ್ಲಿಸುವ ನಿರ್ಧಾರವನ್ನು ಮಾಡಲಾಗದೆ, ಇಲ್ಲ ಎನ್ನಲೂ ಆಗದೆ—

'ಆಗಲಿ—ಈಗೇನು ಅವಸರ, ಮತ್ತೊಮ್ಮೆ ಹೋಗಿ ಬರೋಣ' ಎಂದರು.

'ಈಗ ಹೋಗಿ ಬರಲು ತೊಂದರೆಯೇ ಪ್ರಭು?'

'ತೊಂದರೆ ಬಂದಿಲ್ಲ, ಬರುವ ಸೂಚನೆ ಇದೆ.'

ಆ ಮಾತು ಕೇಳಿ ಮಹಾರಾಣಿಯವರ ಮನಸ್ಸು ಒಂದು ಗಳಿಗೆ ನಿರಾಸೆಯಿಂದ ಕಹಿಯಾಯಿತು. ಈ ರಾಜಕಾರಣದ ನಿತ್ಯಚಿಂತೆಯಲ್ಲಿ ಬಿಡುವೇ ಇಲ್ಲವೇ? ಆ ನಿರಾಶೆಯಲ್ಲೇ ಹೇಳಿದರು—

'ಈ ರಾಜ್ಯದ ಚಿಂತೆಯಲ್ಲಿ ರಾಜ್ಯದೊಂದಿಗೆ ಪ್ರಭುಗಳು ನನ್ನನ್ನು ಕೈಹಿಡಿದಿರುವುದನ್ನೂ ಮರೆತಂತಿದೆ.'

ನಿರಾಶೆಯು ಕಹಿಯಿಂದ ಮೂಡಿ ಬಂದ ಮಾತು ಬೇಡವೆಂದರೂ ಕೊಂಚ ಮೊನೆಯಾಗಿತ್ತು. ಆ ಮೊನೆ ತಗುಲಿ ಚಕ್ರವರ್ತಿಗಳ ಮನಸ್ಸಿಗೆ ವ್ಯಥೆಯಾಯಿತು.

'ಅಂತೂ ನಮ್ಮ ಕೈಹಿಡಿದು ನಿಮಗೆ ಸುಖವಾಗಲಿಲ್ಲ.'

ಆ ಮಾತನ್ನು ಚಕ್ರವರ್ತಿಗಳು ಆಡಿದ ರೀತಿಯಲ್ಲೇ, ಅವರ ಮನಸ್ಸಿಗೆ ತಮ್ಮ ಮಾತಿನಿಂದ ವ್ಯಥೆಯಾದುದು ಮಹಾರಾಣಿಯವರಿಗೆ ಅರಿವಾಯಿತು. ಅವರ ಮನನೋಯಿಸಿದುದಕ್ಕಾಗಿ ತಮ್ಮಮೇಲೇ ಸಿಟ್ಟುಬಂತು.

'ಏನೋ ಆಡಿಬಿಟ್ಟೆ, ಕ್ಷಮಿಸಿ. ಹೋಗುವುದು ಬೇಡ.'

‘ ಹೋಗುವುದು ಬೇಡ ಎಂದಲ್ಲ ಲಕ್ಷ್ಮ, ಹೋಗೋಣ ’

‘ ಹೂ, ಎಂದಾದರೂ ಇಲ್ಲಿಯ ಚಿಂತೆ ತೀರಿದಂದು ಹೋಗೋಣ. ಚಿಂತೆ ಹೊತ್ತು ಹೋಗಿ, ಅಲ್ಲಿ ಸುಖಪಡುವುದಾದರೂ ಏನು? ಕಾಲಿಗೆ ಮುಳ್ಳು ಚುಚ್ಚಿಕೊಂಡು ನಡೆದಹಾಗಿರುತ್ತದೆ.’

‘ ಇಲ್ಲಿಯ ಚಿಂತೆಯೊಂದೇ ಅಲ್ಲ ಲಕ್ಷ್ಮ, ನಾವು ಬನವಾಸಿಗೆ ಹೋಗುವುದೆಂದರೆ, ಅಲ್ಲಿಯ ಜನಕ್ಕೆ ಎಷ್ಟು ತೊಂದರೆ, ನೋಡು. ಚಕ್ರವರ್ತಿಗಳು ಬರುತ್ತಾರೆಂದರೆ, ಇರಲಿ ಬಿಡಲಿ, ಉತ್ಸವಮಾಡಬೇಕು; ಸಮಾರಂಭ ನಡೆಯಬೇಕು; ಚಕ್ರವರ್ತಿಗಳ ನಡಿಗೆಯ ಹಾದಿಯಲ್ಲಿ ತಾವು ಕೌದಿ ಹೊದ್ದೂ ರೇಶಿಮೆ ಹಾಸಬೇಕು; ಮನೆಯಲ್ಲಿ ಕರೆಯುವ ಹಸುವಿಲ್ಲದಿದ್ದರೂ ಹಾಲು ತುಪ್ಪದ ಕಾಲುವೆ ಹರಿಸಬೇಕು; ಇದ್ದ ಕೆಲಸ ಬಿಟ್ಟು, ನಮ್ಮ ಸೇವೆಗೆ ನಿಲ್ಲಬೇಕು. ನಮ್ಮ ಸಂತೋಷಕ್ಕಾಗಿ, ಅಷ್ಟು ಜನ, ಅಷ್ಟು ಕಷ್ಟಪಡುವುದು ನ್ಯಾಯವೇ?’

‘ ಹಾಗೆಂದರೆ ದೊರೆಗಳಾದವರು ಅರಮನೆ ಬಿಟ್ಟು ಕದಲಲೇ ಬಾರದೆಂದಾಯಿತು. ಈ ಚಕ್ರವರ್ತಿ ಪದವಿ ಬೇಕೆಂದು ಏಕೆ ಬಯಸುತ್ತಾರೋ ಜನ?’

‘ ಇದರ ಕಷ್ಟ ತಿಳಿಯದೆ. ಅವರು ನೋಡುವುದು ಹೊರಗಿನ ಆಡಂಬರವನ್ನು. ಆದ್ದರಿಂದ ಈ ಚಕ್ರವರ್ತಿ ಪದವಿ ಎಂದರೆ ಇಂದ್ರಪಟ್ಟ ಎಂದುಕೊಳ್ಳುತ್ತಾರೆ. ಇದು ರೇಶಿಮೆಯ ಹಾಸು ಹೊದೆಸಿದ, ಬಂಗಾರದ ಮುಳ್ಳಿನ ಹಾಸಿಗೆ ಎಂದು ಕಾಣರು. ಅದಕ್ಕೇ ಚಪಲಪಡುತ್ತಾರೆ....ನಮ್ಮ ಪಾಲಿಗಂತೂ ಈ ಚಕ್ರವರ್ತಿ ಪದವಿ ತಪ್ಪಿದ ದಿನ, ಸುದಿನ....’

‘ ನಾವು ದೊರೆ—ಮಹಾರಾಣಿಯಾಗಿ ಹೋಗುವುದರಿಂದ ಜನಕ್ಕೆ ತೊಂದರೆಯಾಗುವುದಾದರೆ, ಯಾರಿಗೂ ಹೇಳದೆ ದೇಸಿಗರಂತೆ ಹೋಗಿ ನಾಲ್ಕುದಿನ ಸುತ್ತಾಡಿ ಬರೋಣ ಪ್ರಭು.’

‘ ಯಾರಿಗೂ ಹೇಳದೆ ಹೋದರೆ, ಇಲ್ಲಿ ಕ್ರಾಂತಿಯೇ ಆಗುತ್ತದೆ. ಅದೂ ಸಾಧ್ಯವಿಲ್ಲ.’

‘ ಒಟ್ಟಿನಮೇಲೆ—ಹೋಗುವುದು ಸಾಧ್ಯವಿಲ್ಲ. ಹೋಗಲಿ ಬಿಡಿ.’—

ಎಂದರು ಮಹಾರಾಣಿ ಮನದ ನಿರಾಶೆಯನ್ನು ಮೊಗದ ನಗೆಯಲ್ಲಿ ಮರೆಸಲೆತ್ನಿಸುತ್ತಾ.

'ಊಹೂ, ಅದೂ ಸರಿಯಾಗದು.'

'ಹಾಗಾದರೇನುಮಾಡಬೇಕು? ಬನವಾಸಿಗೇ ಇಲ್ಲಿಗೆ ಬಾ ಎಂದು ಹೇಳಿ ಕಳಿಸೋಣ!'

'ಅದೊಂದು ನೋಡು ಚಕ್ರವರ್ತಿಯಿಂದಲೂ ಆಗದ ಕೆಲಸ. ಅದಕ್ಕೇ ಹೀಗೆ ಮಾಡೋಣ ಲಕ್ಷ್ಮೀ–ಮಿತಪರಿವಾರದೊಂದಿಗೆ ನೀನೊಬ್ಬಳು ಹೋಗಿ ಬಾ.'

'ಅದೊಂದು ಮಹಾರಾಣಿಯವರಿಂದಲೂ ಆಗದ ಕೆಲಸ!' ಮಹಾರಾಣಿ ನಗುತ್ತಾ ಹೇಳಿದರು.

'ಏಕೆ?'

'ಬನವಾಸಿಯ ಬೆಳದಿಂಗಳನ್ನು ಬಿಸಿಲಾಗಿ ಮಾಡಿಕೊಂಡು ಸುಖಿಸುವಾಸೆ ನನಗಿಲ್ಲ. ನೀವಿಲ್ಲದ ಬನವಾಸಿಯ ಬನಗಳಿಗಿಂತ, ನೀವು ಬಳಿಯಲ್ಲಿದ್ದರೆ ರಾಜೋದ್ಯಾನವೇ ಸಾಕು—ನಂದನಕ್ಕಿಂತಲೂ ಮಿಗಿಲು.'

—ಮೃದುವಾಗಿ ಮಮತೆತುಂಬಿದ ಧ್ವನಿಯಲ್ಲಿ ಹೇಳಿದರೂ ಮಹಾರಾಣಿಯವರ ಮಾತಿನಲ್ಲಿ ಖಚಿತ ನಿರ್ಧಾರದ ಬಿಗಿಯಿತ್ತು. ಹಾಗಾದರೇನು ಮಾಡುವುದು ಎಂದು ಅಳೆದು, ಸುರಿದು ಕಡೆಗೆ ಚಕ್ರವರ್ತಿಗಳು ಹೇಳಿದರು—

'ಇಲ್ಲಿ ಇಷ್ಟು ಯೋಚನೆ ಮಾಡುವುದಕ್ಕಿಂತ ಬನವಾಸಿಗೆ ಹೋಗಿ ಬರುವುದೇ ಮೇಲು. ಮಹಾರಾಣಿಯವರು ಸಿದ್ಧತೆ ಮಾಡಿಕೊಳ್ಳಿ.'

ಮಿಂಚಿನ ವೇಗದಿಂದ ಸಿದ್ಧತೆಗಳು ನಡೆದವು. ಬನವಾಸಿಯ ಮಹಾಮಂಡಲೇಶ್ವರ ಬಂಕರಸರಿಗೆ, ಬನವಾಸಿಯ ಮಂಡಲಾಧಿಕಾರಿ ಇಂದ್ರರಾಜರಿಗೆ, ಮಾನ್ಯಖೇಟದಿಂದ ಬನವಾಸಿಯವರೆಗಿನ ಮಾರ್ಗ ಮಧ್ಯದ ಮನ್ನೆಯರಿಗೆ, ಯೋಗ್ಯ ಸಿದ್ಧತೆಗಳನ್ನುಮಾಡಲು ರಾಯಸಗಳು ಹಾರಿದವು, ಕುದುರೆಗಳ ಬೆನ್ನಮೇಲೆ.

ಪ್ರಯಾಣಕ್ಕೆ ಪ್ರಶಸ್ತವಾದ ಶುಭದಿನದಂದು ಚಕ್ರವರ್ತಿಗಳು, ಮಹಾರಾಣಿಯವರು, ಮಿತಪರಿವಾರದೊಂದಿಗೆ ರಾಜಧಾನಿಯನ್ನು ಬಿಟ್ಟು

ಬನವಾಸಿಯತ್ತ ಪಯಣ ಬೆಳಸಿದರು. ಹಾದಿಯುದ್ದಕ್ಕೂ ಬೇಡಬೇಡ ವೆಂದರೂ, ನಾಡೊಡೆಯರು, ನಾಡಗಾವುಂಡಗಳು, ಮನ್ನೆಯರು ರಾಜೋಚಿತವಾದ ಏರ್ಪಾಡುಗಳನ್ನು ಮಾಡಿದ್ದರು. ಮಾರ್ಗಮಧ್ಯದಲ್ಲಿ ಆಯಾಸ ಪರಿಹಾರಕ್ಕಾಗಿ ಬೀಡು ಬಿಡುವ ಎಡೆ, ಊರಾಗಲಿ, ವನ-ಪ್ರಾಂತವಾಗಲಿ, ಚಿಕ್ಕದಾಗಿ ರಾಜಧಾನಿಯೇ ಅಲ್ಲಿಗೆ ವಲಸೆ ಬಂದಂತಾಗುವುದು.

ಪರಮಾರ ರಾಜಕನ್ಯೆಯಾದ ಮಹಾರಾಣಿ ಲಕ್ಷ್ಮೀದೇವಿ ಕನ್ನಡಿಗರ ಆತಿಥ್ಯದ ಔದಾರ್ಯವನ್ನು ಕಂಡು ಮೂಕರಾಗಿ ಹೋದರು. ಇಲ್ಲಿಯ ಪ್ರಕೃತಿ ಸುಂದರವೆಂದು ಕೇಳಿದ್ದರವರು. ಆದರೆ ಅಲ್ಲಿಯ ಜನರ ಹೃದಯ ಅದಕ್ಕಿಂತಲೂ ಸುಂದರ. ಅವರ ಮಾತು ಪುಷ್ಪ ಪರಿಮಳದಂತೆ ಹಿತ. ಉಪಚಾರ ಜೇನುತುಪ್ಪದಷ್ಟು ಮಧುರ; ನಿಸರ್ಗದಂತೆಯೇ ಸಹಜ ಸುಂದರ. ಇದೆಲ್ಲವನ್ನು ಕಂಡು ಮಹಾರಾಣಿಯವರ ಹೃದಯ ಮಾರು ಹೋಯಿತು.

ಕಡಲು-ಪರ್ವತಗಳ ತೋಳತೆಕ್ಕೆಯಲ್ಲಿ ಭೂದೇವಿ ಸಮುದ್ರರಾಜನಿಗೆ ಅರ್ಪಿಸಲು ಹಿಡಿದ ಭವ್ಯ ಮನೋಹರ ಪುಷ್ಪಮಾಲೆಯಂತಿದ್ದ ಬನವಾಸೀ ಪ್ರಾಂತ, ವಿಕಸಿತ ಕಮಲ ಪುಷ್ಪಗಳ ಮೃದುಗಂಧಭಾರವಾದ, ಕಮ್ಮನೆ ಗಾಳಿ ಬೀಸಿ, ಎತ್ತರವಾಗಿ ಬೆಳೆದ ತೆಂಗಿನ ಮರದ ಗರಿಗಳ ಚಮರಿಯಾಡಿಸಿ, ಮಾರ್ಗಾಯಾಸವನ್ನು ಪರಿಹರಿಸಿ, ಗಿಳಿ, ಕೋಗಿಲೆ, ಗೊರವಂಕೆ, ಕಾಜಾಣಗಳ ಕಂಠದಲ್ಲಿ ಸ್ವಾಗತಗೀತೆಯನ್ನು ಹಾಡಿ, ಅಪರೂಪವಾಗಿ ಬಂದ ಚಕ್ರವರ್ತಿ-ಚಕ್ರವರ್ತಿನಿಯರಿಗೆ ಸ್ವಾಗತ ಬಯಸಿತು.

ವಿಶ್ರಾಂತಿಗೆಂದು ಬಂದ ಚಕ್ರವರ್ತಿಗಳ ಮನೋರಂಜನೆಗೆಂದು ಇಂದ್ರರಾಜ ಯಾವ ಶ್ರಮವನ್ನೂ ಲೆಕ್ಕಿಸದೆ ಬನವಾಸಿಯನ್ನು ಅಣಿಗೊಳಿಸಿದ್ದ. ಇಂದು ಕೋಲಾಟ, ನಾಳೆ ಸೂತ್ರದ ಗೊಂಬೆಯಾಟ, ದೊಂಬರ ಗಣೆಯಾಟ, ಬಗೆಬಗೆಯ ಜಾನಪದ ನೃತ್ಯಗಳು ನೃಪತುಂಗ ಚಕ್ರವರ್ತಿ-ಲಕ್ಷ್ಮೀದೇವಿಯರಿಗೆ ಮನೋಲ್ಲಾಸದ ಔತಣವನ್ನಿತ್ತವು.

ಬಳ್ಳಿಗಾಂವೆ, ಬನವಾಸಿಗಳ ಬಸದಿ, ದೇವಾಲಯಗಳ ಶಿಲ್ಪ ಸೌಂದರ್ಯವನ್ನು ನೋಡಿ ಮುಗ್ಧವಾದ ಅವರ ಮನಸ್ಸು, ಶರಾವತಿಯ ಜಲ

ಪಾತವನ್ನು ಕಂಡು, ನಿಸರ್ಗದ ಮಹಾರುದ್ರ ಶಿಲ್ಪದಿದಿರು, ಮಾನವನ ಶಕ್ತಿ ಎಷ್ಟು ಕಿರಿದು ಎನಿಸಿತು.

ಎಲ್ಲಕ್ಕಿಂತಲೂ ಅವರ ಹೃದಯವನ್ನು ಸೂರೆಗೊಂಡದ್ದು ಅಲ್ಲಿಯ ನಿಸರ್ಗ ಸೌಂದರ್ಯ. ಎಷ್ಟು ನದಿ-ಓ-ಏನು ಕಾಡು! ಕಾಡಲ್ಲ ಅದು: ಭೂರಮಣಿ, ಕಡಲಕಾಂತನನ್ನು ಕಂಡು ಹರ್ಷಪುಲಕಿತಳಾದಾಗ, ಅವಳ ಹೃದಯದಲ್ಲಿ ಉಕ್ಕಿಬಂದ ಮಹದಾನಂದವೇ ವನವಾಗಿ ವಿಕಸಿಸಿ ದಂತಿತ್ತು. ನಿಜ, ನಿಜ, ವೇಗವಾಗಿ ಹರಿವ ಆ ನದಿಗಳ ಅಲೆಗಳ ಕಲ ಕಲರವ ಆ ಹರ್ಷಗೀತೆಯನ್ನೇ ಹಾಡುತ್ತಿರುವಂತಿದೆ. ಚಿತ್ತೋನ್ಮಾದಕ ವಾದ ಆ ಗಾನಕ್ಕೆ ಮನಸೋತು ಕಾಡು ತಲೆಯಾಡಿಸುತ್ತಿದೆ.

ಭಂಗಾರದ ಬಣ್ಣದ ತೆನೆಹೊತ್ತ ದಟ್ಟ ಹಸಿರು ಬಣ್ಣದ ಭತ್ತದ ಗದ್ದೆಗಳು, ಅವುಗಳ ಮೇಲೆ ಮಾಲೆಮಾಲೆಯಾಗಿ ಹಾರುವ ಗಿಳಿವಿಂಡು ಗಳು; ಹಸುರಿನ ಹೃದಯದಿಂದ ತಟಕ್ಕನೆ ಚಿಮ್ಮಿದ ಬೆಳ್ಳಿಮಿಂಚಿನಂತೆ, ಅಗಲವಾದ ಶುಭ್ರ ಶ್ವೇತವರ್ಣದ ಗರಿ ಬೀಸಿ ಹಾರುವ ಕೊಕ್ಕರೆಗಳು; ಗದ್ದೆಯ ನಡುವಿನ ಅಟ್ಟಲಗೆಗಳಮೇಲೆ ನಿಂತು, 'ಸೋ' ಎಂದು ಕೂಗುತ್ತಾ ತೆನೆಮೇಯಲು ಬಂದ ಗಿಳಿವಿಂಡನ್ನು ಹಾರಿಸುವ ಪಾಮರಿ ಯರ ಸೊಹುಲಿ; ಆ ಉಲಿಯೊಂದಿಗೆ ಸ್ಪರ್ಧಿಸಿದಂತೆ ಎತ್ತಣಿಂದಲೋ ಗಾಳಿ ಯಲ್ಲಿ ತೇಲಿಬರುವ ದನಗಾಹಿಯ ವೇಣುಗಾನ; ಕೇಳಿದಾಗ, ಕಣ್ಣೆದುರು ಬಿಸಿಲಿನಲ್ಲಿ ಕನ್ನಡಿಗಳ ಸರವನ್ನು ಆಡಿಸಿದಂತಾಗುವ ಗ್ರಾಮ ಸ್ತ್ರೀಯರ ನಗುವಿನ ಧ್ವನಿ; ನೆಲದಿಂದ ಮುಗಿಲತ್ತ ಹಸಿರು ಗರಿಯ ತುರಾಯಿ ಹಿಡಿದು ಚಾಚಿದ ಭೂ ತಾಯಿಯ ತೋಳಂತಿರುವ ತೆಂಗು, ಅಡಕೆಯ ತೋಟಗಳು; ಆ ತೋಳಿಗೆ ಸುತ್ತಿದ ಹಸಿರು ಲತಾ ಕಂಕಣದಂತೆ ಶೋಭಿಸುವ ವೀಳೆಯ ದೆಲೆಯ, ಮೆಣಸಿನ ಬಳ್ಳಿಗಳು; ತೋಟಗಳಲ್ಲಿ ಅರಳಿದ ಮಲ್ಲಿಗೆ, ಚಂಪಕ, ಸುರಹೊನ್ನೆ, ನಾಗಕೇಸರಿ, ಪಾದರಿ, ಪಾರಿಜಾತ ಪುಷ್ಪಗಳ ಮಧುಗಂಧ ಲೇಪನ ಮಾಡಿಕೊಂಡು, ಮೇಘ ಕನ್ಯೆಯರೊಂದಿಗೆ ವಿಹರಿಸುತ್ತಾ ವಿಟ ನಂತೆ ಸುಳಿವ ಗಾಳಿ–ಓ! ಚೆಲುವು ಇಲ್ಲೇ ವೈದಾಳಿರಬೇಕು ಎನಿಸಿದರೆ-

ಊಹೂ, ಅಲ್ಲಲ್ಲ ಇಲ್ಲಿ ಎನ್ನುವುದು ವನರಾಜಿ, ಗ್ರಾಮ ಸೀಮೆ ಯೊಂದಿಗೆ ಸ್ಪರ್ಧಿಸಿ.

ಮುಗಿಲೆತ್ತರ ಬೆಳೆದು, ನೆಲದಮೇಲೆ ಕತ್ತಲಂಥ ನೆರಳು ಕವಿಸಿದ ಕಾಡು; ಕಾಡಿನಲ್ಲಿ ನಡೆದಾಡಿ ಬರುವಾಗ, ನಮ್ಮನ್ನು ನೋಡಿದೆಯಾ, ನಮ್ಮನ್ನು ನೋಡಿದೆಯಾ ಎಂದು, ಲಾವಣ್ಯ ಪ್ರದರ್ಶನದಲ್ಲಿ ಬರುವ ಸ್ಪರ್ಧಿಗಳಂತೆ, ಜಿಂಕೆ, ನವಿಲು, ಕಾಡಾನೆ, ವ್ಯಾಘ್ರಗಳ ಸಾಲು ಸಾಲು; ಚಂದನ ವೃಕ್ಷ, ಕಾಡು ಏಲಕ್ಕಿಯ ವಾಸನೆ ದಟ್ಟಯಿಸಿದ ವನಾಂತರಾಳ ದಲ್ಲಿ, ನಿಸರ್ಗದನಗು ನೀರಾದಂತೆ ಹರಡಿದ ಸರೋವರದ ಜಲವಕ್ಷದ ಮೇಲೆ ಅರಳಿದ ಕಮಲ, ನೈದಿಲೆಗಳ ಸೊಬಗು ಕಣ್ಣನ್ನು ಸೆಳೆದರೆ, ನಾವೇನು ಕಡಮೆ ಎಂಬಂತೆ ಎಲೆಯ ಮರೆಯಲ್ಲಿ ಕಣ್ಣುಹೊಡೆದು ಕೇಳು ವವು ನೂರಾರು ಬಗೆ, ಬಣ್ಣದ ಕುಸುಮಗಳು; ಹೂವಿಗೆ ಜೀವಬಂದಂತೆ ಹಾರುವ ಹಕ್ಕಿಗಳನ್ನು ನೋಡುತ್ತಾ, ಅವುಗಳ ಇಂಚರವನ್ನಾಲಿಸುತ್ತಾ ವೈಮರೆತ ಮಹಾರಾಣಿಯ ಇದಿರು, ಕೊಂಬೆಯಿಂದ ಕೊಂಬೆಗೆ ತೂಗಿ, ಹಾರಿ, ಲಾಗಹಾಕಿ, 'ಎಲ್ಲಿ ನೋಡೋಣ ನಗು, ನಕ್ಕಾಗ ಎಷ್ಟು ಸುಂದರಿ ಯಾಗಿ ಕಾಣುತ್ತೀಯೋ ನೋಡೋಣ' ಎನ್ನುವುದು ವನ ವಿದೂಷಕ— ವಾನರ!

ಪಕ್ಷಿ ಕೂಜನದಿಂದ ಕಾಡು ಪುಲಕಿತವಾದಾಗ, ವನಗತ್ತಲನ್ನೂ ಮತ್ತಷ್ಟು ಕತ್ತಲು ಮಾಡಿ ಕೇಳಿಬರುವುದು ವ್ಯಾಘ್ರಗಳ ಅಬ್ಬರ, ವನ ಗಜಗಳ ಘೀಂಕಾರ, ರಮಣೀಯತೆಯಲ್ಲಿ ರೌದ್ರತೆಯನ್ನು ಬೆರಯಿಸಿ.

ಕಾಡಿನಲ್ಲಿ ತಾನೇತಾನಾಗಿ ಬೆಳೆದ ತೆಂಗಿನಕಾಯಿಯ ನೀರನ್ನು ಕುಡಿವ ಕಪಿ, ಹಲಸಿನ ಹಣ್ಣು ತಿನ್ನುತ್ತಿರುವ ಕರಡಿ, ಕಾಡು ಮೆಣಸಿನ ರುಚಿ ನೋಡಿ ಖಾರಕ್ಕೆ ಕಣ್ಣು ಕೆಂಪಾಗಿ, ತಲೆಕೊಡಹುತ್ತಿರುವ ಮರಿ ಕಪಿಗಳನ್ನು ಕಂಡು ಚಕ್ರವರ್ತಿಗಳಿಗೆ, ಏನೋ ನೆನಪಾಗಿ ನಗು ಬಂತು. ಏನನ್ನೋ ನೆನಸಿಕೊಂಡು ನಕ್ಕ ಪತಿಯನ್ನು ಕೇಳಿದರು, ಕಾಡಲೆತದಿಂದ ಕೆಂಪಾದ ಮೊಗದ ಮಹಾರಾಣಿ—

'ಪ್ರಭುಗಳಿಗೇನೋ ನೆನಪಾದಂತಿದೆ.' ಎಂದರು.

'ಹೂ ಹಲಸಿನ ಹಣ್ಣುತಿನ್ನುವ ಕರಡಿಯನ್ನು ಕಂಡು ಜಿನಸೇನಾ ಚಾರ್ಯರು ಹೇಳಿದ ಮಾತು ನೇಪಾಯಿತು.'

'ಏನು ಹೇಳಿದ್ದರು?'

'' ಪೂರ್ವಪುರಾಣ 'ದಲ್ಲಿ ಆಚಾರ್ಯರು ವೈಜಯಂತಿ ದ್ವಾರವನ್ನು ವರ್ಣಿಸುತ್ತಾ—

' ನಾರಿಕೇಲ ರಸಃಪಾನಂ ಪನಸಾನ್ಯಶನಾಂ ಪರಂ
ಮರೀಚಾನ್ಯುಪದಂಶಶ್ಚ ವನ್ಯಾವೃತ್ತಿರಹೋ ಸುಖಂ '

—ಎಂದು ಹೇಳಿದ್ದಾರೆ. ಎಷ್ಟು ನಿಜ ಆ ಮಾತು. ರಾಜಧಾನಿಯ ಅರಮನೆಗಿಂತಲೂ ಈ ಕಾಡೇ ಮೇಲು ಎನಿಸುತ್ತದೆ.'

' ನಿಜ. ಅರಸೊತ್ತಿಗೆಯ ಸೆರೆಮನೆಗಿಂತ, ಇಂಥ ಕಾಡಿನಲ್ಲಿ ಹಕ್ಕಿಯಾಗಿಯೋ, ಹೂವಾಗಿಯೋ ಹುಟ್ಟುವುದು ಮೇಲು. ಕಾಡನ್ನು ನೋಡುತ್ತಿದ್ದರೆ ಹಸಿವು ನೀರಡಿಕೆಗಳು ಮರೆತುಹೋಗುತ್ತದೆ. ನಿಜವಾಗಿಯೂ ಇಂಥಕಡೆ ವಾಸಮಾಡುವ ಜನ ಎಷ್ಟು ಪುಣ್ಯವಂತರು!'

' ಆ ಪುಣ್ಯ ಈ ಜನ್ಮದಲ್ಲಿ ನಮ್ಮದಾಗಲಿಲ್ಲ. ಮುಂದಿನ ಜನ್ಮಕ್ಕಾದರೂ ಇಲ್ಲಿ ಹುಟ್ಟುವ ಭಾಗ್ಯ ದೊರೆತರೆ, ಹುಟ್ಟು ಸಾರ್ಥಕವಾಗುತ್ತದೆ.'—ಎಂದರು ಚಕ್ರವರ್ತಿಗಳು, ಮಹಾಕಾವ್ಯದಂತೆ ಮನೋಹರವಾದ ವನರಾಜಿಯ ರುದ್ರ–ರಮಣೀಯತೆಗೆ ಮಾರುಹೋಗಿ.

## ೧೧

ಗರ್ಭಿಣಿಯಾದ ಮಹಾರಾಣಿಯವರು ಈ ಉತ್ಸಾಹದ ಅಲೆತದಿಂದ ಬಳಲಬಹುದೆಂಬ ಚಿಂತೆ, ರಾಜಧಾನಿಯಲ್ಲಿ ಒಂಟಿಯಾಗಿ ಬಿಟ್ಟುಬಂದ ರಾಜಕುಮಾರನ ಚಿಂತೆ ಇಲ್ಲದಿದ್ದರೆ, ಹಾಗೇ ಹಾಯಾಗಿ ಕಾಡಿನಲ್ಲಿ ಅಲೆಯುತ್ತಿದ್ದರೋ ಏನೋ. ಆದರೆ ಆ ಚಿಂತೆಗಳಲ್ಲಿ, ಬನವಾಸಿಯಲ್ಲಿ ಹೆಚ್ಚುದಿನ ನಿಲ್ಲಲಾರದೆ, ತಮ್ಮ ಪ್ರವಾಸವನ್ನು ಸುಖಮಯವಾಗಿ ಮಾಡಿದವರಿಗೆಲ್ಲಾ ರಾಜೋಚಿತವಾದ ಉಡುಗೊರೆಯಿತ್ತು, ಅವರು ನೀಡಿದ ಉಡುಗೊರೆಗಳನ್ನು ಸ್ವೀಕರಿಸಿ, ಆಪ್ತರಾದವರನ್ನು ಅಗಲುವಾಗಿನ ದುಃಖವನ್ನು ಎದೆಯಲ್ಲಿ ಹೊತ್ತು ಚಕ್ರವರ್ತಿಗಳು ರಾಜಧಾನಿಗೆ ಹಿಂದಿರುಗಿದರು.

ಬನವಾಸಿಯ ಮರೆಯಲಾಗದ ಮಧುನೆನಪಾದ ಪ್ರವಾಸವನ್ನು ಮುಗಿಸಿಕೊಂಡು ಹಿಂದಿರುಗಿದ ಬಳಿಕ, ಐದುಮಾಸಗಳನಂತರ ಶುಭದಿನದಂದು ಮಹಾರಾಣಿಯವರು ಹೆಣ್ಣುಮಗುವಿನ ತಾಯಾದರು. ಆ ಹೆಣ್ಣು ಮಗು ಮಹಾರಾಣಿಯವರು ಬನವಾಸಿಯಲ್ಲಿ ಅನುಭವಿಸಿದ ಆನಂದವೇ

ಶಿಶುರೂಪು ತಾಳಿ ಜನಿಸಿದಷ್ಟು ಸುಂದರವಾಗಿತ್ತು. ಈ ಸಂತೋಷದಲ್ಲಿ ಅರಮನೆ ಹಾಡು ಹಸೆಗಳ, ಹರ್ಷೋತ್ಸವದ ತೂಗುತೊಟ್ಟಿಲಾಗಿರುವಾಗಲೇ, ಕಂಚಿಯಿಂದ ಶಂಖಾದೇವಿಯೂ ಗರ್ಭಿಣಿಯೆಂಬ ವಾರ್ತೆ ಬಂದು, ಚಕ್ರವರ್ತಿ-ಮಹಾರಾಣಿಯರ ಹರ್ಷಕ್ಕೆ ರೆಕ್ಕೆ ಮೂಡಿತು. ಕಂಚಿಯಿಂದ ಈ ವಾರ್ತೆಯನ್ನು ತಂದ ಆಳಿಗೆ, ಅವನ ಕೈ ಹೊರುವಷ್ಟು ಹೊನ್ನನ್ನು ಮೆಚ್ಚುಗೊಟ್ಟು ಕಳಿಸಿದ ಮಹಾರಾಣಿಯವರನ್ನು ಕಂಡು, ಚಕ್ರವರ್ತಿಗಳು ನಗುತ್ತಾ ಕೇಳಿದರು—

'ಅಂಥ ವಾರ್ತೆ ತಂದ ಅವನನ್ನು ಶಿಕ್ಷಿಸದೆ, ಉಡುಗೊರೆಕೊಡುವುದು ಉಚಿತವೇ ಲಕ್ಷ್ಮಾ?'

'ಶಿಕ್ಷೆ! ಏಕೆ?'

—ಚಕ್ರವರ್ತಿಗಳ ಮಾತನ್ನು ಕೇಳಿ ಮಹಾರಾಣಿಯವರು ಚಕಿತರಾಗಿ ಹೇಳಿದರು.

'ಅಲ್ಲವೇ, ಚಳಿಗಾಳಿ ಬೀಸಿದಾಗ ಕಂಬಳಿ ಹೊದೆಯದೆ, ಇದ್ದ ಬಟ್ಟೆಯನ್ನು ತೆಗೆಯಬಹುದೇ?'

'ಕಲಿತ ಕಾವ್ಯಾಲಂಕಾರವನ್ನೆಲ್ಲಾ ಚಕ್ರವರ್ತಿಗಳು ಅರಿಯದ ಅಜ್ಞೆಯಮೇಲೇ ಪ್ರಯೋಗಿಸಿದರೆ ಹೇಗೆ ಪ್ರಭು? ನೇರವಾಗಿ ಹೇಳಿದರೆ ಉತ್ತರ ಕೊಡಬಹುದು.

'ಕಾವ್ಯವೂ ಇಲ್ಲ, ಅಲಂಕಾರವೂ ಇಲ್ಲ. ಈ ಸುದ್ದಿ ಚಳಿಗಾಳಿಯಲ್ಲವೇ?'

'ಹೇಗೆ? ಮಗಳು ಗರ್ಭಿಣಿಯೆಂಬ ಸುದ್ದಿ ಚಳಿಗಾಳಿ ಹೇಗಾಗುತ್ತದೆ ಪ್ರಭು?'

'ಮಗಳು ಮಗುವಿನ ತಾಯಾಗುವಳೆಂಬುದೇನೋ ಸಂತೋಷವೇ. ಆದರೆ [illegible] ಇದು ಮಹಾರಾಣಿಯವರು ಮೊಮ್ಮಗುವಿನ ಅಜ್ಜಿಯಾಗುವಳೆಂಬುದು....ಲಕ್ಷ್ಮಾ? ನಿಜವಾಗಿಯೂ ಶಂಖಾನ ಮಗು ನಿನ್ನನ್ನು ಅಜ್ಜಿ ಎಂದು ಕರೆದಾಗ ನಿನ್ನ ಮುಖ ಹೇಗಾಗುವುದು ನೋಡಬೇಕು. ಹಾಯ್.... ಹಾಯ್.... ಅಂತೂ ಮಹಾರಾಣಿಯವರಿಗೆ ವೃದ್ಧಾಪ್ಯ ಸನ್ನಿಹಿತವಾಯಿತು!'

—ಎಂದು ನಕ್ಕರು ಚಕ್ರವರ್ತಿಗಳು. ಆ ಮಾತು ಕೇಳಿ ಮಹಾರಾಣಿಯವರು ಚಕ್ರವರ್ತಿಗಳತ್ತ ಸಿಟ್ಟಾದಂತೆ ನೋಡಿದರೂ, ಚುರುಕಾದ ಆ ನೋಟದ ಕುಡಿಯಲ್ಲಿ ಮಂದಹಾಸದ ಮುಗುಳು ಗಮಗಮಿಸಿತ್ತು, ಅರಳಿದ ಹೂದಳದ ಮೇಲೆ ಬಣ್ಣದ ಚಿಟ್ಟೆ ಕುಳಿತು ರೆಕ್ಕೆಯಾಡಿಸಿದಂತೆ.

'ವಯಸ್ಸಾಗುತ್ತಾ ಆಗುತ್ತಾ ಚಕ್ರವರ್ತಿಗಳ ನಾಲಗೆಗೆ ನಂಜೇರುತ್ತಿರುವಂತಿದೆ' ಎಂದು ಚಕ್ರವರ್ತಿಗಳಮೇಲೆ ಮಹಾರಾಣಿ ಸೇಡು ತೀರಿಸಿಕೊಂಡು 'ಅದು ಹೋಗಲಿ. ರಾಜಪುತ್ರಿಯ ನಾಮಕರಣದ ದಿನ ಹತ್ತಿರವಾಯಿತು. ಆ ದಿನಕ್ಕಾದರೂ ಕೃಷ್ಣನನ್ನು ಗುರುಕುಲದಿಂದ ಕರೆಯಿಸುವುದಿಲ್ಲವೇ ?' ಎಂದರು.

'ಹೂ. ಕರೆಸುತ್ತೇನೆ. ನನಗೂ ಅವನನ್ನು ನೋಡಬೇಕೆಂಬ ಆಸೆಯಿದೆ.'

'ಅದೆಲ್ಲಾ ನಟನೆಯ ಮಾತು.'

'ಯಾವುದು?'

'ರಾಜಕುಮಾರನನ್ನು ನೋಡಬೇಕೆಂಬ ಆಸೆಯಿರುವುದು.'

'ಏಕೆ?'

'ನಿಜವಾಗಿಯೂ ಆ ಆಸೆ ಇದ್ದಿದ್ದರೆ, ಹನ್ನೆರಡು ವರ್ಷದ ಹುಡುಗನನ್ನು ಹೀಗೆ ಅರಮನೆ ತಪ್ಪಿಸಿ, ಆಶ್ರಮದಲ್ಲಿಡುತ್ತಿದ್ದಿರಾ?'

'ಅದು ಅವನ ಹಿತದೃಷ್ಟಿಯಿಂದ. ನಮ್ಮ ಚಪಲಕ್ಕಾಗಿ, ಅವನ ಭವಿಷ್ಯವನ್ನು ಬಲಿಗೊಡಬಾರದೆಂದು....'

'ಅರಮನೆಯಲ್ಲಿದ್ದರೆ ಅವನ ಭವಿಷ್ಯ ಒಳಿತಾಗದೇ?'

'ಇಲ್ಲಿ ಬೆಳೆಯುವ ಬುದ್ಧಿ ದಾರಿತಪ್ಪಲು ಅವಕಾಶ ಹೆಚ್ಚು.'

'ಅಂದರೆ....ನಾವು ಅವನ ಬುದ್ಧಿಯನ್ನು ಕೆಡಿಸುತ್ತೇವೆಯೇ?'

'ಹಾಗಲ್ಲ ಲಕ್ಷ್ಮೀ, ನೀವು ಕೆಡಿಸುವುದಿಲ್ಲ, ಅರಮನೆಯ ವಾತಾವರಣ ಅಂತಹದು. ಸುಖದ ಚಪಲವನ್ನು ಬೆಳಸುತ್ತದೆ. ಕೃಷ್ಣನಂಥ ಎಳೆಯ ಬುದ್ಧಿಗಿರಲಿ, ನಮ್ಮನ್ನೇ ಬಿಡುವುದಿಲ್ಲ ಈ ಅರಮನೆಯ ಅಂತಃಪುರ.'

'ನಿಮಗೇನು ಮಾಡಿತು ಈ ಅಂತಃಪುರ?'

'ಓಲಗವನ್ನು ಮರೆತು, ಇಲ್ಲೇ ಸುಳಿಯುತ್ತಿರಬೇಕೆನಿಸುವ ಹಾಗೆ ಮಾಡುತ್ತದೆ, ಈ ಅಂತಃಪುರದಲ್ಲಿರುವ ಕೆಟ್ಟ ಹೆಂಗಸೊಬ್ಬಳ ಸೌಂದರ್ಯ!'

'ಯಾರು ಅವಳು?'

'ನಿನಗೆ ಗೊತ್ತಿಲ್ಲ.'

'ಹೇಳಿದರೆ ತಿಳಿಯುತ್ತದೆ. ಮಹಾರಾಜರ ಮನವನ್ನು ಕದ್ದವಳ ಹೆಸರು ಹೇಳಿ....'

'ಹೇಳಿದರೆ ಏನು ಮಾಡುತ್ತೀಯಾ?'–ನಗುತ್ತಾ ಕೇಳಿದರು ಚಕ್ರವರ್ತಿಗಳು.

'ದಾಸಿಯನ್ನು ಕರೆದು, ಅಂತಃಪುರವನ್ನು ಆಕ್ರಮಿಸಿದ ಆ ಸೌಂದರ್ಯ ಭೂತಕ್ಕೆ ಉಚ್ಚಾಟನೆ ಮಾಡಿಸುತ್ತೇನೆ.'

'ನಿಜವಾಗಿಯೂ?'

'ಖಂಡಿತ–ಅವಳ ಹೆಸರು ಹೇಳಿ.'

'ಪರಮಾರ ರಾಜಕನ್ಯೆ ಲಕ್ಷ್ಮಿ!'

–ಎಂದವರೇ ಚಕ್ರವರ್ತಿಗಳು, ಲಜ್ಜೆಯಿಂದ ಕೆಂಪಾದ ಮಹಾರಾಣಿಯವರ ಮೊಗ ಮತ್ತಷ್ಟು ಕೆಂಪಾಗುವಂತೆ ನೋಡುತ್ತಾ, ಅಂತಃಪುರದಿಂದ ತೆರಳಿದರು.

ಚಕ್ರವರ್ತಿಗಳ ಚಿತ್ತ ಹೀಗೆ ಪ್ರಸನ್ನವಾಗಿರುವಾಗಲೇ, ಆ ಹೊತ್ತನ್ನೇ ಕಾದಂತೆ, ಕನ್ಯಾಕುಬ್ಜದಿಂದ ಬೇಹುಗಾರರೊಂದಿಗೆ ಸುಲೇಮಾನ್ ಕಳಿಸಿದ ವಾರ್ತೆಯೂ ಬಂದಿತು–'ಸದ್ಯಕ್ಕೆ ಮಿಹಿರಭೋಜನ ದಾಳಿಯ ಭೀತಿಯಿಲ್ಲ' ಎಂದು.

ಬೇಸಿಗೆಯ ಬಿಸಿಲಿನಲ್ಲಿ ಬತ್ತಿ ಬಾಯಾರಿದ ಹೊಳೆಗೆ, ಮಳೆಗಾಲದಲ್ಲಿ ಬರುವ ಒಂದೊಂದು ಮೋಡವೂ ಜಲಾಮೃತಪಾನಮಾಡಿಸಲೇ ಬರುವಂತೆ, ಹೂದೋಟದಮೇಲೆ ಬೀಸಿ ಬರುವ ಗಾಳಿ, ಬಾರಿಬಾರಿಯೂ ಸುಮವಿಕಾಸದ ಪರಿಮಳವಾರ್ತೆಯನ್ನು ಹೊತ್ತು ಗಂಧವಹನಾಗಿಯೇ ಬರುವಂತೆ, ಮೇಲಿಂದಮೇಲೆ ಬರುವ ಸಮಾಧಾನ ಸಂತೋಷದ ವಾರ್ತೆ ಚಕ್ರವರ್ತಿಗಳ ಹೃದಯವನ್ನು ಅರಳಿಸಿತು. 'ಮಗಳು ಹುಟ್ಟಿದ ಹೊತ್ತು

ಒಳ್ಳೆಯದು' ಎಂದುಕೊಂಡರು, ಜೋಯಿಸರು ಜಾತಕ ಬರಿಯುವ ಮೊದಲೇ. ಅದೇ ಮಾತನ್ನೇ, ರಾಜಕುಮಾರಿಯ ನಾಮಕರಣದ ದಿನ, ರಾಜಕುಮಾರನನ್ನು ಅರಮನೆಗೆ ಕರೆತಂದ ಗುಣಭದ್ರಾಚಾರ್ಯರ ಮುಂದೆಯೂ ಆಡಿದರು, ರಾಜಕುಮಾರನ ವಿದ್ಯಾಪ್ರಗತಿಯನ್ನು ಆಚಾರ್ಯರಿಂದರಿತು, ಪ್ರಫುಲ್ಲಚಿತ್ತರಾಗಿ—

'ಏಕೋ ಈಗ ಮನಸ್ಸು ಮಳೆತೊಳೆದ ಮುಗಿಲಿನ ಹಾಗೆ ಶುಭ್ರವಾಗಿದೆ. ಕತ್ತಲುಕಾಲ ಕಳೆದುಹೋಯಿತೇನೋ ಅನಿಸುತ್ತದೆ'— ಎಂದರು ಚಕ್ರವರ್ತಿಗಳು.

'ಜಗತ್ತಿನ ಸುಖದುಃಖಗಳ ರೀತಿಯೇ ಹಾಗೆ ಮಹಾರಾಜ. ಕುರಿಯ ಮಂದೆಯಹಾಗೆ ಅವು. ಯಾವುದು ಬಂದರೂ ಹಿಂಡು ಹಿಂಡಾಗಿ ಬರುತ್ತವೆ—ಒಂದು ಗ್ರಹ ಕೆಟ್ಟಾಗ ಎಲ್ಲವೂ ಕೆಟ್ಟು, ಒಂದು ಸುಮುಖವಾದಾಗ ಎಲ್ಲವೂ ಸುಮುಖವಾಗುವ ಹಾಗೆ. ಅಲ್ಲವೇ ಗೋಲಯಭಟ್ಟರೇ?'

ಎಂದರು ಗುಣಭದ್ರಾಚಾರ್ಯರು, ಅಂದಿನ ಜಾತಕರ್ಮ ನೆರವೇರಿಸಲೆಂದು, ಅರಮನೆಗೆ ಬಂದ ರಾಜಜ್ಯೋತಿಷಿ ಗೋಲಯಭಟ್ಟರನ್ನು ಕುರಿತು.

'ನಿಜ ಆಚಾರ್ಯರೇ, ಯಾವುದು ಬಂದರೂ ಹುಚ್ಚು ಹೊಳೆಯ ಹಾಗೆ, ಧೃತಿ ಕೆಡಿಸುವಂತೆ ಬರುತ್ತವೆ. ಆದುದರಿಂದಲೇ ನಾವು ಎಚ್ಚರವಾಗಿರಬೇಕು. ದುಃಖ ಬಂದಾಗ ಇರುವುದಕ್ಕಿಂತ, ಸುಖ ಬಂದಾಗ ಹೆಚ್ಚು ಎಚ್ಚರವಾಗಿರಬೇಕು ಪ್ರಭು.'

—ಎಂದರು ಏನೋ ಗ್ರಹಗಣಿತ ಮಾಡುತ್ತಿದ್ದ ಗೋಲಯಭಟ್ಟರು ತಲೆಯೆತ್ತಿ ಏಕೋ ಚಕ್ರವರ್ತಿಯ ಪ್ರಸನ್ನಮೊಗವನ್ನು ತೀಕ್ಷ್ಣವಾಗಿ ನೋಡಿ.

'ರಾಜ ಜ್ಯೋತಿಷಿಗಳ ಮಾತು ನಿಜ. ಕತ್ತಲಿಗಿಂತ ಹಗಲಿನಲ್ಲೇ ಎಡಹುವ ಭೀತಿ ಹೆಚ್ಚು ಕಾಲಿಗೆ'—ಎಂದು ಗುಣಭದ್ರಾಚಾರ್ಯರೂ ಗೋಲಯಭಟ್ಟರ ಮಾತಿಗೆ ಸಮ್ಮತಿ ಸೂಚಿಸಿದರು.

'ಕತ್ತಲಿನಲ್ಲಂತೂ ಎಡಹುವ ಭೀತಿ ಸಹಜ. ಬಿಸಿಲು ಹೊಳೆವ ಹಗಲಿನಲ್ಲೂ ಭೀತಿಯೇ ಆಚಾರ್ಯ?'

—ಚಕ್ರವರ್ತಿಗಳು ಕೇಳಿದರು.

'ಹೌದು ಪ್ರಭು. ಕತ್ತಲಿನಲ್ಲಿ ಎಡವಬಹುದು ಎಂಬ ಭೀತಿ ಇರುವುದರಿಂದ ಸ್ವಾಭಾವಿಕವಾಗಿಯೇ ಮನುಷ್ಯ ಎಚ್ಚರವಾಗಿರುತ್ತಾನೆ. ಆದರೆ ಹಗಲು, ಕಣ್ಣು ಚೆನ್ನಾಗಿ ಕಾಣುತ್ತದೆ ಎಂಬ ನಿರ್ಭೀತಿ ಕಣ್ಣು ಕವಿದಾಗಲೇ ಎಡಹುವ ಸಂಭವ ಹೆಚ್ಚು. ಆದ್ದರಿಂದ ಹಗಲು ಹೊತ್ತೇ ಹೆಚ್ಚು ಎಚ್ಚರವಾಗಿರಬೇಕು.'

—ಗೋಲಯಭಟ್ಟರು ಮಾತನ್ನು ಎಳೆದೆಳೆದು ಭಾರವಾಗಿ ಹೇಳಿದರು.

'ಅಂದರೆ-ಮನುಷ್ಯ ಯಾವ ಭೀತಿಯೂ ಇಲ್ಲದೆ ನಿಶ್ಚಿಂತನಾಗಿರುವ ಕಾಲವೇ ಇಲ್ಲವೇ? ನಿತ್ಯ ಭೀತಿಯ ಬಡ ಬೇಟೆಯಾಗಿ ಬದುಕಬೇಕೇ ಮನುಷ್ಯ?'

'ನಿಜ ಪ್ರಭು. ಸಂಸಾರಿಯ ಬಾಳು ಹಾವಿನ ಹೆಡೆಯ ನೆರಳಲ್ಲಿ ನಿದ್ರಿಸಿದ ಕಪ್ಪೆಯಂತೆ. ಯಾವ ಗಳಿಗೆಗೆ ಏನೋ ಎಂದು ಎಚ್ಚರವಾಗಿರಬೇಕು. ಕಷ್ಟಕ್ಕಿಂತ ಸುಖಕ್ಕೆ ಹೆದರಿ ನಡೆಯಬೇಕು.'

—ಚಕ್ರವರ್ತಿಗಳ ಪ್ರಶ್ನೆಗೆ ಗೋಲಯಭಟ್ಟರೇ ಉತ್ತರ ಹೇಳಿದರು.

'ಸುಖಕ್ಕೇಕೆ ಹೆದರಬೇಕು ಆರ್ಯ?'

'ದುಃಖಗಳು ಬರುವುದು ನಮ್ಮನ್ನು ಹೊಡೆದು, ಜಡಿದು, ಜಗ್ಗಿಸಿ ಬಗ್ಗಿಸಿ ಬಲಯುತರನ್ನಾಗಿ ಮಾಡುವುದಕ್ಕೆ. ಸುಖ ಬರುವುದು ಹರ್ಷದ ಹೂತೊಟ್ಟಿಲಿನಲ್ಲಿಟ್ಟು ತೂಗಿ, ಮನಸ್ಸನ್ನು ಸುಖಾಪೇಕ್ಷಿಯನ್ನಾಗಿ ಮಾಡಿ ದುರ್ಬಲಗೊಳಿಸುವುದಕ್ಕೆ. ಮದ್ಯದ ಹಿತವಾದ ಮಾದಕತೆ ಮೈಯನ್ನು ದುರ್ಬಲಗೊಳಿಸುವಂತೆ, ಸುಖದ ಸವಿ ಮನಸ್ಸನ್ನು ದುರ್ಬಲಗೊಳಿಸುತ್ತದೆ. ಆದ್ದರಿಂದ ಮನುಷ್ಯನು ಸುಖಕ್ಕೆ ಹೆದರಿ ನಡೆಯಬೇಕು, ಪ್ರಭು.'

'ಅಂದರೆ—ಈ ನಿತ್ಯ ಭೀತಿಯಿಂದ ಮುಕ್ತಿಯೇ ಇಲ್ಲವೇ?'

'ಇದೆ, ಮಹಾರಾಜ.'

—ಅದುವರೆಗೂ ಸುಮ್ಮನಿದ್ದ ಗುಣಭದ್ರಾಚಾರ್ಯರು ಹೇಳಿದರು

‘ ಎಂದು ಆದಿನ ಆಚಾರ್ಯ?’

‘ ಸುಖ ದುಃಖಗಳ ಹಾಸು-ಹೊಕ್ಕಿನಿಂದ ನಿರ್ಮಿತವಾದ ಸಂಸಾರ ಶೃಂಖಲೆಯಿಂದ ಮುಕ್ತನಾದಂದು ಮಹಾರಾಜ.’

‘ ಹಾಗಾದರೆ ಸಂಸಾರಕ್ಕಿಂತ ಸನ್ಯಾಸವೇ ಮೇಲು.’

—ಎಂದರು ಚಕ್ರವರ್ತಿಗಳು ಗುಣಭದ್ರಾಚಾರ್ಯರಾಡಿದ ಮಾತನ್ನು ಕೇಳಿ.

‘ ನಿಜ, ನೃಪತುಂಗ ದೇವ.’

‘ ಹಾಗಾದರೆ ನನಗೆಂದು ಆ ವಿಮೋಚನಾ ದಿನ ಆಚಾರ್ಯ?’

—ಕಾತರರಾಗಿ ಕೇಳಿದರು ಚಕ್ರವರ್ತಿಗಳು.

‘ ಬರುವಂದು ಆ ದಿನ ತಾನೇ ಬರುತ್ತದೆ ಮಹಾರಾಜ.’

—ಎಂದರು ಗುಣಭದ್ರಾಚಾರ್ಯರು.

‘ ಅಷ್ಟೇ ಅಲ್ಲ ಪ್ರಭು, ಸನ್ಯಾಸವೆಂದರೆ ಕೇಶ ಮುಂಡನ, ಕಷಾಯ ವಸ್ತ್ರಧಾರಣವೂ ಅಲ್ಲ. ಬರೀ ವನಾಂತರವಾಸದಿಂದಲೇ ದಕ್ಕುವ ಪದವಿಯೂ ಅಲ್ಲ ಸನ್ಯಾಸ.’

ಗುಣಭದ್ರಾಚಾರ್ಯರ ಮಾತಿನೊಂದಿಗೆ ಧ್ವನಿಕೂಡಿಸಿ ಹೇಳಿದರು ಗೋಲಯಭಟ್ಟರು.

‘ ಹಾಗಾದರೆ ಅದರ ಸಾಧನೆಗೇನು ಮಾರ್ಗ ಆರ್ಯ?’

‘ ಸುಖದುಃಖಗಳ ನಿತ್ಯ ಆಘಾತಕ್ಕೆ ಬೆದರಿ, ಬದುಕಿನಿಂದಾಚೆಗೆ ಓಡುವ ಹೇಡಿತನ ಸನ್ಯಾಸವಲ್ಲ ಪ್ರಭು, ಅವ್ಯಕ್ತವಾಗಿರುವ ಆತ್ಮವನ್ನು ಸಾಕ್ಷಾತ್ಕಾರಮಾಡಿಕೊಳ್ಳುವ ಸಾಹಸವೇ ಸನ್ಯಾಸ. ‘ನಾಯಮಾತ್ಮಾ ಬಲಹೀನೇನ ಲಭ್ಯತೇ’ ಎಂದು ಉಪನಿಷತ್ತು ಸಾರಿದೆ ಮಹಾರಾಜ.’

‘ ಆ ಸಾಹಸ, ಶಕ್ತಿಯನ್ನು ಪಡೆಯಲೇನುಮಾಡಬೇಕು ಆರ್ಯ?’

‘ ಅಣು ಮಹತ್ತಾಗಬೇಕು, ವ್ಯಕ್ತಿ ವಿಶ್ವವಾಗಬೇಕು. ಅದನ್ನೇ ವಿಶ್ವಜಿದ್ಯಾಗವೆನ್ನುವುದು.’

‘ ಅಂದರೆ....’

‘ ವಿಶ್ವಜಿದ್ಯಾಗವೆಂದರೆ, ಸೇನಾಬಲದೊಡನೆ ಜಗತ್ತನ್ನು ಗೆಲ್ಲುವುದಲ್ಲ ಮಹಾರಾಜ. ಆತ್ಮ ಬಲದಿಂದ, ‘ಅಹಂ’ ಎಂದು ಸೆಟೆದುನಿಂತ

ವ್ಯಕ್ತಿತ್ವದ ಸೊಕ್ಕುಮುರಿದು, ಅದನ್ನು ಸೋಲಿಸಿ, ಅದನ್ನು ವಿಶ್ವತ್ವದ ಅಡಿಯಾಳಾಗಿ ಮಾಡುವುದು. ಬ್ರಹ್ಮಚಿಂತನೆಯಿಂದ ಪ್ರಕಾಶವಾದ ಆತ್ಮಜ್ಞಾನದ ಅಗ್ನಿಕುಂಡದಲ್ಲಿ ಅಹಂಕಾರವನ್ನು ಹೋಮ ಮಾಡುವುದೇ ಯಜ್ಞ ಮಹಾರಾಜ. ಈ ಯಜ್ಞಮಾಡಿದಾಗ ಸನ್ಯಾಸ ಪ್ರಾಪ್ತವಾಗುವುವಷ್ಟೇ ಅಲ್ಲ, ಅಣು ತನ್ನಿಂದ ತಾನೇ ಮಹತ್ತಾಗುತ್ತದೆ.'

ಗೋಲಯಭಟ್ಟರಾಡಿದ ಮಾತು ಕೇಳಿ ಚಕ್ರವರ್ತಿಗಳ ಮನಸ್ಸು ಮತ್ತಷ್ಟು ಚಿಂತನೆಗೆ ಒಳಗಾಯಿತು.

'ಅಣು ಹೇಗೆ ಮಹತ್ತಾಗುತ್ತದೆ ಆರ್ಯ.'

'ಹನಿ ಕಡಲು ಆದ ಹಾಗೆ.'

'ಅಂದರೆ....?'

'ಹನಿನೀರು ಕೈಯಲ್ಲಿದ್ದಾಗ, ಹನಿನೀರು ಹನಿನೀರೇ, ಕಡಲು ಕಡಲೇ. ಆದರೆ ಹನಿನೀರು ಕಡಲನ್ನು ಸೇರಿದಾಗ ಅದು ಹನಿಯಾಗಿ ಉಳಿಯುವುದಿಲ್ಲ. ಕಡಲಿನಲ್ಲಿ ಬೆರೆತು ತಾನೇ ಕಡಲಾಗುತ್ತದೆ. ಹಾಗೇ ಚಕ್ರವರ್ತಿಗಳು ಹನಿಯಂತೆ ತನ್ನತನವನ್ನು ಮರೆತು ಲೋಕದ ಕಡಲಿಗೆ ಧುಮುಕಬೇಕು. ವ್ಯಕ್ತಿ ಹೋದರೂ ಲೋಕ ಉಳಿಯುತ್ತದೆ; ಹನಿಹೋದರೂ ಕಡಲು ಬೆಳೆಯುತ್ತದೆ. ಹಾಗಾದರೆ ಹನಿ ನಷ್ಟವಾಗುವುದಿಲ್ಲವೇ ಎನ್ನುವ ಸಂಶಯ ಬರಬಹುದು ಪ್ರಭುಗಳಿಗೆ. ಆದರೆ ಹನಿ ಎಲ್ಲಿಯೂ ಹೋಗುವುದಿಲ್ಲ; ಹನಿಗೂ ನಷ್ಟವಿಲ್ಲ. ಹೂವಿನೊಳಗೆ ಅಡಗಿದ ಪರಿಮಳ, ಗಾಳಿಯೊಂದಿಗೆ ಬೆರೆತಾಗ ಲೋಕವ್ಯಾಪಿಯಾಗುವಂತೆ, ವ್ಯಕ್ತಿ ವಿಶ್ವವ್ಯಾಪಿಯಾಗಿ ಉಳಿಯುತ್ತಾನೆ. ಗಾಳಿಯೊಂದಿಗೆ ಬೆರೆತ ಪರಿಮಳ ಕಣ್ಣಿಗೆ ಕಾಣದೆ ಹೋದರೂ, ಅವ್ಯಕ್ತವಾದರೂ ಸುವ್ಯಕ್ತವಾಗಿರುವಂತೆ, ವಿಶ್ವಜೀವಿಯಾದ ವ್ಯಕ್ತಿ, ಸಂಸಾರದೂರನಾದರೂ ವಿಶ್ವಸಂಸಾರಿಯಾಗುತ್ತಾನೆ. ಹಾಗಾಗುವುದೇ ಸನ್ಯಾಸ. ಒಂದು ಮಾತಿನಲ್ಲಿ ಹೇಳಬೇಕೆಂದರೆ, ತಾನು ಉರಿದರೂ ಲೋಕಕ್ಕೆ ಬೆಳಕು ನೀಡುವ ಬತ್ತಿ ನಿಜವಾದ ಸನ್ಯಾಸಿ. ತಾನು ಬೆಳಕು ಬೀರುತ್ತಿರುವುದನ್ನು ಮರೆತು 'ಅಯ್ಯೋ ಉರಿಯಬೇಕೇ' ಎಂದಾಗ ಆ ಕರ್ಮ ಕೊರಗಾಗಿ, ಭೀತಿಯಾಗುತ್ತದೆ. ತಾನು ಉರಿಯುತ್ತಿರುವುದನ್ನು ಮರೆತು, ಲೋಕ ಬೆಳಕಿ

ನಲ್ಲಿ ಮಿಂದು ಹೊಳೆಯುತ್ತಿರುವುದನ್ನು ಕಂಡು ಹರ್ಷಿಸಿದಾಗ, ಉರಿವ ಕೊರಗೂ ಹರ್ಷವಾಗಿ, ಭೀತಿ ಮುಕ್ತಿ ದೊರೆಯುತ್ತದೆ. ಹಾಗೇ ಸಂಸಾರಿ ಸಂಸಾರದಲ್ಲಿದ್ದರೂ ಬೆಳಕಾಗುವುದು ತನ್ನ ಕರ್ಮ ಎಂದು ಕೊಂಡಾಗ, ಇಲ್ಲಿನ ಕಾಮ ಕ್ರೋಧ ಲೋಭ ಮೋಹಜನ್ಯವಾದ ಸುಖ-ದುಃಖಗಳ ಕೊರಗಿನಲ್ಲಿ ಉರಿಯುವುದು ತಪಸ್ಸಾಗುತ್ತದೆ; ಬತ್ತಿ ಉರಿದು ಹೋಗು ವುದೇ ಯಜ್ಞವಾಗಿ, ಹತ್ತಿಯಬತ್ತಿ ಉರಿದು ಹೋಗಿ ಜಗತ್ತನ್ನುವ್ಯಾಪಿಸಿದ ಬೆಳಕಾಗಿ ಉಳಿಯುತ್ತದೆ. ಬೆಳಕಿಗೆಲ್ಲಿಯ ಸಾವು ಪ್ರಭು ? ಒಂದು ದೀಪ ಕೋಟಿ ದೀಪಗಳ ತಾಯಿಯಾಗುವಂತೆ, ಒಂದು ಜೀವ ತಾನೇ ಜಗತ್ತಾ ಗುತ್ತದೆ. 'ಏಕಂ ಸದ್ವಿಪ್ರಾ ಬಹುದಾ ಭವಂತಿ' ಎಂಬ ಮಾತಿನ ಅರ್ಥವೇ ಇದು. ಹೀಗೆ 'ಏಕ' 'ಅನೇಕ' ವಾದಾಗ 'ಏಕ' ಮೃತ್ಯು ಭೀತಿದೂರವಾಗಿ ಅಮರತ್ವವನ್ನು ಪಡೆಯುತ್ತದೆ.

'ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ
ಆಯೇಧಾ ಮಾನಿ ದಿವ್ಯಾನಿ ತಸ್ತುಃ
ವೇದಾಹಮೇತಂ ಪುರುಷಂ ಮಹಾಂತಂ
ಆದಿತ್ಯವರ್ಣಂ ತಮಸಃ ಪರಸ್ತಾತ್
ತಮೇವ ವಿದಿತ್ವಾತಿ ಮೃತ್ಯುಮೇತಿ
ನಾನ್ಯಃ ಪನ್ಥಾ ವಿದ್ಯತೇಽಯನಾಯ'

—ಎಂದ ಋಷಿ ಕಂಡ ಸತ್ಯ ಇದೇ ಪ್ರಭು. ಈ ಸತ್ಯವನ್ನು ಕಂಡು ನಡೆವ ಸಾಹಸ ತಮ್ಮದಾಗಬೇಕು ಪ್ರಭು. ಅದು ತಮ್ಮದಾ ಗುತ್ತದೆ, ನಾನು ಬಲ್ಲೆ.'

—ಎಂದರು, ಎಂದೂ ಹೆಚ್ಚುಮಾತಾಡದ ಗೋಲಯಭಟ್ಟರು, ಅಂತರ್ಮುಖಿಗಳಾಗಿ, ಪ್ರವಾದಿಯ ಸ್ಪಷ್ಟಧ್ವನಿಯಲ್ಲಿ. ಅವರ ಮಾತನ್ನು ತದೇಕಚಿತ್ತರಾಗಿ ಆಲಿಸುತ್ತಿದ್ದ ಚಕ್ರವರ್ತಿಗಳಿಗೆ ವೈಯ ನರನರವನ್ನು ಹಿಡಿದು ಕುಲಕಿದಂತಾಗಿ, ರೋಮಾಂಚವಾಗಿ, ಹಬ್ಬದ ಸುದ್ದಿ ಕೇಳಿದ ಮಗು 'ಎಂದು ಆದಿನ' ಎಂದು ಕಾತರದಿಂದ ತಾಯನ್ನು ಕೇಳುವಂತೆ-

'ನನಗೆ ಆ ಸಾಕ್ಷಾತ್ಕಾರವಾಗುವುದೇ ಆರ್ಯ, ಎಂದಾಗುತ್ತದೆ ?' ಎಂದು ಕೇಳಿದರು, ಆತುರದ ಧ್ವನಿಯಲ್ಲಿ.

‘ಶಿಶಿರ ಋತುವಿನಲ್ಲಿ ವಸಂತದ ಮಧುಮಾರುತ ಬೀಸುವುದಿಲ್ಲ, ಮಹಾರಾಜ, ಎಲ್ಲಕ್ಕೂ ಕಾಲ ಬರಬೇಕು’

—ಎಂದರು ತಾವೂ ಮೌನವಾಗಿದ್ದು ಗೊಲಯಭಟ್ಟರ ಮಾತನ್ನು ಕೇಳುತ್ತಾ ಕುಳಿತಿದ್ದ ಗುಣಭದ್ರಾಚಾರ್ಯರು.

‘ನಿಜವಾಗಿಯೂ ಹಾಗಾಗುತ್ತದೆಯೇ ಆಚಾರ್ಯ?’

—ಚಕ್ರವರ್ತಿಗಳು ಮತ್ತೆ ಕೇಳಿದರು.

‘ನಾನು ಹೇಳುತ್ತೇನೆ ಪ್ರಭು. ಹಾಗಾಗುತ್ತದೆ. ನೀವರಿಯ ನಂ[illegible] [illegible]ಷ್ಟ ಬಾಳು ನಿಮ್ಮನ್ನು [illegible]ತ್ತ ನಡೆಸುತ್ತಿದೆ. ಆ ಮುಕ್ತಿಯ ಪ್ರಚ[illegible] ಪ್ರವಾಹ ಭೋರ್ಗರೆದು ಬರುತ್ತಿದೆ, ಪ್ರಭು, ಎದೆಗೆಡದೆ ನಿಲ್ಲಿ.’

—ಎಂದರು ಗೋಲಯಭಟ್ಟರು.

‘ಮಧುಮಾಸ ಬರುವುದು ಕೋಗಿಲೆಗೆ ಅರಿವಾಗುವಂತೆ, ಮುಂದೆ ಬರಲಿರುವುದು ಗೋಲಯಭಟ್ಟರಿಗೆ ಅರಿವಾಗುತ್ತವೆ ಮಹಾರಾಜ. ಅವರು ಹೇಳುವ ಮಾತನ್ನು ನಂಬಿ. ಅದು ಭೋರ್ಗರೆವ ಹೊಳೆಯಾಗಿ ಬಂದಾಗ ಇಷ್ಟು ಮಾತ್ರ ನೆನಪಿನಲ್ಲಿರಲಿ— ಬತ್ತಿ ತಾನು ಉರಿದು ಲೋಕಕ್ಕೆ ಬೆಳಕಾಗಬೇಕು.’ ಎಂದು ಗುಣಭದ್ರಾಚಾರ್ಯರು, ಆ ಮಾತಿನ ಲಹರಿಯನ್ನು ಅತ್ತ ಕಡೆಯಿಂದ ತಿರುಗಿಸಲು—‘ರಾಜಕುಮಾರಿಗೆ ಹೆಸರೇನು ಇಡಬೇಕು ಜ್ಯೋತಿಷಿಗಳೇ? ಇಂದೇ ನಾಮಕರಣ. ಈ ಮಾತಿನಲ್ಲಿ ಅದನ್ನು ಮರೆತುಬಿಟ್ಟರಾದೀತೇ?’ ಎಂದರು.

ಆಗ ಚಕ್ರವರ್ತಿಗಳಿಗೂ ಆ ಮಾತು ನೆನಪಾಯಿತು.

‘ನಿಜ, ಏನು ಹೆಸರಿಡಬೇಕು ಆರ್ಯ?’

ಸ್ವಲ್ಪಹೊತ್ತು ಲೆಕ್ಕಾಚಾರಮಾಡಿ, ಬಳಿಕ ಹೇಳಿದರು ಗೋಲಯಭಟ್ಟರು—

‘ತನ್ನ ಉತ್ಕರ್ಷ ಕಾಲದಲ್ಲಿ ತಾನು ಮಾತ್ರ ಹಿಗ್ಗದೆ, ಕಡಲನ್ನೂ ಹರ್ಷಪಡಿಸುವ ಪೂರ್ಣಿಮಾ ಚಂದ್ರನಂತೆ, ಸಕಲರಿಗೂ ಆನಂದವನ್ನು ನೀಡಿದ ರಾಜಕನ್ಯೆಗೆ ‘ಚಂದ್ರಲಾ’ ಎಂದು ಹೆಸರಿಡಿ ಮಹಾರಾಜ.’

‘ಹೆಸರು ಚನ್ನಾಗಿದೆ. ಲೋಕಕ್ಕೇ ಶಾಂತಿಯನ್ನೂ, ಆನಂದವನ್ನೂ ನೀಡುವ ಹೆಸರು.’

—ಎಂದು ಗುಣಭದ್ರಾಚಾರ್ಯರೂ ಸಮ್ಮತಿ ಸೂಚಿಸಿದರು.

'ನಿಜ. ಸುಂದರವಾದ ಹೆಸರು, ಆರ್ಯ. ಆದರೆ ಗ್ರಹಗತಿ ಹೇಗಿದೆಯೆಂದು ಹೇಳಲಿಲ್ಲವಲ್ಲ?' ಎಂದು ಕೇಳಿದರು ಚಕ್ರವರ್ತಿಗಳು.

'ಅದು ಗೊತ್ತಾಗುವ ಕಾಲಕ್ಕೆ ತಾನೇ ತಿಳಿಯುತ್ತದೆ. ಈಗ ಬೇಡ ಪ್ರಭು'

'ಏಕೆ ಆರ್ಯ?' ಚಕ್ರವರ್ತಿಗಳು ಕೊಂಚ ಗಾಬರಿಯಾಗಿ ಕೇಳಿದರು—'ರಾಜಪುತ್ರನಂತೇ...........'

'ಊಹೂ. ಹಾಗೇನೂ ಇಲ್ಲ. ಅದಕ್ಕೆ ಪ್ರತಿಯಾಗಿ ಈಕೆಯಿಂದ ತಮಗೆ, ರಾಜ್ಯಕ್ಕೆ ಸುಖವಾಗುತ್ತದೆ ಪ್ರಭು'

'ಈಕೆಯ ಜೀವನ ಸುಖಮಯವಾಗುವುದೇ?'

'ನಿಮ್ಮ ಬಾಳಿನಂತೆಯೇ ಈಕೆಯದೂ. ತಂದೆಗೆ ತಕ್ಕ ಮಗಳಾಗುವಳು. ಹೆಚ್ಚು ಕೇಳಬೇಡಿ'

—ಎಂದು ಆಮಾತು ಮುಂದುವರಿಯಬಾರದೆಂಬಷ್ಟು ಖಚಿತವಾಗಿ ಹೇಳಿ ಸುಮ್ಮನಾದರು ಗೋಲಯಭಟ್ಟರು.

'ಕ್ಷಮಿಸಬೇಕು, ಆರ್ಯ. ಆದರೂ....'

—ಎಂದು ಗೋಲಯಭಟ್ಟರ ಮಾತು ಕೇಳಿ, ಚಿಂತೆ ಕವಿದ ಮನಸ್ಸಿನ ಚಕ್ರವರ್ತಿಗಳು ಹೆಚ್ಚು ತಿಳಿಯಲು ಪ್ರಯತ್ನಿಸಿ ಕೇಳಿದರು. ಆದರೆ ಮಾತು ಮುಂದುವರಿಸಲು ಅವಕಾಶ ಕೊಡದೆ, ಗುಣಭದ್ರಾಚಾರ್ಯರೇ ಹೇಳಿದರು—

'ಅಜ್ಞಾನದಂತೆಯೇ ಅತಿಜ್ಞಾನವೂ ಅಪಾಯಕಾರಿ ಮಹಾರಾಜ. ಗ್ರಹಗಳು ತರುವ ಫಲವನ್ನು ತರಲಿ. ಏನು ಬಂದರೂ ಕದಲದ ಚಿತ್ತಶಾಂತಿಯೊಂದಿರಲಿ. ಎಂದೂ ಇಷ್ಟು ಮಾತನಾಡದ ರಾಜ ಜ್ಯೋತಿಷಿಗಳು ಏಕೋ ಇಷ್ಟು ಮಾತಾಡಿದಾರೆ, ಅಲ್ಲ, ಯಾವುದೋ ಶಕ್ತಿ ಅವರಿಂದ ಅಷ್ಟು ಮಾತಾಡಿಸಿದೆ. ಆ ಮಾತುಗಳನ್ನು ಮಾತ್ರ ಮರೆಯಬೇಡಿ. ಹೆಚ್ಚು ಕೆಣಕಿ ಕೇಳಲೂಬೇಡಿ.'

ಆ ಮಾತಿನಿದಿರು ಚಕ್ರವರ್ತಿಗಳು ಮೌನವಾಗಿ ತಲೆಬಾಗಿದರು. ಅಪಾರ ಮಮತೆ, ಅನಂತ ಯಾತನೆಗಳು ತುಂಬಿದ ಕಣ್ಣುಗಳಿಂದ

ಆಚಾರ್ಯರಿಬ್ಬರೂ ಅವರನ್ನು ನೋಡುತ್ತಿದ್ದರು—ತಮ್ಮ ಮೌನ ದಿಂದಲೇ ಚಕ್ರವರ್ತಿಗಳನ್ನು ಆಶೀರ್ವದಿಸುವರಂತೆ.

## ೧೨

ಅಂದು ಗೋಲಯುಭಟ್ಟರಾಡಿದ ಮಾತುಗಳನ್ನು ಕೇಳಿದಾಗಿ ನಿಂದಲೂ ಚಕ್ರವರ್ತಿಗಳ ಹೃದಯಲ್ಲಾವುದೋ ಒಂದು ಬಗೆಯ ಭೀತಿ ಗುಹೆಯನ್ನು ತುಂಬಿದ ಕತ್ತಲಲ್ಲಿ ಮೈ ಕಾಣಿಸದೆ, ಬೀಸುವ ರೆಕ್ಕೆಯ ಸಪ್ಪು ಮಾತ್ರ ಕೇಳಿಸುವ ಬಾವಲಿಯಂತೆ, ಆಗಾಗ ಮೂಡಿ ಅಡಗುವುದು. ಎಲ್ಲಿಂದ ಆ ಭೀತಿಬರಬಹುದು, ಯಾವ ರೂಪದಲ್ಲಿ ಬರಬಹುದು, ಎಲ್ಲಾ ದರೂ ಅದರ ಸುಳಿವು ಕಾಣಿಸುವುದೇ ಎಂದು ಸುತ್ತಲೂ ನೋಡುವರು. ಆದರೆ ಎಲ್ಲೂ ಅದರ ಛಾಯೆ ಕಾಣದು. ಅರಮನೆ, ಗಾಳಿಯೂ ಆಡದ ಬಿಸಿಲ ಹೊತ್ತಿನಲ್ಲಿ ನಿಶ್ಚಲವಾಗಿ ತಳತಳಿಸುವ ಸರೋವರದಂತೆ ಶಾಂತವಾಗಿದೆ.

ಗುಣಭದ್ರಾಚಾರ್ಯರ ಶಿಷ್ಯತ್ವದಲ್ಲಿ ರಾಜಕುಮಾರನ ವಿದ್ಯಾಭ್ಯಾಸ ಚಕ್ರವರ್ತಿಗಳು ಶಂಕಿಸಿದ ಯಾವ ಭೀತಿಯೂ ಇಲ್ಲದೆ ಮುಂದುವರಿದು, ದಿನದಿನಕ್ಕೆ ರಾಜಕುಮಾರನು, ರಾಜಕುಮಾರೋಚಿತವಾದ ವಿದ್ಯೆಗಳನ್ನು ಬಂಕರಸರ ಮಗ ಲೋಕಾದಿತ್ಯನೊಂದಿಗೆ ಕಲಿಯುತ್ತಿದ್ದನು. ಅವನಿಗೆ ವಿದ್ಯೆಕಲಿಯುವುದರಲ್ಲಿ ಆಸಕ್ತಿಯಿದೆ. ಆದರೂ, ಗುಣಭದ್ರಾಚಾರ್ಯರ ಆಶ್ರಮದಿಂದ ಬಂದಾಗ ಅಲ್ಲಿನ ನಿಷ್ಠುರ ನಿಯಮಗಳನ್ನು ಕುರಿತು ಬೇಸ ರದ ಮಾತಾಡುವನು. ಅವನಿಗೆ ಹುಟ್ಟಿನೊಂದಿಗೆ ಸಹಜವಾಗಿ ಬಂದ ಅಲಂಕಾರಪ್ರಿಯತೆಗೆ ಅಲ್ಲಿ ಅವಕಾಶವಿಲ್ಲವೆಂದು ಕೊರಗುವನು. ಬರ ಬರುತ್ತ, ಬುದ್ಧಿಬಲಿತ ಹಾಗೆ ಆ ಚಪಲಗಳೂ ಹೋಗಬಹುದು ಎನಿಸಿದೆ ಚಕ್ರವರ್ತಿಗಳಿಗೆ. ಹೀಗಾಗಿ ಅವನ ಯೋಚನೆಯಿಲ್ಲ.

ಅರಮನೆಯ ಬಂಗಾರದ ತೊಟ್ಟಿಲ ಮೃದುಶಯ್ಯೆಯಲ್ಲಿ, ವಸಂತದ ಮುಗಳಿನಂತೆ ದಿನದಿಕ್ಕೆ ಬೆಳೆದರಳಿ ಮಂದಹಾಸದ ಪರಿಮಳ ಬೀರುವ ರಾಜಪುತ್ರಿ ಚಂದ್ರುಲೆಯದೂ ಚಿಂತೆಯಿಲ್ಲ. ಅರಮನೆ ಉದ್ಯಾನವಾದರೆ ಆ ಉದ್ಯಾನವನ್ನು ಸಂತೋಷದ ತಂಬೆಳಕಿನಲ್ಲಿ ಮೀಯಿಸುವ ಚಂದ್ರಿಕೆ

ಮಹಾರಾಣಿ. ಸದಾ ನಗನಗುತ್ತಾ, ನಡೆದಾಡುವ ದೀಪದಂತೆ ಅರಮನೆಯನ್ನು ಬೆಳಗುವ ಮಹಾರಾಣಿಯವರ ಯೋಚನೆಯಂತೂ ಎಂದೂ ಇಲ್ಲ.

ರಾಜ್ಯದ ಗಡಿಯಾಚೆಯ ಶತ್ರುಗಳೂ ಸ್ತಬ್ಧವಾಗಿದಾರೆ. ಮಿಹಿರ ಭೋಜ ಒಂದು ಕಡೆ ಅರಬ್ ದಾಳಿಗಾರರ ಭೀತಿ, ಇತ್ತ ಪರಮಾರ ರಾಜ್ಯದ ಭಯ-ಇವೆರಡರ ನಡುವೆ, ದಾಳಿ ಮಾಡುವ ಮನಸಿದ್ದೂ ಸುಮ್ಮನಿದಾನೆ. ಗಂಗರೂ ರಾಚಮಲ್ಲನ ಮರಣದನಂತರ ಏನೋ ಗರ ಬಡಿದಂತಿದಾರೆ. ಅವರಾರ ಭೀತಿಯೂ ಇಲ್ಲ ರಾಜ್ಯಕ್ಕೆ.

ಎಲ್ಲವೂ ಶಾಂತವಾಗಿದೆ ಎನ್ನುವಾಗಲೇ ಕಂಚಿಯತ್ತಣಿಂದಲೂ, ಶಂಖಾದೇವಿ ಗಂಡುಮಗುವಿನ ತಾಯಾದಳೆಂಬ ವಾರ್ತೆ ಬಂದು, ಶಾಂತಿಯ ಬಂಗಾರಕ್ಕೆ ಆನಂದದ ಮೆರುಗು ಕೊಟ್ಟಂತಾಗಿದೆ.

ಸುತ್ತ ಎತ್ತೆತ್ತಲಿಂದಲೂ, ಶಾಂತಿ ಸಮಾಧಾನದ ಸುದ್ದಿಗಳೇ ಬರುತ್ತಿರುವಾಗ, ನಡುವೆ ಮನಕೊರೆವ ಈ ಭೀತಿಯ ಅಪಸ್ವರವೇಕೆ? ಛಿ! ಅಶುಭಚಿಂತೆಗೆ ಮನಸ್ಸು ಮಾರಿ, ಅಕಾರಣವಾಗಿ ವ್ಯಾಕುಲರಾಗುವುದು ಪುರುಷ ಲಕ್ಷಣವಲ್ಲ ಎಂದುಕೊಂಡು ಆ ಚಿಂತೆಯನ್ನು ತುಳಿದು, ಸುತ್ತಲ ನಗುವಿನೊಂದಿಗೆ ತಮ್ಮ ನಗುವನ್ನು ಬೆರೆಸುವರು ಚಕ್ರವರ್ತಿಗಳು.

ತನ್ನ ಮಗಳು ಗಂಡುಮಗುವಿನ ತಾಯಾದಳೆಂದು ಕೇಳಿದಾಗಿನಿಂದಲೂ ಮಹಾರಾಣಿಯವರಿಗೆ, ಒಮ್ಮೆ ಕಂಚಿಗೆ ಹೋಗಿ ಮಗಳನ್ನು, ಮೊಮ್ಮಗನನ್ನು ನೋಡಿ ಬರಬೇಕೆಂಬ ಮಾತೃಸಹಜವಾದ ಬಯಕೆ ಉರಿಯಾಗಿ ಹೊತ್ತಿತ್ತು ಹೃದಯದಲ್ಲಿ. ಆದರೆ ಪ್ರಸವವೇದನೆಯಿಂದ ಬಳಲಿದ ಮೈ ಪ್ರವಾಸದ ಬಳಲಿಕೆಯನ್ನು ತಡೆಯಲಾರದೆಂಬ ಕಾರಣದಿಂದ ಹಾಗೂ ಹೀಗೂ ದಿನ ದೂಡಿದವರು, ಆರು ತಿಂಗಳು ಕಳೆಯುತ್ತಿದ್ದ ಹಾಗೇ, ಕಂಚಿಗೆ ಹೋಗಿಬರುವ ನಿರ್ಧಾರ ಮಾಡಿದರು. ಆಗಲೂ ಮಹಾರಾಣಿಯವರು ದೂರದ ಕಾಂಚೀಪ್ರಯಾಣವನ್ನು ಮಾಡುವುದು ಚಕ್ರವರ್ತಿಗಳಿಗೆ ಮನಸ್ಸಿರಲಿಲ್ಲ.

'ಹೋಗಿ ಬರುವೆಯಂತೆ. ಈಗೇನು ಅವಸರ? ಒಂದು ವರ್ಷ

ವಾಗಲಿ. ಮೊಮ್ಮಗನ ಜನ್ಮದಿನೋತ್ಸವಕ್ಕೆ ಹೋಗುವೆಯಂತೆ' ಎಂದು ಹೇಳಿ ತಡೆಯಲೆತ್ನಿಸಿದರು.

'ಮೊಮ್ಮಗನ ಜನ್ಮದಿನೋತ್ಸವಕ್ಕೂ ಹೋಗಬೇಕು. ಆಗ ಒಬ್ಬಳೇ ಹೋಗುವುದಿಲ್ಲ. ನೀವೂ ಜೊತೆಗೆ ಬರಬೇಕು. ಆದರೆ ಈಗ ನಾನೊಬ್ಬಳು ಹೋಗಿ ಬರುತ್ತೇನೆ.'

'ಈಗೇನು ಅಷ್ಟು ಆವಸರ? ಮಗಳು ಮೊಮ್ಮಗನೊಡನೆ ಮಾಯವಾಗುತ್ತಾಳೇನೇ?'

'ಹಾಗಲ್ಲ.'

'ಮತ್ತೇಕೆ?'

'ಶಂಖಾ ಸುಖ ಪ್ರಸವವಾದರೆ, ನಾನೇ ಬಂದು ಕೈಯಾರ ಸೇವೆ ಮಾಡುವೆನೆಂದು ಕಾಮಾಕ್ಷೀದೇವಿಗೆ ಹರಕೆ ಹೊತ್ತಿದ್ದೆ. ಈಗ ಹೋಗಿ ಹರಕೆ ಒಪ್ಪಿಸಿ ಬರುತ್ತೇನೆ.'

'ಪ್ರವಾಸದಿಂದ ನಿನಗೆ ತೊಂದರೆಯಾಗುವುದಿಲ್ಲವೇ ಲಕ್ಷ್ಮಾ? ಅಲ್ಲದೆ ಜೊತೆಗೆ ಆರು ತಿಂಗಳ ಮಗು ಬೇರೆ....'

'ತನ್ನ ಸೇವೆಗೆ ಬರುವವರ ಯೋಗಕ್ಷೇಮ ಕಾಮಾಕ್ಷಿದೇವಿಗೇ ಸೇರಿದ್ದು. ಲೋಕಮಾತೆಯಾದವಳಿಗೆ ನಮ್ಮಿಬ್ಬರನ್ನು ರಕ್ಷಿಸಿಕೊಳ್ಳುವ ಶಕ್ತಿ ಇಲ್ಲವೇ? ಎಲ್ಲಭಾರವನ್ನೂ ಆಕೆಯಮೇಲೆ ಹಾಕಿ ಅಪ್ಪಣೆಕೊಡಿ ಪ್ರಭು, ಹರಕೆ ಸಲ್ಲಿಸುವುದು ತಡವಾಗಬಾರದು'—ಎಂದು ಬೇಡಿದರು. ಬೇರೆ ದಾರಿಗಾಣದೆ ಚಕ್ರವರ್ತಿಗಳು ಆಕೆಗೆ ಹೋಗಲು ಅಪ್ಪಣೆಕೊಟ್ಟರು.

ಮತ್ತೊಮ್ಮೆ ಮಹಾರಾಜ್ಞಿಯ ಪ್ರವಾಸಕ್ಕೆ ಸಿದ್ಧತೆಗಳು ನಡೆದವು. ಹೊರಡಲು ಗೊತ್ತುಮಾಡಿದ ದಿನವೂ ಬಂದಿತು. ಪ್ರಯಾಣಸನ್ನದ್ಧರಾದ ಮಹಾರಾಣಿಯವರು ಚಕ್ರವರ್ತಿಗಳ ಪಾದಕ್ಕೆರಗಿ, ಅವರ ಪಾದಧೂಳಿಯನ್ನು ಬೈತಲೆಗೆ ಲೇಪಿಸಿಕೊಂಡು ಹೊರಡಲು ಅಪ್ಪಣೆ ಬೇಡಿದರು. ಮಣಿದ ಮಡದಿಯನ್ನು ಕೈ ಹರಸಿತಾದರೂ, 'ಹೋಗಿ ಬಾ' ಎನ್ನಲು ಚಕ್ರವರ್ತಿಗಳ ಕಂಠ ಏಕೋ ಬಿಗಿದಿತ್ತು.

ಚಕ್ರವರ್ತಿ-ಮಹಾರಾಣಿಯವರು ಹಾಗೆ ಒಬ್ಬರು ಮತ್ತೊಬ್ಬರಿಂದ ಆಗಲಿ ಎಷ್ಟೋ ದಿನವಾಗಿತ್ತು. ಬಹು ವರ್ಷಗಳಕಾಲ ಒಟ್ಟಾಗಿ ಬಾಳಿದ

ಜೀವಗಳೆರಡೂ, ಒಂದಕ್ಕೊಂದು ಸ್ನೇಹದ ಬೆಸುಗೆಯಲ್ಲಿ ಒಂದಾಗಿ, ಅಗಲುವಿಕೆ ಇಬ್ಬರಿಗೂ ಸಮಾನವಾಗಿ ಯಾತನಾಮಯವಾಗಿತ್ತು. ಮಹಾರಾಣಿಯವರಿಗೂ ಈ ಅಗಲಿಕೆ ಹಿತವಾಗಿರಲಿಲ್ಲವಾದರೂ, ಮಗಳನ್ನು ಕಾಣಬೇಕೆಂಬ ಬಯಕೆಯಿಂದ, ಆ ನೋವನ್ನು ಮರೆತು ಹೊರಟುನಿಂತಿದ್ದರು. ಎಷ್ಟು ಹೊತ್ತಾದರೂ 'ಹೋಗಿ ಬಾ' ಎನ್ನಲು ಚಕ್ರವರ್ತಿಗಳಿಗೆ ಬಾಯಿ ಬರಲಿಲ್ಲ. ಸುಮ್ಮನೆ ಕಡೆದ ವಿಗ್ರಹದಂತೆ ಮಡದಿಯ ಮೊಗವನ್ನು ನೋಡುತ್ತಾ ನಿಂತಿದ್ದರು—ಆ ಅಗಲಿಕೆಯ ಹೊತ್ತು ಸಮೀಪಿಸಿದಾಗಿನ ಪ್ರಿಯಸಾಮೀಪ್ಯದ ವಿಚಿತ್ರ ಯಾತನಾಮಯ ಸುಖವನ್ನನುಭವಿಸುತ್ತಾ. ದಾಸಿ ಬಂದು 'ಹೊರಡುವ ಮುಹೂರ್ತ ಸನ್ನಿಹಿತವಾಗುತ್ತಿದೆ' ಎಂದು ಎಚ್ಚರಿಸದಿದ್ದರೆ ಎಷ್ಟು ಹೊತ್ತು ಹಾಗೇ ನಿಲ್ಲುತ್ತಿದ್ದರೋ ಏನೋ.

'ಹೋಗಿ ಬರಲು ಅಪ್ಪಣೆಯೇ ಪ್ರಭು'-ಬಿಗಿದ ಗಂಟಲಿನಿಂದಲೇ ಕೇಳಿದರು ಮಹಾರಾಣಿ.

'ಬಾ ಎನ್ನುವುದಕ್ಕೇನೋ ಬಾಯಿ ಸಿದ್ಧವಾಗಿದೆ ಲಕ್ಷ್ಮಿ, ಹೋಗು ಎಂದು ಹೇಳಲು ಏಕೋ ಮನಸು ಒಪ್ಪದು. ಏಕೋ.... ಏಕೋ....'

'ಏನು ಹೇಳಿ ಪ್ರಭು?'

'ಆ ಮಾತು ಹೇಳಲಾರೆ, ಆದರೆ ಹೇಳದೆ ಇರಲಾರೆ ಲಕ್ಷ್ಮಿ?'

'ನನ್ನೊಡನೆ ಮಾತಾಡುವುದಕ್ಕೂ ಪ್ರಭುಗಳಿಗೆ ಸಂಕೋಚವೇ ಹೇಳಿ ಪ್ರಭು?'

'ಲಕ್ಷ್ಮಿ....ಲಕ್ಷ್ಮಿ....' ತಡೆತಡೆದು ಆಡಿದರು ಚಕ್ರವರ್ತಿಗಳು, 'ನೀನಿಲ್ಲದ ಅರಮನೆಯಲ್ಲಿ ಒಂಟಿಯಾಗಿ ನಾನಿರಲಾರೆ ಲಕ್ಷ್ಮಿ'—ತಡೆದರೂ ನುಗ್ಗಿಬಂದ ಕಾತರವನ್ನು ತಡೆಯಲಾರದೆ ಪ್ರಕಟಿಸಿ ಹೇಳಿದರು. ಚಕ್ರವರ್ತಿಗಳ ಮಾತನ್ನು ಕೇಳಿ ಮಹಾರಾಣಿಯವರ ಕಣ್ಣಲ್ಲಿ ಕಂಬನಿ ದುಂಬಿದರೂ, ಚೆಂದುಟಿಗಳಮೇಲೆ ಮಂದಹಾಸ ಮೂಡಿತು.

'ಈ ಮನೆಗೆ ಕಾಲಿಟ್ಟಂದು ಇದ್ದ ಪ್ರೇಮವೇ, ನನ್ನಮೇಲೆ ಇಂದೂ ಇರುವುದು ನನ್ನ ಭಾಗ್ಯ ಪ್ರಭು....ಆದರೂ....'

'ಏನು ಲಕ್ಷ್ಮಿ?....'

ವಾಗಲಿ. ಮೊಮ್ಮಗನ ಜನ್ಮದಿನೋತ್ಸವಕ್ಕೆ ಹೋಗುವೆಯಂತೆ' ಎಂದು ಹೇಳಿ ತಡೆಯಲೆತ್ನಿಸಿದರು.

'ಮೊಮ್ಮಗನ ಜನ್ಮದಿನೋತ್ಸವಕ್ಕೂ ಹೋಗಬೇಕು. ಆಗ ಒಬ್ಬಳೇ ಹೋಗುವುದಿಲ್ಲ. ನೀವೂ ಜೋತೆಗೆ ಬರಬೇಕು. ಆದರೆ ಈಗ ನಾನೊಬ್ಬಳು ಹೋಗಿ ಬರುತ್ತೇನೆ.'

'ಈಗೇನು ಅಷ್ಟು ಆವಸರ? ಮಗಳು ಮೊಮ್ಮಗನೊಡನೆ ಮಾಯವಾಗುತ್ತಾಳೇನೋ?'

'ಹಾಗಿಲ್ಲ.'

'ಮತ್ತೇಕೆ?'

'ಶಂಖಾ ಸುಖ ಪ್ರಸವವಾದರೆ, ನಾನೇ ಬಂದು ಕೈಯಾರ ಸೇವೆ ಮಾಡುವೆನೆಂದು ಕಾಮಾಕ್ಷೀದೇವಿಗೆ ಹರಕೆ ಹೊತ್ತಿದ್ದೆ. ಈಗ ಹೋಗಿ ಹರಕೆ ಒಪ್ಪಿಸಿ ಬರುತ್ತೇನೆ.'

'ಪ್ರವಾಸದಿಂದ ನಿನಗೆ ತೊಂದರೆಯಾಗುವುದಿಲ್ಲವೇ ಲಕ್ಷ್ಮಾ? ಅಲ್ಲದೆ ಜೊತೆಗೆ ಆರು ತಿಂಗಳ ಮಗು ಬೇರೆ....'

'ತನ್ನ ಸೇವೆಗೆ ಬರುವವರ ಯೋಗಕ್ಷೇಮ ಕಾಮಾಕ್ಷಿದೇವಿಗೇ ಸೇರಿದ್ದು. ಲೋಕಮಾತೆಯಾದವಳಿಗೆ ನಮ್ಮಿಬ್ಬರನ್ನು ರಕ್ಷಿಸಿಕೊಳ್ಳುವ ಶಕ್ತಿ ಇಲ್ಲವೇ? ಎಲ್ಲಭಾರವನ್ನೂ ಆಕೆಯಮೇಲೆ ಹಾಕಿ ಅಪ್ಪಣೆಕೊಡಿ ಪ್ರಭು, ಹರಕೆ ಸಲ್ಲಿಸುವುದು ತಡವಾಗಬಾರದು'—ಎಂದು ಬೇಡಿದರು. ಬೇರೆ ದಾರಿಗಾಣದೆ ಚಕ್ರವರ್ತಿಗಳು ಆಕೆಗೆ ಹೋಗಲು ಅಪ್ಪಣೆಕೊಟ್ಟರು.

ಮತ್ತೊಮ್ಮೆ ಮಹಾರಾಜ್ಞಿಯ ಪ್ರವಾಸಕ್ಕೆ ಸಿದ್ಧತೆಗಳು ನಡೆದವು. ಹೊರಡಲು ಗೊತ್ತುಮಾಡಿದ ದಿನವೂ ಬಂದಿತು. ಪ್ರಯಾಣಸನ್ನದ್ಧರಾದ ಮಹಾರಾಣಿಯವರು ಚಕ್ರವರ್ತಿಗಳ ಪಾದಕ್ಕೆರಗಿ, ಅವರ ಪಾದಧೂಳಿಯನ್ನು ಬೈತಲೆಗೆ ಲೇಪಿಸಿಕೊಂಡು ಹೊರಡಲು ಅಪ್ಪಣೆ ಬೇಡಿದರು. ಮಣಿದ ಮಡದಿಯನ್ನು ಕೈ ಹರಸಿತಾದರೂ, 'ಹೋಗಿ ಬಾ' ಎನ್ನಲು ಚಕ್ರವರ್ತಿಗಳ ಕಂಠ ಏಕೋ ಬಿಗಿದಿತ್ತು.

ಚಕ್ರವರ್ತಿ-ಮಹಾರಾಣಿಯವರು ಹಾಗೆ ಒಬ್ಬರು ಮತ್ತೊಬ್ಬರಿಂದ ಆಗಲಿ ಎಷ್ಟೋ ದಿನವಾಗಿತ್ತು. ಬಹು ವರ್ಷಗಳಕಾಲ ಒಟ್ಟಾಗಿ ಬಾಳಿದ

ಜೀವಗಳೆರಡೂ, ಒಂದಕ್ಕೊಂದು ಸ್ನೇಹದ ಬೆಸುಗೆಯಲ್ಲಿ ಒಂದಾಗಿ, ಅಗಲುವಿಕೆ ಇಬ್ಬರಿಗೂ ಸಮಾನವಾಗಿ ಯಾತನಾಮಯವಾಗಿತ್ತು. ಮಹಾರಾಣಿಯವರಿಗೂ ಈ ಅಗಲಿಕೆ ಹಿತವಾಗಿರಲಿಲ್ಲವಾದರೂ, ಮಗಳನ್ನು ಕಾಣಬೇಕೆಂಬ ಬಯಕೆಯಿಂದ, ಆ ನೋವನ್ನು ಮರೆತು ಹೊರಟುನಿಂತಿದ್ದರು. ಎಷ್ಟು ಹೊತ್ತಾದರೂ 'ಹೋಗಿ ಬಾ' ಎನ್ನಲು ಚಕ್ರವರ್ತಿಗಳಿಗೆ ಬಾಯಿ ಬರಲಿಲ್ಲ. ಸುಮ್ಮನೆ ಕಡೆದ ವಿಗ್ರಹದಂತೆ ಮಡದಿಯ ಮೊಗವನ್ನು ನೋಡುತ್ತಾ ನಿಂತಿದ್ದರು–ಆ ಅಗಲಿಕೆಯ ಹೊತ್ತು ಸಮೀಪಿಸಿದಾಗಿನ ಪ್ರಿಯಸಾಮೀಪ್ಯದ ವಿಚಿತ್ರ ಯಾತನಾಮಯ ಸುಖವನ್ನನುಭವಿಸುತ್ತಾ. ದಾಸಿ ಬಂದು 'ಹೊರಡುವ ಮುಹೂರ್ತ ಸನ್ನಿಹಿತವಾಗುತ್ತಿದೆ' ಎಂದು ಎಚ್ಚರಿಸದಿದ್ದರೆ ಎಷ್ಟು ಹೊತ್ತು ಹಾಗೇ ನಿಲ್ಲುತ್ತಿದ್ದರೋ ಏನೋ.

'ಹೋಗಿ ಬರಲು ಅಪ್ಪಣೆಯೇ ಪ್ರಭು'-ಬಿಗಿದ ಗಂಟಲಿನಿಂದಲೇ ಕೇಳಿದರು ಮಹಾರಾಣಿ.

'ಬಾ ಎನ್ನುವುದಕ್ಕೇನೋ ಬಾಯಿ ಸಿದ್ಧವಾಗಿದೆ ಲಕ್ಷ್ಮೀ, ಹೋಗು ಎಂದು ಹೇಳಲು ಏಕೋ ಮನಸು ಒಪ್ಪದು. ಏಕೋ....ಏಕೋ....'

'ಏನು ಹೇಳಿ ಪ್ರಭು?'

'ಆ ಮಾತು ಹೇಳಲಾರೆ, ಆದರೆ ಹೇಳದೆ ಇರಲಾರೆ ಲಕ್ಷ್ಮೀ ?'

'ನನ್ನೊಡನೆ ಮಾತಾಡುವುದಕ್ಕೂ ಪ್ರಭುಗಳಿಗೆ ಸಂಕೋಚವೇ ಹೇಳಿ ಪ್ರಭು?'

'ಲಕ್ಷ್ಮೀ....ಲಕ್ಷ್ಮೀ....' ತಡೆತಡೆದು ಆಡಿದರು ಚಕ್ರವರ್ತಿಗಳು, 'ನೀನಿಲ್ಲದ ಅರಮನೆಯಲ್ಲಿ ಒಂಟಿಯಾಗಿ ನಾನಿರಲಾರೆ ಲಕ್ಷ್ಮೀ'—ತಡೆದರೂ ನುಗ್ಗಿಬಂದ ಕಾತರವನ್ನು ತಡೆಯಲಾರದೆ ಪ್ರಕಟಿಸಿ ಹೇಳಿದರು. ಚಕ್ರವರ್ತಿಗಳ ಮಾತನ್ನು ಕೇಳಿ ಮಹಾರಾಣಿಯವರ ಕಣ್ಣಲ್ಲಿ ಕಂಬನಿ ದುಂಬಿದರೂ, ಚೆಂದುಟಿಗಳಮೇಲೆ ಮಂದಹಾಸ ಮೂಡಿತು.

'ಈ ಮನೆಗೆ ಕಾಲಿಟ್ಟಂದು ಇದ್ದ ಪ್ರೇಮವೇ, ನನ್ನಮೇಲೆ ಇಂದೂ ಇರುವುದು ನನ್ನ ಭಾಗ್ಯ ಪ್ರಭು....ಆದರೂ....'

'ಏನು ಲಕ್ಷ್ಮೀ?....'

'ನನ್ನಮೇಲೆ ಅಷ್ಟು ಹುಚ್ಚೇ ಪ್ರಭು....'

'ಈ ಜಗತ್ತಿನಲ್ಲಿ ನಾವು ಪ್ರೀತಿಸುವ ವಿಷಯ ಎಷ್ಟೋ ಇವೆ ಲಕ್ಷ್ಮೀ....ಆದರೆ ಹುಚ್ಚು ಇರುವುದು ನಿನ್ನದೊಂದೇ....ಬೇಗ ಬಂದು ಬಿಡು ಲಕ್ಷ್ಮೀ....ಬಹಳ ದಿನ ಅಗಲಿ ಇರಲಾರೆ. ಮಗಳ ಮೋಹದಲ್ಲಿ ನಮ್ಮನ್ನು ಮರೆತುಬಿಡಬೇಡ ಲಕ್ಷ್ಮೀ....'

'ಮಗಳ ಮೇಲಿರುವುದಕ್ಕಿಂತಲೂ ಮಗಳ ತಂದೆಯಮೇಲೇ ನನಗೂ ಹೆಚ್ಚು ಪ್ರೀತಿ....ಅಪ್ಪಣೆಕೊಡಿ ಪ್ರಭು....ನೀವು ಹೀಗೆ ಮಾತಾ ಡುತ್ತಿದ್ದರೆ, ಹೋಗಬೇಕೆನ್ನುವ ಮನಸ್ಸಿನ ನಿರ್ಧಾರ ನಿಲ್ಲಲಾರದು.'

'ಹೋಗಿ ಬಾ ಲಕ್ಷ್ಮೀ, ಬೇಗ ಬಂದು ಬಿಡು. ಅರಮನೆಯನ್ನು ಬಹುದಿನ ಕಾಯಿಸಬೇಡ.'

—ಎಂದರು ಚಕ್ರವರ್ತಿಗಳು. ಮಹಾರಾಣಿಯವರು ಮತ್ತೊಮ್ಮೆ ಪತಿಯ ಪಾದಕ್ಕೆರಗಿದರು. ಅದುವರೆಗೂ ಕಣ್ಣಂಚಿನಲ್ಲಿ ಕಷ್ಟದಿಂದ ತಡೆದ ಕಂಬನಿ ತುಳುಕಿ, ಪತಿಪಾದವನ್ನು ತೊಳೆಯಿತು. ಬೇಡಬೇಡವೆಂದರೂ, ಆ ಅಶ್ರುಸ್ಪರ್ಶದಿಂದ ಸ್ಫೂರ್ತಿಗೊಂಡಂತೆ, ಚಕ್ರವರ್ತಿಗಳ ಕಣ್ಣಿಂದಲೂ ಕಂಬನಿ ತುಳುಕಿ ಆಶೀರ್ವಾದಾಶ್ರುವಾಗಿ ಮಹಾರಾಣಿಯವರ ಶಿರದ ಮೇಲೆ ಉರುಳಿತು. ........

ಮಹಾರಾಣಿಯವರ ದಾಸಿಯ ತೋಳಿನಲ್ಲಿ, ಬಳ್ಳಿಯಲ್ಲರಳಿದ ಹೂವಿನಂತೆ ಕುಲುಕುಲು ನಗುತ್ತಿದ್ದ ಚಂದ್ರಲೆಯನ್ನು ಚುಂಬಿಸಿ, ಚಕ್ರ ವರ್ತಿಯವರು ಮಹಾರಾಣಿಯವರನ್ನು ಬೀಳ್ಕೊಟ್ಟರು.

'ಆಗಾಗ ರಾಜಕುಮಾರನನ್ನು ವಿಚಾರಿಸುತ್ತಿರಿ. ಗುರುಮನೆಯ ಲ್ಲಿರುವ ಅವನನ್ನು ಮರೆಯಬೇಡಿ' ಎಂದು ಹೇಳಿ, ಚರಣಕ್ಕೆರಗಿದ ರಾಜ. ಕುಮಾರನನ್ನುಆಶೀರ್ವದಿಸಿ, ಮಹಾರಾಣಿಯವರು, ಅವರಿಗಾಗಿ ಕಾದಿದ್ದ ರಥದಲ್ಲಿ ಕುಳಿತರು. ಕಾವಲು ಪಡೆಯ ಭಟನಾಯಕನು ಅಪ್ಪಣೆಯಿ ತ್ತೊಡನೆಯೇ ಅಶ್ವಾರೋಹಿಗಳಾದ ಅಂಗರಕ್ಷಕರು, ರಥವನ್ನು ಸುತ್ತು ವರಿದು ನಿಂತರು. ಮಹಾರಾಣಿಯವರು ಕುಳಿತ ರಥ ಚಲಿಸಿತು. ಅವರ ರಥದ ಹಿಂದೆ ಸಾಲು ಸಾಲಾಗಿ, ಪರಿವಾರದವರು, ಗಾಯಕಿಯರು, ದಾಸ ದಾಸಿಯರು, ಪರಿಚಾರಕರು, ಪುರೋಹಿತರು ಕುಳಿತ ಹೇಸರುಗತ್ತೆಗಳು

ಕಟ್ಟಿದ ಗಾಡಿಗಳು ಹೊರಟವು. ಅಂತಃಪುರದ ಉಪ್ಪರಿಗೆಯ ವಾತಾಯನದ ಮೂಲಕ, ಹೋಗುತ್ತಿರುವ ಮಹಾರಾಣಿಯವರ ಪರಿವಾರದ ಪಡೆಯನ್ನು ನೋಡುತ್ತಾ ನಿಂತಿದ್ದರು ಚಕ್ರವರ್ತಿಗಳು. ಕೋಟೆಯ ಹೆಬ್ಬಾಗಿಲು ದಾಟುವವರೆಗೂ, ಬಿಸಿಲಿನಲ್ಲಿ ಥಳಥಳಿಸುತ್ತಿದ್ದ ಮಹಾರಾಣಿಯವರ ರಥದ ಸುವರ್ಣಕಲಶ, ಬಾಗಿಲು ದಾಟಿದ ಬಳಿಕ ಕುದುರೆ, ಹೇಸರಗತ್ತೆಗಳ ಖುರಪುಟದ ಧೂಳಿನಲ್ಲಿ ಮರೆಯಾಯಿತು.

ಕಂಚಿಗೆ, ಕಾಮಾಕ್ಷೀದೇವಿಯ ಸೇವೆಗೆಂದು ತೆರಳಿದರು ಮಾನ್ಯಖೇಟದ ಮಹಾರಾಣಿ ಲಕ್ಷ್ಮೀದೇವಿಯವರು

ತೆರಳಿದರು—ಮತ್ತೆ ಮರಳಲಿಲ್ಲ.

ಪ್ರವಾಸದ ಆಯಾಸವೋ, ಕಂಚಿಯ ತಾಳಲಾಗದ ಬಿಸಿಲೋ, ಕಾಮಾಕ್ಷೀದೇವಿಯ ಕರೆಯೋ–ಕಂಚಿಯನ್ನು ಸೇರಿದ ಮರುದಿನವೇ ಆಯಾಸವೆಂದವರು, ಹಟಹಿಡಿದು ಕಲ್ಯಾಣಿಯಲ್ಲಿ ಮಿಂದು ಕಾಮಾಕ್ಷಿಯ ಸೇವೆಮಾಡಿ ಬಂದು ಕುದಿಯುವ ಜ್ವರತಾಪದಲ್ಲಿ ಬಸವಳಿದು ಮಲಗಿದವರು ಮತ್ತೆ ಮೇಲೇಳಲಿಲ್ಲ. ಯಾವ ವೈದ್ಯೋಪಚಾರಕ್ಕೂ ಸಗ್ಗದೆ, ವಿಷಮಿಸಿದ ಜ್ವರ, ಮಹಾರಾಣಿಯವರ ಜೀವದ ಹಕ್ಕಿ ದೇಹದ ಪಂಜರವನ್ನು ತ್ಯಾಗಮಾಡಿದಮೇಲೇ ತಣ್ಣಗಾಗಿ ಇಳಿಯಿತು. ಮಹಾರಾಣಿ ಲಕ್ಷ್ಮೀದೇವಿ–ಇನ್ನಿಲ್ಲ.

ಎಲ್ಲೂ ನಿಲ್ಲದೆ, ಮೈಮೊಗದಿಂದ ಬಿಳಿನೊರೆಯ ಬುರುಗುಕಾರುವ ಕೃಷ್ಣಾಶ್ವವನ್ನು ಹತ್ತಿ, ಬರಿಗಾಲು ಬರಿದಲೆಯಿಂದ ಬಂದ ಸವಾರ ಹೇಳಿದ ವಾರ್ತೆಯನ್ನುಕೇಳಿ, ಸಿಡಿಲು ಹೊಡೆದಂತೆ ಧರೆಗುರುಳಿದರು ಚಕ್ರವರ್ತಿಗಳು.

ಚಕ್ರವರ್ತಿಗಳ ಹೃದಯದಲ್ಲಿ ದಿಗ್ಗನೆ ಹೊತ್ತಿದ್ದ ದುಃಖಜ್ವಾಲೆ, ರಾಜಧಾನಿಯನ್ನಾವರಿಸಿ, ಕೋಟಿಕಂಠಪಡೆದಂತೆ,ರಾಜಧಾನಿಯಲ್ಲೆಲ್ಲೆಲ್ಲೂ ಸದ್ದಡಗಿ ಶೋಕಧ್ವನಿ ಕವಿಯಿತು. ಗದ್ಗದಿಸುವ ಧ್ವನಿಯಲ್ಲಿ ದುಃಖಭೇರಿಗಳು ದುಮುದುಮುಗುಟ್ಟಿದವು. ನಾಟ್ಯಗೃಹಗಳಲ್ಲಿ ಕೇಳಿಬರುವ ವೀಣೆ, ತಾಳ, ಕೊಳಲು, ಮದ್ದಲೆ, ಕಾಲ್ಗೆಜ್ಜೆಗಳ ಧ್ವನಿ ತಟಕ್ಕನೆ ಹೆಪ್ಪುಗಟ್ಟಿದಂತೆ ಸತ್ತುಹೋಯಿತು. ದಾರುಣ ದುಃಖಭಾರದಿಂದ ಮುಚ್ಚುವ ಕಣ್ಣೆವೆಗಳಂತೆ, ಅಂಗಡಿ, ಮುಂಗಟ್ಟುಗಳ ಬಾಗಿಲು ಬಿಗಿದುವು. ರಾಜ

ಧಾನಿಯ ಮನೆಗಳೆಲ್ಲವೂ ಬರಿದೋ ಬರಿದು, ನಾಗರಿಕರೆಲ್ಲರ ಮನ ತೆರವೋ ತೆರವು—ಅರಮನೆಯ ಮುಂದೆ ಕಂಬನಿಗರೆವ, ಬಿಕ್ಕುವ, ದುಃಖೋನ್ಮಾದಿಂದ ಚೀರುವ ಜನಸಾಗರ.

ಜನತೆಯ ದುಃಖಧ್ವನಿ ಸುತ್ತುವರಿದ ಅರಮನೆ, ಮಸಣದಂತೆ ಮೌನವಾಗಿ 'ಭೋ'ಗುಟ್ಟುತ್ತಿತ್ತು.

ಎಲ್ಲೆಲ್ಲಿದ್ದ ದಾಸ ದಾಸಿಯರು ಅಲ್ಲಲ್ಲೇ ಕಡಿದ ಬಳ್ಳಿಗಳಂತೆ ನೆಲಕ್ಕೆ ಉರುಳಿ, ಅರಮನೆ ಕಾಡಾನೆಗಳ ಹಿಂಡು ತುಳಿದ ಲತೋದ್ಯಾನದಂತಿತ್ತು; ಬೆಳಕಳಿದ ಕುರುಡು ದೀವಿಗೆಯಂತಾಗಿತ್ತು.

ಅಂತಃಪುರದಲ್ಲಿ, ಅಳುತ್ತಾ ತೊಡೆಯಮೇಲೊರಗಿದ ಮಗನನ್ನು ಹೊತ್ತು, ಪ್ರಚಂಡ ದುಃಖದ ಶಿಲಾ ವಿಗ್ರಹದಂತೆ ಕುಳಿತಿದ್ದರು ಚಕ್ರವರ್ತಿಗಳು—ಮಾತಾಡದೆ, ಎವೆಯಿಕ್ಕದೆ, ನೋಡುವ ನೋಟ ಬದಲಿಸದೆ, ಎದೆಯಲ್ಲಿ ಕುದಿವ ದುಃಖದ ಎಸರು ಕಣ್ಣಲ್ಲಿ ಕಂಬನಿಯಾಗಿ ತುಳುಕುತ್ತಿರಲು.

ಒಂದೇ ಒಂದು ಬಾರಿ—ಸುದ್ದಿಯನ್ನು ಕೇಳಿದಾಗ ಒಂದೇ ಒಂದು ಬಾರಿ 'ಲಕ್ಷ್ಮೀ' ಎಂದು ಚೀರಿದ್ದವರು. ಮತ್ತಾವ ಸದ್ದೂ ಇಲ್ಲ. ಮಾತಿಗೆ ಮೀರಿದ ಶೋಕ, ದಾವಾಗ್ನಿಯಂತೆ ಅವರೆದೆಯನ್ನು ದಹಿಸಲಾರಂಭಿಸಿತು. ಆ ಉರಿಯ ಪ್ರಖರತೆ, ಹತ್ತಿರ ಸುಳಿದವರ ಎದೆಯಲ್ಲೂ ಅದೇ ಬಗೆಯ ಕಿಚ್ಚನ್ನು ಹೊತ್ತಿಸುವಷ್ಟು ಉಗ್ರವಾಗಿತ್ತು. ಅವರನ್ನು ಸಂತಯಿಸಬಂದವರನ್ನೂ ಸಂತಯಿಸುವ ಪರಿಸ್ಥಿತಿಯೊದಗಿತ್ತು ಅದರಿಂದ.

ಅವರಿವರಿರಲಿ ಸಂಯಮಿಶ್ರೇಷ್ಠರಾದ ಗುಣಭದ್ರಾಚಾರ್ಯರೂ ತೇವವಾದ ಕಣ್ಣನ್ನು ಒರಸಿಕೊಳ್ಳುವಂತೆ ಮಾಡಿತು ಆ ದುಃಖ. ಚಕ್ರವರ್ತಿಗಳ ಸಮಾನ ವಯಸ್ಕರಾದ ಆಚಾರ್ಯರು, ಕತ್ತರಿಸಿದ ಕುಸುಮ ಮಾಲೆಯಂತೆ ತಂದೆಯ ತೊಡೆಯಮೇಲೆ ಒರಗಿದ ರಾಜಕುಮಾರನನ್ನು ಮೃದುವಚನದಿಂದ ಸಂತಯಿಸಿ, ಆತನನ್ನು ಕಂಬನಿಗರೆವ ದಾಸಿಯರ ರಕ್ಷಣೆಗೊಪ್ಪಿಸಿ, ಅವನತಶಿರರಾಗಿ ಕುಳಿತ ಚಕ್ರವರ್ತಿಗಳ ತಲೆಯನ್ನು ನೇವರಿಸಿ, ಓಂಕಾರದಂತೆ ಶಾಂತ ಗಂಭೀರವಾದ ಧ್ವನಿಯಲ್ಲಿ ಹೇಳಿದರು—

‘ ಮಹಾರಾಜ, ನಿಮ್ಮ ದುಃಖ ಎಷ್ಟು ಪ್ರಬಲವಾದುದೆಂಬುದನ್ನು ನಾನು ಬಲ್ಲೆ. ಸ್ವಾಂತನದಿಂದ ಶಾಂತವಾಗುವ ದುಃಖವಲ್ಲ ಇದು. ಇದು ಜಲದಿಂದ ಆರುವ ಬೆಂಕಿಯಲ್ಲ, ಜಲವನ್ನೇ ಕುಡಿದು ಉರಿವ ಬಡಬಾಗ್ನಿ. ಜ್ಞಾನಿಗಳಾದವರು ತಾವೇ, ತಮ್ಮ ಜ್ಞಾನ ಜಲಪಾನದಿಂದಲೇ ದುಃಖೋಪಶಮನ ಮಾಡಿಕೊಳ್ಳಬೇಕಲ್ಲದೆ, ಯಾರ ವಚನದ ಆಲಂಬನವನ್ನೂ ಬಯಸಬಾರದು. ನಾನು ತಮಗೆ ಹೆಚ್ಚು ಹೇಳಲಾರೆ ಮಹಾರಾಜ, ಅಷ್ಟು ಶಕ್ತಿ ನನಗಿಲ್ಲ. ಭಗವಜ್ಜಿನಸೇನಾಚಾರ್ಯರು ಹೇಳಿದ ನಾಲ್ಕು ಮಾತನ್ನು ನೆನಪಿಗೆ ತರುತ್ತೇನೆ. ಕೇಳಿ ಮಹಾರಾಜ—ಆಚಾರ್ಯರು ಹೇಳಿದಾರೆ--

ವಿಷಯಾ ವಿಷಮಾಃ ಪಾಕೇ ಕಿಂಪಾಕಸದೃಶಾ ಇಮೇ
ಅಪಾತರಮ್ಯಾ ಧಿಗಿಮಾನನಿಷ್ಟ ಫಲದಾಯಿನಃ ॥
ಅಹೋ ಧಿಗಸ್ತು ಭೋಗಾಂಗಮಿದಮಂಗಂ ಶರೀರಿಣಾಂ
ವಿಲೀಯತೇ ಶರನ್ಮೇಘ ವಿಲಾಯಮತಿ ಪೇಲವಂ ॥
ತಟಿದುನ್ಮೇಷಿತಾಲೋಲಾ ಲಕ್ಷ್ಮೀರಾಕಾಲಿಕಂ ಸುಖಂ
ಇಮಾಃ ಸ್ವಪ್ನರ್ದ್ಧಿದೇಶೀಯಾ ವಿನಶ್ವರ್ಯೋ ಧನರ್ದ್ಧಯಃ ॥
ಭೋಗಾನ್ಭೋಗಾಭಮೀಹಂತೇ ಕಥಮೇತಾನ್ಮನಸ್ವಿನಃ
ಯೇ ವಿಲೋಭಯಿತುಂ ಜಂತೂನಾಯಾಂತಿ ಚ ವಿಯಂತಿ ಚ ॥
ವಪುರಾರೋಗ್ಯಮೈಶ್ವರ್ಯಂ ಯೌವ್ವನಂ ಸುಖಸಂಪದಃ
ವಸ್ತು ವಾಹನಮನ್ಯಚ್ಚ ಸುರಚಾಪವದಸ್ಥಿರಂ ॥
ತೃಣಾಗ್ರಲಗ್ನವಾರ್ಬಿಂದುರ್ವಿನಿಪಾತೋನ್ಮುಖಾ ಯಥಾ
ತಥಾ ಪ್ರಾಣಭೃತಾಮಾಯುರ್ವಿಲಾಸೋ ವಿನಿಪಾತುಕಃ ॥

—ನಾ[illegible] [illegible]ಚಾರ್ಯರ ವಚನ ಮಧು ನಿಮ್ಮ [illegible] ನೆ[illegible] [illegible]ರರು ಬಂದ ದುಃಖಗಳನ್ನು [illegible], [illegible]ವೇ [illegible]ವ್ಯನ್ನು ನುಂಗಲು ಬಿಡುವುದಿಲ್ಲ. ಕಮಲಕ್ಕ [illegible]ತ ಪ್ರಮರದ ವಿಷ[illegible]ವಾಗಿ ಆಚಾರ್ಯರು ‘ ಅಹೋಃ ಮದಾಲಿರೇಷೋತ್ರಗಂಧಾಕೃಷ್ಟೋ ರಸಂ ಪಿಬನ್। ದಿನಾಪಾಯೇ ನಿರುದ್ಧೋ ಭೂದ್ವ್ಯಸುರ್ಧಿಗ್ವಿಷಯೈಷಿತಾಂ ’ ಎಂದು ಮರುಕಪಟ್ಟಿದಾರೆ ಮಹಾರಾಜ. ಕಮಲಮೋಹದಿಂದ, ದಿನಾವಸಾನ ಸಮಯ ಸನ್ನಿಹಿತವಾದುದನ್ನು ಮರೆತ ಭ್ರಮರ, ಆ ಮೋಹ

ಪಂಜರದಲ್ಲಿಯೇ ಸಿಲುಕಿ ಮೃತಪಟ್ಟಂತೆ, ನಿಮ್ಮ ಪರಿಸ್ಥಿತಿಯಾಗಬಾರದು. ಮಹಾರಾಜ, ಮೋಹಕ್ಕೆ ಮನವನ್ನು ಬಲಿಗೊಡಬೇಡಿ. ತನ್ನ ದುಃಖದಲ್ಲಿ ಜಗತ್ತನ್ನು ಮರೆಯುವವನನ್ನು ಜಗತ್ತು ತಿರಸ್ಕರಿಸುವುದು.'

ಅದುವರೆಗೂ ಗುಣಭದ್ರಾಚಾರ್ಯರಾಡಿದ ಮಾತನ್ನು ಮೌನವಾಗಿ ಆಲಿಸಿದ ಚಕ್ರವರ್ತಿಗಳು, ದುಃಖಸಂಭೂತವಾದ ನಿರಾಶೆಯಿಂದ ಹೇಳಿದರು—

'ಕುರುಡನಾದವನಿಗೆ ಜಗತ್ತಿನಲ್ಲಿ ಬೆಳಕು ಹೊಳೆದರೇನು, ಕತ್ತಲಾದರೇನು ಆಚಾರ್ಯ? ಇದ್ದ ಏಕೈಕಸುಖಕ್ಕೂ ನೀನು ಅಪಾತ್ರ ಎಂದು ತಿರಸ್ಕರಿಸಿದಂತೆ, ವಿಧಿ ಅದನ್ನು ಕಿತ್ತುಕೊಂಡು ಹೋದಮೇಲೆ, ಜಗತ್ತಿನ ತಿರಸ್ಕಾರದಿಂದೇನು ಆಚಾರ್ಯ?'

'ನಿಜ ಹಾಗನಿಸುತ್ತದೆ. ಅಲ್ಲವೇ ಮಹಾರಾಜ? ಅದು ಸಾಮಾನ್ಯ ಮನುಜನಾಡುವ ಮಾತು, ಚಕ್ರವರ್ತಿಯಲ್ಲ.'

'ಅಂದರೆ ಚಕ್ರವರ್ತಿಯೂ ಮನುಷ್ಯನಲ್ಲವೇ ಆಚಾರ್ಯ?'

'ಅಹುದು ಮಹಾರಾಜ. ಆದರೆ ಸಾಮಾನ್ಯ ಮನುಷ್ಯನಲ್ಲ. ಚಕ್ರವರ್ತಿ ಸಾಮಾನ್ಯ ಮನುಷ್ಯನಾಗಬಾರದು. ಸನ್ಯಾಸಿಯಾಗಬೇಕೆಂದಿದ್ದಿರಲ್ಲವೇ ಮಹಾರಾಜ, ಸನ್ಯಾಸಿಯಾಗಲು ಇದು ಸುಸಮಯ.'

'ನಿಜ, ಆಚಾರ್ಯ, ಇಂದು ನಮಗುಳಿದಿರುವ ದಾರಿ ಅದೊಂದೆ. ದೀಕ್ಷೆ ಕೊಡಿ ಆಚಾರ್ಯ.'

'ಇಂದು ದೀಕ್ಷೆ ಕೊಡುವುದೇನು ಮಹಾರಾಜ, ಎಂದೋ ನಿಮಗೆ ಅದು ಪ್ರಾಪ್ತವಾಗಿದೆ.'

'ಅಂದರೆ....'

'ಕೇಶಮುಂಡನ, ಕಾಷಾಯಧಾರಣಗಳಿಂದ ಸನ್ಯಾಸ ಪ್ರಾಪ್ತವಾಗುವಂತೆಯೇ, ಮಕುಟ ಧಾರಣ, ಸಿಂಹಾಸನಾರೋಹಣದಿಂದಲೂ ಸನ್ಯಾಸ ಪ್ರಾಪ್ತವಾಗುತ್ತದೆ. ಸನ್ಯಾಸಿಗೆ ಸ್ವಸುಖ ವಿಸ್ಮೃತಿ, ಪರಹಿತ ಚಿಂತೆಯೇ ಕರ್ತವ್ಯವಾದಂತೆ, ರಾಜ್ಯಾಧಿಕಾರ ಸ್ವೀಕಾರ ಮಾಡಿದವರಿಗೂ ಅದೇ ಕರ್ಮ. ಇಬ್ಬರಿಗೂ ಅವರವರ ಸಂಸಾರವೇ ಅವರ ಶ್ರದ್ಧೆಯನ್ನು ಪರೀಕ್ಷಿಸುವ ನಿಕಷ. ಈ ಅಗ್ನಿಪರೀಕ್ಷೆಯಲ್ಲಿ ನೀವು ಗೆಲ್ಲಬೇಕು ಮಹಾರಾಜ.

ನಿಮ್ಮ ದುಃಖದ ಮುಸುಗು ಹೊದೆದುಕೊಂಡು ನೀವು ಕುಳಿತರೆ ಕರ್ತವ್ಯ ಮಾಡಿದಂತಾಗುವುದಿಲ್ಲ. ನೀವು ಯಾರ ರಕ್ಷಣೆಯ, ಮಾರ್ಗದರ್ಶನದ ಹೊಣೆ ಹೊತ್ತಿದ್ದೀರೋ ಅವರು ನಿಮಗಿಂತ ಹೆಚ್ಚಿನ ದುಃಖದ ಕಾವಳದಲ್ಲಿ ತೊಳಲುತ್ತಿದ್ದಾರೆ. ನೀವು ಕಳೆದುಕೊಂಡುದು ಪತ್ನಿಯನ್ನು. ಆದರೆ ತಾಯನ್ನು ಕಳೆದುಕೊಂಡ ತಬ್ಬಲಿಗಳಿಗೆ ದಿಕ್ಕಾರು ಮಹಾರಾಜ? ಅವರ ಆರ್ತಸ್ವರವನ್ನು ಕೇಳಿ—'

—ಎಂದು ಗುಣಭದ್ರಾಚಾರ್ಯರು ಅಂತಃಪುರದ ಮುಚ್ಚಿದ ವಾತಾಯನದ ಬಾಗಿಲನ್ನು ತೆರೆದರು. ಹೊರಗೆ ನೆರೆದ ಅಗಾಧ ಜನಕೋಟಿಯ ದುಃಖಧ್ವನಿ ಸಾಗರ ಘೋಷದಂತೆ ಒಳಗೆ ನುಗ್ಗಿ ಬಂತು.

'ಕೇಳಿಸಿತೇ ಆ ಆರ್ತಧ್ವನಿ ಮಹಾರಾಜ? ನಿಮ್ಮ ಒಂದು ಧೈರ್ಯದ ಮಾತು ಅವರ ಹೃದಯಕ್ಕೆ ಶಾಂತಿಯನ್ನು ತರಬಲ್ಲದು. ಏಳಿ ಮಹಾರಾಜ, ಆ ಮಕ್ಕಳಿಗೆ ಧೈರ್ಯದ ಮಾತು ಹೇಳಿ. ರಾಜಕುಮಾರನನ್ನು ಸಂತೈಸಿದಂತೆ ಅವರನ್ನೂ ಸಂತೈಸಿ. ನಿಮ್ಮ ದುಃಖದಲ್ಲಿ ನೀವು ಅವರನ್ನು ಮರೆತಿಲ್ಲವೆಂಬುದು ಅವರಿಗೆ ಮನವರಿಕೆಯಾಗಲಿ. ಪ್ರಜೆಗಳು ಸದಾ ಚಕ್ರವರ್ತಿಗಾಗಿ ಬಲಿದಾನನೀಡಲು ಸಿದ್ಧವಿರುವಂತೆ, ಚಕ್ರವರ್ತಿಗಳು ಸದಾ ಪ್ರಜೆಗಳಿಗಾಗಿ ತನ್ನದೆಲ್ಲವನ್ನೂ ಮರೆಯಲು, ಹೊತ್ತು ಬಂದಾಗ ಬಲಿಕೊಡಲು ಸಿದ್ಧರಾಗಬೇಕು. ಇದು ಚಿತ್ತವಿಕಲತೆಗೆ ಸಮಯವಲ್ಲ, ಹೂವೂ ವಜ್ರವಾಗಬೇಕಾದ ಹೊತ್ತು.'

'ಅಗಲಿದ ಮಡದಿಗಾಗಿ ಕಂಬನಿಗರೆಯಲೂ ಬಿಡುವಿಲ್ಲವೇ ಆಚಾರ್ಯ, ಚಕ್ರವರ್ತಿಗೆ?'

'ಚಕ್ರವರ್ತಿಗೆ, ಚಕ್ರವರ್ತಿ ಕರ್ಮಮಾಡುವುದು ವಿನಾ ಉಳಿದಾವುದಕ್ಕೂ ಬಿಡುವಿಲ್ಲ ಮಹಾರಾಜ.'

'ಇಷ್ಟು ಕಠೋರ ನಿಷ್ಠುರ ವಜ್ರ ಪಂಜರವೇ ಈ ಚಕ್ರವರ್ತಿ ಪದವಿ....?'

'ಅಹುದು ಮಹಾರಾಜ — ಸ್ನೇಹಿತರ, ಆಪ್ತರ ಹೆಣಗಳನ್ನು ತುಳಿದುಕೊಂಡೇ ಕತ್ತಿಹಿರಿದು ಮುಂದೆ ನುಗ್ಗುವ ಸೈನಿಕನಂತೆ, ಚಕ್ರವರ್ತಿ ತನ್ನದೆನ್ನುವುದು ಉರಿದುಬೀಳುತ್ತಿದ್ದರೂ ಲೆಕ್ಕಿಸದೆ ಪ್ರಜಾಹಿತ

ಚಿಂತನೆ ಮಾಡಬೇಕು. ಅಂಗವೊಂದಕ್ಕೆ ಉಗ್ರವ್ಯಾಧಿ ಪ್ರಾಪ್ತವಾಗಿ, ಅದರಿಂದ ದೇಹವೇ ನಷ್ಟವಾಗುವುದೆನ್ನುವ ಹೊತ್ತಿನಲ್ಲಿ, ಆ ಅಂಗ ತನ್ನದೇ ಆದರೂ, ಅದನ್ನು ಕತ್ತರಿಸಿ, ದೇಹರಕ್ಷಣೆ ಮಾಡಿಕೊಳ್ಳುವವನಂತೆ, ಚಕ್ರವರ್ತಿ ರಾಜ್ಯರಕ್ಷಣೆಗಾಗಿ ಸತಿಸುತ ವ್ಯಾಮೋಹವನ್ನೂ ಕತ್ತರಿಸಿ ಚೆಲ್ಲಬೇಕು. ಅಂದು ರಾಜಜ್ಯೋತಿಷಿ ಗೋಲಯಭಟ್ಟರು ಆಡಿದ ಮಾತು ನೆನಪಿರುವುದೇ ಮಹಾರಾಜ?'

'ಯಾವುದು ಆಚಾರ್ಯ?'

'ಬತ್ತಿ ತಾನು ಉರಿದು ಲೋಕಕ್ಕೆ ಬೆಳಕಾಗಬೇಕು—ಎಂದುದು. ಬತ್ತಿ ಹೊತ್ತಿದೆ ಮಹಾರಾಜ. ಈ ಹೊತ್ತಿನಲ್ಲಿ ನೀವು ಅದಕ್ಕೆ ಕರ್ತವ್ಯ ನಿಷ್ಠೆಯ ಗಾಳಿ ಬೀಸದಿದ್ದರೆ ಅದು ಉರಿದು ಕರಿಕಾಗುತ್ತದೆ, ಬೆಳಕಾಗುವುದಿಲ್ಲ. ಏಳಿ—ಬೆಳಕು ಬೆಳಗಲಿ.'

ಗುಣಭದ್ರಾಚಾರ್ಯರು ಹೇಳಿದ ಮಾತನ್ನು ಕೇಳಿ, ಚಕ್ರವರ್ತಿಗಳ ಕಣ್ಣನ್ನು ಕವಿದ ದುಃಖದ ಕಾವಳ ಕಳೆದು, ಬೆಳಕು ಹೊಳೆದಂತಾಯಿತು.

'ನಿಜ ಆಚಾರ್ಯ, ನೀವಾಡಿದುದು ನಿಜ'—ಎಂದರು.

ಚಕ್ರವರ್ತಿಗಳ ಬಾಯಿಂದ ಬಂದ ಆ ಮಾತನ್ನು ಕೇಳಿ, ಗುಣಭದ್ರಾಚಾರ್ಯರು ಸುಮಸ್ಪರ್ಶದಂತೆ ಮೃದುವಾದ ಧ್ವನಿಯಲ್ಲಿ ಹೇಳಿದರು :

'ಸ್ವರ್ಗದಲ್ಲಿರುವ ಮಹಾರಾಜ್ಞಿಯವರ ಆತ್ಮ ತೃಪ್ತವಾಗುವಂತೆ, ಶಾಂತವಾಗುವಂತೆ, ಹೆಮ್ಮೆಪಡುವಂತೆ ಈ ರಾಜ್ಯನೌಕೆಯನ್ನು ನಡೆಸಿ ಮಹಾರಾಜ. ಈ ಮಕ್ಕಳನ್ನು ಕಾಪಾಡುವ ನಿಮ್ಮ ತಾಯಿತನದ ಹಿರಿಮೆಯನ್ನು ಕಂಡು, ಸ್ವರ್ಗದಲ್ಲಿರು ತಾಯಿ ತೃಪ್ತಳಾಗಲಿ ಅಂದವರ ಸಾಮಿಪ್ಯ ತಮಗೆ ಅಮೃತಸೇಚನೆಮಾಡಿದಂತೆ, ಇಂದವರ ನೆನಪು ನಿತ್ಯ ಸ್ಫೂರ್ತಿಯಾಗಲಿ. ಹಾಗಾದಾಗ ಆ ಪುಣ್ಯಜೀವಕ್ಕೂ ಅಮರತ್ವ ಪ್ರಾಪ್ತಿಯಾಗುತ್ತದೆ.'

ಗುಣಭದ್ರಾಚಾರ್ಯರ ಮಾತುಕೇಳಿ ಚಕ್ರವರ್ತಿಗಳು ತಮಗೆ ತಾವೇ ಹೇಳಿಕೊಂಡರು:

'ನಿಜ, ನಿಜ, ಲಕ್ಷ್ಮಾ ನಿನ್ನ ನೆನಪು ನನಗೆ ನಿತ್ಯಸ್ಫೂರ್ತಿ.'

## ೧೩

ಮಹಾರಾಣಿಯವರ ಅಂತ್ಯಕರ್ಮಗಳನ್ನು ಕಾಂಚಿಯಲ್ಲಿ ಮುಗಿಸಿಕೊಂಡು ಹಿಂದಿರುಗಿದರು ಚಕ್ರವರ್ತಿಗಳು—ಎದೆಯಲ್ಲಿ ನೆನಪಿನ ಚಿತಾಗ್ನಿಯನ್ನು ಹೊತ್ತು.

ಆ ಉರಿ ನೆನಪನ್ನು ಮರೆಯಬೇಕೆಂದು ಎಷ್ಟು ಪ್ರಯತ್ನ ಮಾಡಿದರೂ, ಯಾವುದೋ ಮಾತು, ಏನೊ ನಗು, ಯಾರದೋ ನಡಗೆ, ಮತ್ತಾರದೋ ನೋಟ—ಮತ್ತೆ ಮತ್ತೆ ಆ ನೆನಪು ಮರುಕಳಿಸುವಂತೆ ಮಾಡಿ, ಅರಸತಿಯಿಲ್ಲದ ಅಂತಃಪುರದಲ್ಲಿ ಚಕ್ರವರ್ತಿಗಳು ದೇಸಿಗನಂತೆ ಅಲೆಯುವಂತೆ ಮಾಡುವುದು.

ತಾಯನ್ನು ಕಳೆದುಕೊಂಡ ತಬ್ಬಲಿ, ಹಸುಳೆ ಚಂದ್ರಲೆ, ದಾಸಿಯರ ಸ್ತನಪೋಷಣೆಯಲ್ಲಿ ಬೆಳೆವುದನ್ನು ಕಂಡಾಗ 'ನಿನ್ನ ತಾಯಿಯೇನೋ ದೇವತೆಯಾದಳು ಚಂದ್ರ, ನಿನಗೆ ಮಾತ್ರ ಈ ಅನಾಥ ಸ್ಥಿತಿ ಬಂತೇ' ಎಂದು ಕಂಬನಿ ಮಿಡಿಯುವರು. ಆ ಹಸುಗೂಸನ್ನೇ ಎದೆಗೊತ್ತಿಕೊಂಡು, ಅದರ ತಾಯನ್ನು ತಬ್ಬಿದಂತೆ ಭ್ರಮಿಸುವರು. ಅದರ ಮುಗ್ಧ ಮಂದಹಾಸವನ್ನು ಕಂಡು 'ಹೂವು ಅಳಿದು, ಉಳಿದ ಪರಿಮಳ ನೀನು ಚಂದ್ರಾ' ಎಂದು ಚುಂಬಿಸುವರು. ರೂಪದಲ್ಲಿ ತಾಯಿಯನ್ನೇ ಹೋಲುವ ಮಗನನ್ನು ಕಂಡು 'ಇದು ಆ ದೇವತೆ ಜಗತ್ತಿನಿಂದ ತೆರಳುವಾಗ ಹಿಂದೆ ಉಳಿಸಿಹೋದ ಲಾವಣ್ಯದ ಚರಣಚಿಹ್ನೆ' ಎಂದು, ಹಾರುವ ಪುಟ್ಟ ಪತಂಗದಲ್ಲಿ ವಿಶ್ವವ್ಯಾಪಿಯಾದ ಭಗವಂತನನ್ನು ಕಾಣುವ ಯೋಗಿಯಂತೆ, ಮಗನಲ್ಲಿ ತಾಯನ್ನು ಕಾಣುವರು. ಆ ಹೊತ್ತಿನಲ್ಲಿ ಮಕ್ಕಳಿಬ್ಬರಮೇಲೂ ಚಕ್ರವರ್ತಿಗಳ ಮಮತೆ ಉಕ್ಕಿ ಹರಿಯುವುದು. ಬಯಸಿದ ರಾಗವನ್ನು ಮಿಡಿವ ವೀಣೆಯನ್ನು ಎದೆಗಪ್ಪುವ ವೈಣಿಕನಂತೆ, ಬಯಸಿದ ನೆನಪನ್ನು ತರುವ ಮಕ್ಕಳನ್ನು ಆಲಂಗಿಸಿ ಅಶ್ರುಧಾರೆಯನ್ನು ಕರೆಯುವರು.

ಅಂತಃಪುರದಲ್ಲಿ, ಹೋದಲ್ಲಿ ಬಂದಲ್ಲಿ ಮಹಾರಾಣಿಯವರ ಛಾಯೆ ಅವರನ್ನು ಹಿಂಬಾಲಿಸುವುದು. ಜವನಿಕೆಯ ಮರೆಯಲ್ಲಿ, ಹಂಸತೂಲಿಕಾ ತಲ್ಪದ ಮೃದುಸ್ಪರ್ಶದಲ್ಲಿ, ಧೂಪಘಟಗಳ ಧೂಮದ ಪರಿಮಳದಲ್ಲಿ

ರನ್ನಗನ್ನಡಿಯಲ್ಲಿ, ಮೌಕ್ತಿಕಮಾಲೆಯಲ್ಲಿ, ವೀಣಾನಾದದಲ್ಲಿ-ಎಲ್ಲೆಲ್ಲಿಯೂ ಅದೇ ನೆನಪು.

ಇದ್ದಾಗ ಒಂದೆಡೆಯಲ್ಲಿ ಮಾತ್ರ ಕಾಣುತ್ತಿದ್ದು, ಈಗ ಇಲ್ಲವೆಂದು ಕೊಳ್ಳುವಾಗ, ಎಲ್ಲೆಲ್ಲಿಯೂ ವ್ಯಾಪಿಸಿರುವ ಆ ಮೋಹದ ಮೂರ್ತಿಯನ್ನು ಕರೆದು 'ಲಕ್ಷ್ಮೀ, ಲಕ್ಷ್ಮೀ, ಲಕ್ಷ್ಮೀ' ಎಂದು ಹಂಬಲಿಸಿ ಗಾಳಿಯನ್ನೇ ತಬ್ಬಿ ನಿಡುಸುಯ್ಯುವರು, ಕಣ್ಣುಗಳೆರಡೂ ನೆನಸಿನ ಉರಿಹೊತ್ತಿ ಚಿತೆ ಯಂತೆ ಉರಿಯುತ್ತಿರಲು.

ಹೀಗಾಗಿ ಅವರ ಬಾಳು ಮಡಿದ ಮಡದಿಯ ನೆನಪಿನ ನಿತ್ಯಾರಾಧನೆ ಯಾಯಿತು; ರಾಜ್ಯಭಾರವೂ ಆ ನಿತ್ಯವಾದ ನೆನಪಿನ ಉಪಾಸನೆ ಯಾಯಿತು.

ಹೀಗೇ—ದಿನಗಳು, ಮಾಸಗಳು, ಸಂವತ್ಸರಗಳು ಉರುಳಿದವು. ತೊಟ್ಟಿಲಲ್ಲಿ ನಗುವ ಚಂದ್ರಲೆ ಎದ್ದು ಅಂಬೆಗಾಲಿಟ್ಟು, ತೊದಲು ನುಡಿದು, ದೃಢವಾಗಿ ನಿಲ್ಲದ ಕಾಲಮೇಲೆ ನಿಂತು ನಡೆಯಲು ಯತ್ನಿಸಿ, ಕಾಲಚಕ್ರ ಸುತ್ತುವುದನ್ನು ತೋರದಿದ್ದರೆ, ಚಕ್ರವರ್ತಿಗಳಿಗೆ ಅದರ ಅರಿವೂ ಆಗು ತ್ತಿತ್ತೋ ಇಲ್ಲವೋ. ಇಂದು ಚಂದ್ರಲೆ ಹಸುಗೂಸಲ್ಲ, ನಾಲ್ಕುವರ್ಷದ ನಲ್ಗುವರಿ; ಕೃಷ್ಣ ಬಾಲಕನಲ್ಲ, ಯೌವರಾಜ್ಯಾಭಿಷೇಕಕ್ಕೆ ಅಣಿಯಾಗಿ ನಿಂತ ಹದಿನಾರುವರ್ಷದ ಯುವಕ.

'ಕೃಷ್ಣನಿಗೆ ಯೌವರಾಜ್ಯಾಭಿಷೇಕ ಮಾಡಿಸಬೇಕು' ಎಂದು ಸಚಿವರೊಂದಿಗೆ, ಆಚಾರ್ಯರೊಂದಿಗೆ ಚಕ್ರವರ್ತಿಗಳು ಪ್ರಸ್ತಾಪಿಸುತ್ತಿರು ವಾಗಲೇ, ಭರುಕಚ್ಛದತ್ತ ಮಿಹಿರಭೋಜನ ಸೇನೆ ಬಾಳಿಮಾಡಿದ ಸುದ್ದಿ ಬಂತು ಸೌರಾಷ್ಟ್ರದಿಂದ.

ಸೌರಾಷ್ಟ್ರದಮೇಲಾದ ದಾಳಿ, ರಾಷ್ಟ್ರಕೂಟ ರಾಜ್ಯದಮೇಲೆ ದಾಳಿ ಮಾಡಲು ಮೊದಲ ಹೆಜ್ಜೆ.

ಆ ಸುದ್ದಿ ಕೇಳಿ, ನಿದ್ರೆಯಲ್ಲಿದ್ದವನು ಸಿಡಿಲ ಸಪ್ಪಳ ಕೇಳಿ ಎಚ್ಚರಾ ಗುವಂತೆ ಎಚ್ಚೆತ್ತರು ಚಕ್ರವರ್ತಿಗಳು—ಕಣ್ಣನ್ನು ಕವಿದ ಮೋಹಕಾವಳದ ಮುಬ್ಬಿನಿಂದ.

ರಾಷ್ಟ್ರಕೂಟ ರಾಜ್ಯ ಸೌರಾಷ್ಟ್ರದ ರಾಷ್ಟ್ರಕೂಟಮನೆತನಕ್ಕೆ ಬಹು ಋಣಿಯಾಗಿತ್ತು. ನೃಪತಂಗ ಚಕ್ರವರ್ತಿಗಳನ್ನು, ಅವರ ಬಾಲ್ಯಕಾಲದ ಬಂಡಾಯಗಳ ಪಿಡುಗಿನಿಂದ ಕಾಪಾಡಿದ ಕರ್ಕ ಸುವರ್ಣವರ್ಷರ ಸಿಂಹಾಸನ, ಮೇಲಿಂದ ಮೇಲೆ ದಾಳಿಮಾಡಲೆಳಸುವ ಪ್ರತೀಹಾರ ವೈರಿಗಳ ದಾಳಿಯನ್ನು ಬಾರಿಬಾರಿಯೂ ತಡೆದು, ತಾನು ಜರ್ಝರಿತವಾದರೂ, ತಾನು ಬೇಟೆಗಾರರ ಬಾಣಾಹತಿಯಿಂದ ಬಸವಳಿದರೂ ಹಕ್ಕೆಯನ್ನು ಕಾಯುವ ತಾಯಿಹುಲಿಯಂತೆ, ಮಾನ್ಯಖೇಟವನ್ನು ಕಾಪಾಡಿತ್ತು. ಈ ಸಹಾಯದ ಕುರುಹಾಗಿಯೇ ಧ್ರುವರಾಜ 'ಉತ್ತರದ್ವಾರದ ಲಾಳಮುಂಡಿಗೆ' ಎಂಬ ಮೆಚ್ಚಿನ ಬಿರುದು ಪಡೆದಿದ್ದ. ಎಂತಹ ಹೊತ್ತಿನಲ್ಲೂ ಮಾನ್ಯಖೇಟದ ಸಿಂಹಾಸನಕ್ಕೆ ತಾನು ಸಲಿಸುವ ನಿಷ್ಠೆಯನ್ನುಕಾಯ್ದುಕೊಂಡ ಭರುಕಚ್ಛದ ಸೋದರರಮೇಲೆ ಮಿಹಿರಭೋಜ ದಾಳಿಮಾಡಿದುದನ್ನು ಕೇಳಿ ಚಕ್ರವರ್ತಿಗಳು, ಕೆಣಕಿದ ಹುಲಿಯಂತೆ ಕೆರಳಿ ನಿಂತರು. ಆ ಸುದ್ದಿ ಬಂದ ದಿನವೇ ನಾಡ ಮೂಲೆಮೂಲೆಗೂ ಸೇನೆಗಳನ್ನು ಕಳಿಸಲು ಅಪ್ಪಣೆ ಹೋಯಿತು. ನಾಡಿನ ಹತ್ತು ಕಡೆಯಿಂದಲೂ ಸೇನೆ ಸಂಗ್ರಹವಾಯಿತು—ಗಂಗರಾಜ್ಯದ ಗಡಿಯ ಬಳಿಯ ಕಾವಲುಸೇನೆಯನ್ನು ಉಳಿದು. ರಾಜಧಾನಿ ದಿನದಿನಕ್ಕೆ ಬಂದು ನೆರೆದ ಸೇನಾಪಡೆಗಳ ಗದ್ದಲದಿಂದ ವರ್ಷಋತುವಿನ ಕಡಲಿನಂತೆ ರುದ್ರ ಮನೋಹರವಾಗಿ ರಂಜಿಸಿತು.

ಈ ಅಪಾರ ಸೇನೆಗೆ ತಕ್ಕ ಸೇನಾಧಿಪತಿಯನ್ನು ಆರಿಸುವ ಹೊಣೆಗಾರಿಕೆ ಚಕ್ರವರ್ತಿಗಳದು. ಬನವಾಸಿಯ ಮಹಾಮಂಡಲೇಶ್ವರರಾದ ಬಂಕಸರು ಇದ್ದಿದ್ದರೆ ಯಾರನ್ನು ಆರಿಸಬೇಕೆಂಬ ಪ್ರಶ್ನೆಯೇ ಇರುತ್ತಿರಲಿಲ್ಲ. ಆದರೆ ದಕ್ಷಿಣದ ಕಾವಲ ಹೊಣೆ ಹೊತ್ತ ಅವರು ಅಲ್ಲಿಂದ ಕದಲುವಂತಿರಲಿಲ್ಲವಾದುದರಿಂದ, ಉಳಿದವರಲ್ಲಿ ಯಾರನ್ನು ಆ ಜವಾಬದಾರಿಯ ಸ್ಥಾನಕ್ಕೆ ನೇಮಿಸಬೇಕೆಂಬ ಬಗ್ಗೆ ಅಮಾತ್ಯಮಂಡಲಿಯಲ್ಲೇ ಒಮ್ಮತವಿಲ್ಲದಾದುದರಿಂದ, ಎಲ್ಲರೂ ಸೇರಿ ಆ ಹೊಣೆಯನ್ನು ಚಕ್ರವರ್ತಿಗಳಿಗೇ ಬಿಟ್ಟರು. ಚಕ್ರವರ್ತಿಗಳಿಗೂ ಅದು ಕ್ಲಿಷ್ಟವಾದ ಸಮಸ್ಯೆಯಾಯಿತು.

ಬಂದವರೆಲ್ಲರೂ ಘಟಾನುಘಟಿಗಳೇ—ಬಂಕರಸರ ಪ್ರತಿನಿಧಿಯಾಗಿ ಅವರ ಮಗ ಲೋಕಾದಿತ್ಯ, ವೆಂಗಿಯರಸರು ಕಳಿಸಿದ ಪಡೆಯ ನಾಯಕ

ನಾದ ಪಾಂಡುರಂಗ, ಪುರಿಯ ಶಿಲಾಹಾರ ಕಪರ್ದಿಯ ಪಡೆಯ ವಿಷ್ಣು, ತಗರದ ಆದಿತ್ಯವರ್ಮರ ದಂಡನಾಯಕ ದುರ್ಗಾದಿತ್ಯ, ಅನುಮ ಕೊಂಡದ ಚಾಲುಕ್ಯ ಭೀಮ, ಚೇದಿಯವರ ಪಡೆಯ ದಂಡನಾಯಕ ನಾಗಿ ಬಂದ ಶಂಕರಗಣ, ನೊಳಂಬಬಲದ ನಾಯಕ ಮಂಗಿ—ಒಬ್ಬೊಬ್ಬರೂ ಹಲವಾರು ಯುದ್ಧಗಳಲ್ಲಿ ನುರಿತ ಸಮರಪಟುಗಳು, ರಣಶಾಸ್ತ್ರ ವಿದರು. ಇವರಲ್ಲಿ ಯಾರನ್ನು ಆರಿಸಬೇಕು?

ಅಲ್ಲದೆ, ಇವರಲ್ಲಿ ಯಾರೊಬ್ಬರನ್ನು ಆರಿಸಿ ಸೇನಾಧಿಪತ್ಯ ಕಟ್ಟಿದರೂ ಉಳಿದವರಿಗೆ ಅಸಮಾಧಾನ–ತಮ್ಮ ಸೀಮೆಗೆ ಆ ಮರ್ಯಾದೆ ಸಲ್ಲಲಿಲ್ಲವೆಂದು. ಹಲವಾರು ದಂಡುಗಳ ನಾಯಕರಲ್ಲೇ ಪರಸ್ಪರ ಅಸೂಯೆ, ವೈಷಮ್ಯ ಮೂಡಿದರೆ, ಸಮರಾಂಗಣದಲ್ಲಿ ಈ ಒಳಜಗಳ ವಿಪತ್ಕಾರಕವಾಗಬಹುದು.

ಯಾರಿಗೂ ಅಸಮಾಧಾನವಾಗದೆ, ಯಾರ ವಿಷಯದಲ್ಲೂ ಚಕ್ರವರ್ತಿಗಳು ಪಕ್ಷಪಾತ ತೋರಿಸಿದರು ಎನ್ನುವಂತಾಗದೆ, ಎಲ್ಲರಿಗೂ ತೃಪ್ತಿಕರವಾಗುವಂತೆ ಇತ್ಯರ್ಥವಾಗಬೇಕು. ಆದರೆ ಹೇಗೆ ಮಾಡುವುದು? ಅವರೇ ಇವರೇ ಎಂದು ಡೋಲಾಯಮಾನವಾಗಿತ್ತು ಚಕ್ರವರ್ತಿಗಳ ಚಿತ್ತ.

ಪಡೆಪಡೆಯಲ್ಲೂ ಇದು ಪಂದ್ಯದ ಮಾತಾಗಿತ್ತು. ಆ ಪಟ್ಟ ನಮಗೇ ಸರಿ, ನಾವು ಬಿಟ್ಟರೆ ಬೇರೆ ಯಾರು ಎಂಬ ಪೌರುಷದ, ಸ್ವಪ್ರಶಂಸೆಯ ಮಾತುಗಳು ಅಲ್ಲಲ್ಲಿ ಕೇಳಿಬರುತ್ತಿತ್ತು. ಒಂದೆರಡು ಬಾರಿ ಸಣ್ಣಪುಟ್ಟ ಘರ್ಷಣೆಗಳ ಸುದ್ದಿಯೂ ಬಂದು, ಈ ಸಮಸ್ಯೆಯನ್ನು ಬೇಗ ಇತ್ಯರ್ಥ ಮಾಡದೆ ಹೋದರೆ, ಪರಿಸ್ಥಿತಿ ಪ್ರಕೋಪಕ್ಕೆ ಹೋಗಬಹುದು ಎನಿಸಿತು.

ಚಕ್ರವರ್ತಿಗಳು ಈ ಸಂದಿಗ್ಧದಲ್ಲಿ ತೊಳಲುತ್ತಿರುವಾಗ, ಚಕ್ರವರ್ತಿಗಳ ಪ್ರಾರ್ಥನೆಯನ್ನು ಮನ್ನಿಸಿ ಗುಣಭದ್ರಾಚಾರ್ಯರು ಚಕ್ರವರ್ತಿಗಳಿಗೆ ದಾರಿತೋರಿದರು.

‘ ಮಹಾರಾಜ, ಭರತೋಕ್ತ ರಾಜನೀತಿಯಪ್ರಕಾರ ಸೇನಾಧಿಪತಿಯನ್ನು ಆರಿಸಲು ಮಾರ್ಗವೊಂದಿರುವುದು, ಅದನ್ನು ಅನುಸರಿಸಿ. ಅದು

ರಿಂದ ಸಂದಿಗ್ಧ ನಿವಾರಣೆಯಾಗುವುದಲ್ಲದೆ, ಯಾರ ಮನಸಿಗೂ ಬೇಸರ ವಾಗದಂತೆ ಸೂಕ್ತ ಸೇನಾಧಿಪತಿಯನ್ನು ಆರಿಸಿದ ಹಾಗೂ ಆಗುವುದು.'

'ಅದಾವ ವಿಧಾನ ಆಚಾರ್ಯ?'

'ಓಲಗಸಾಲೆಯ ಮುಂದಿನ ಅಂಗಳದ ನಡುವೆ ಅಷ್ಟು ಅಗಲಕ್ಕೆ ಸಸಿಗಳನ್ನು ನೆಡಿಸಿ, ನೀರು ಹಾಕಿಸಿ. ಅದರ ಇಬ್ಬದಿಯಲ್ಲೂ ಕಿರಿದಾದ ಮಾರ್ಗವನ್ನು ಬಿಟ್ಟು, ಆ ಮಾರ್ಗದ ಮೂಲಕವೇ ಸೇನಾಧಿಪತ್ಯ ಪಡೆ ಯಲಿಚ್ಛಿಸುವವರು ನಡೆಯಬೇಕೆಂದು ಅಪ್ಪಣೆಕೊಡಿ. ಯಾರು ಕಿರಿದಾದ ಆ ಮಾರ್ಗದಲ್ಲಿ ಸಸಿಗಳನ್ನು ತುಳಿಯದೆ ಬರುವರೋ ಅವರನ್ನು ಆರಿಸಿ.'

'ಈ ಪರೀಕ್ಷೆಯಿಂದ ಪದಲಾಘವದ ಪರೀಕ್ಷೆಯಾಗಬಹುದೇ ಹೊರತು, ಅವರ ಸಂಗ್ರಾಮನಿರ್ವಹಣಸಾಮರ್ಥ್ಯ ಗೊತ್ತಾಗುವುದೇ ಆಚಾರ್ಯ?'

'ಹಾಗಲ್ಲ ಮಹಾರಾಜ. ಈ ಸಸಿನಾಟಿದ ಭೂಮಿ ಪ್ರಜಾಕೋಟಿಗೆ ಸಂಕೇತ. ಸೇನೆ ನಡೆವಾಗ ಮಾರ್ಗದ ಇಬ್ಬದಿಯ ಜನಕ್ಕೆ ತೊಂದರೆ ಯಾಗಬಹುದು. ಅದು ಅನಗತ್ಯ. ಸೇನೆ ಹೊರಡುವುದು ಶತ್ರು ಸಂಹಾರಕ್ಕೆ ವಿನಾ ಪ್ರಜಾಪೀಡನೆಗಲ್ಲ. ಈ ಅರಿವಿದ್ದವನು ಪ್ರಜಾಪೀಡಕ ನಾಗುವುದಿಲ್ಲ; ಸೇನೆಗೂ ಪ್ರಿಯನಾಗಿ, ಶತ್ರು ಸಂಹಾರ ಕಾರ್ಯದಲ್ಲಿ ದಕ್ಷನಾಗುತ್ತಾನೆ. ಆದ್ದರಿಂದ ಹೀಗೆ ಮಾಡಿ. ಇದರ ಪರಿಣಾಮ ನಿಮಗೆ ಸೂಕ್ತವೆಂದು ಕಂಡುಬರದೆ ಹೋದರೆ, ಆಗ ಬೇರೆ ದಾರಿ' ಎಂದರು. ಚಕ್ರವರ್ತಿಗಳಿಗೂ ಆಚಾರ್ಯರ ಮಾತು ಒಪ್ಪಿಗೆಯಾಯಿತು.

ಅದರಂತೆಯೇ ಓಲಗಸಾಲೆಯ ಇದಿರು ಸಸಿಹಾಕಿಸಿ, ಸೇನಾಧಿ ಪತ್ಯಕ್ಕೆ ಯೋಗ್ಯರಾದವರೆಲ್ಲರಿಗೂ, ಅಂದು ಓಲಗಸಾಲೆಯಲ್ಲಿ ನೆರೆದ ಆಪ್ತಸಭೆಗೆ ಬರಬೇಕೆಂದು ಹೇಳಿ ಕರೆಕಳುಹಿಸಿದರು. ಸಚಿವಮಂಡಲಿ ಯಿಂದೊಡಗೂಡಿದ ಚಕ್ರವರ್ತಿಗಳು ರಾಜಕುಮಾರ ಕೃಷ್ಣನೊಂದಿಗೆ ಸಭೆಗೆ ಬಂದರು. ಒಬ್ಬೊಬ್ಬರೂ ಅವರವರಿಗೆ ಉಚಿತವಾದ ಆಸನದಲ್ಲಿ ಕುಳಿತಿದ್ದರು. ಸಿಂಹಾಸನದ ಇಬ್ಬದಿಯಲ್ಲಿದ್ದ ಮಯೂರಾಸನ ಒಂದ ರಲ್ಲಿ ಪ್ರಧಾನ ಸಚಿವರಿದ್ದರು. ಇನ್ನೊಂದು ತೆರವಾಗಿತ್ತು. ರಾಜ ಕುಮಾರ ಕೃಷ್ಣ ತಂದೆಯ ಬಳಿಯ ಆ ಆಸನದಲ್ಲಿ ಕುಳಿತುಕೊಳ್ಳಲು

ಹೋದಾಗ, ಆಸ್ಥಾನ ಕರಣಿಕರು 'ಅದು ಯುವರಾಜ ಪೀಠ. ರಾಜಕುಮಾರರಿಗೆ ಯುವರಾಜ್ಯಾಭಿಷೇಕವಾದಮೇಲೆ ಅದರಲ್ಲಿ ಮಂಡಿಸಬಹುದು' ಎಂದು ವಿನಯದಿಂದ ಹೇಳಿ, ರಾಜಕುಮಾರರಿಗಾಗಿ ಸಿದ್ಧಪಡಿಸಿದ ಭದ್ರಾಸನವನ್ನು ತೋರಿದರು.

ನೆರೆದ ಸಭೆಯಲ್ಲಿ ತನಗಾದ ಈ ಅಪಮಾನವನ್ನು ಕಂಡು ರಾಜಕುಮಾರನ ಮುಖ ಕ್ರೋಧದಿಂದ ಕೆಂಪೇರಿತು.

'ಇತರರಿಗೆ ಅವರ ಸ್ಥಾನವನ್ನು ತೋರಿಸುವ ಆಸ್ಥಾನ ಕರಣಿಕರಿಗೆ ತಮ್ಮ ಸ್ಥಾನದ ಅರಿವಿರಬೇಕು. ಎಚ್ಚರದಿಂದ ಮಾತಾಡಿ. ಇಲ್ಲವಾದರೆ....'

ಎಂದು ಸೊಂಟದಲ್ಲಿದ್ದ ಕಠಾರಿಯಮೇಲೆ ಕೈಯಿಟ್ಟು, ಕಾಲಪ್ಪಳಿಸಿ ಹೇಳಿದ ರಾಜಕುಮಾರ.

ತಮ್ಮ ಕರ್ತವ್ಯವನ್ನು ಪಾಲಿಸಿದ ಆಸ್ಥಾನ ಕರಣಿಕರು, ರಾಜಕುಮಾರನ ಸಿಟ್ಟಿನ ಮಾತು ಕೇಳಿ ಬೆದರಿನಿಂತರು. ಸಚಿವರಿಗೂ ಏನು ಹೇಳಬೇಕೆಂದು ತೋಚಲಿಲ್ಲ ಆ ಹೊತ್ತಿನಲ್ಲಿ. ಆ ಅನಿರೀಕ್ಷಿತ ಘಟನೆಯಿಂದ ಮೂಕರಾದ ಎಲ್ಲರೂ ಚಕ್ರವರ್ತಿಗಳ ಮೊಗವನ್ನು ಈಕ್ಷಿಸಿದರು. ಚಕ್ರವರ್ತಿಗಳು ಕ್ರೋಧದಿಂದ ಹೆಡೆತಳೆದ ಸರ್ಪದಂತೆ ಸಿಡಿದು ನಿಂತ ಮಗನನ್ನು, ಭಯದಿಂದ ನಡುಗುತ್ತ ನಿಂತ ಆಸ್ಥಾನ ಕರಣಿಕರನ್ನೂ ನೋಡಿದರು. ಒಂದುಗಳಿಗೆ ಅವರ ಮನಸ್ಸು ಹೊಯ್ದಾಡಿತು. ಮರುಗಳಿಗೆಯೇ ನಿಶ್ಚಲವಾಗಿ ಹೇಳಿದರು—

'ರಾಜಕುಮಾರರು ಆಸ್ಥಾನ ಕರಣಿಕರ ಮಾತನ್ನು ಉಲ್ಲಂಘಿಸಲಾಗದು. ಸಭೆ, ಸಭಾಗೌರವವನ್ನು ರಕ್ಷಿಸುವಂತೆ ಕಾಪಾಡುವ ಕಾರ್ಯ ಅವರದು. ನಿಮಗಾಗಿ ಮೀಸಲಾಗಿರುವ ಸ್ಥಾನದಲ್ಲಿ ಕುಳಿತುಕೊಳ್ಳಿ.'

ಚಕ್ರವರ್ತಿಗಳು, ಈ ಅನಿರೀಕ್ಷಿತ ಪ್ರಕರಣದಲ್ಲಿ ಏನು ಹೇಳುವರೋ ಎಂದು ಕಾತರರಾಗಿದ್ದ ಸಚಿವಮಂಡಲಿ, ಅವರಾಡಿದ ಮಾತನ್ನು ಕೇಳಿ ಚಕಿತವಾಯಿತು. ತಂದೆಯಾಡಿದ ಮಾತು ರಾಜಕುಮಾರನಿಗೆ ಕಶಾಪ್ರಹಾರದಂತಿತ್ತು. ರಾಜಕುಮಾರನ ಇದಿರು ಆಸ್ಥಾನ ಕರಣಿಕರ ಮಾತಿಗೆ ಮನ್ನಣೆಯೇ? ಆ ನೋವು, ಸಿಟ್ಟುಗಳಲ್ಲಿಯೇ ತುಯ್ದಾಡುತ್ತಾ ರಾಜಕುಮಾರ—

'ಅಪ್ಪಾಜಿ....' ಎಂದ.

'ಚಕ್ರವರ್ತಿಗಳಾಡಿದ ಮಾತಿಗೆ ಇದಿರಾಡುವುದು ಸಭಾ ಸಂಪ್ರದಾಯವಲ್ಲ. ರಾಜಕುಮಾರರಿಗೆ ಸಭಾ ಸಂಪ್ರದಾಯವನ್ನು ಪಾಲಿಸಲು ಇಚ್ಛೆ ಇಲ್ಲದಿದ್ದರೆ ಇಲ್ಲಿಂದ ತೆರಳಬಹುದು.'

ಆಡಲಾಗದ ಮಾತನ್ನು ಆಡಲೇಬೇಕಾಗಿ ಬಂದು ಹೇಳಿದರು ಚಕ್ರವರ್ತಿಗಳು. ಅವರ ಮಾತುಕೇಳಿ ರಾಜಕುಮಾರನ ಮುಖಕ್ಕೆ ಘಟ್ಟಿಸಿದಂತಾಯಿತು. ಅಪಮಾನ ದುಃಖವಾಗಿ ಉಮ್ಮಳಿಸಿ, ಗಂಟಲನರವನ್ನು ಒತ್ತಿಬಂತು. ಹಾಗೇ ಕೇಳಿದ—

'ಇದು ನನಗೆ ಅಪ್ಪಣೆಯೋ ಅಪ್ಪಾಜಿ?'

'ಅಪ್ಪಾಜಿಯವರದಲ್ಲ, ಚಕ್ರವರ್ತಿಗಳದು. ರಾಜಕುಮಾರರು ಆಸ್ಥಾನ ಕರಣಿಕರ ವ್ಯವಸ್ಥೆಗೆ ಮನ್ನಣೆ ಕೊಡುವುದಾದರೆ ಓಲಗದಲ್ಲಿ ಇರಬಹುದು. ಇಲ್ಲವಾದರೆ ತೆರಳಬಹುದು.'

ಹೃದಯದಲ್ಲಾಗುತ್ತಿದ್ದ ಹೋರಾಟವನ್ನು ಧ್ವನಿಯಲ್ಲಿ ಕೊಂಚವೂ ತೋರಗೊಡದೆ ಖಚಿತವಾದ ಧ್ವನಿಯಲ್ಲಿ ಹೇಳಿದರು ಚಕ್ರವರ್ತಿಗಳು.

'ರಾಜಕುಮಾರರಿಗಿಂತ ಆಸ್ಥಾನ ಕರಣಿಕರ ವ್ಯವಸ್ಥೆ ಹೆಚ್ಚಿನದೆ ಅಪ್ಪಾಜಿ?'

'ರಾಜಕುಮಾರರ ಸಮಸ್ಯೆಯನ್ನು ಬಗೆಹರಿಸಲು ನಾವು ಓಲಗವನ್ನು ಕರೆದಿಲ್ಲ. ಕಡೆಯಬಾರಿಗೆ ಹೇಳುತ್ತೇವೆ—ಹೆಚ್ಚು ಮಾತನಾಡುವುದು ದಂಡಾರ್ಹವಾದ ಅಪರಾಧವಾಗುತ್ತದೆ. ರಾಜಕುಮಾರರು ಅದಕ್ಕೆ ಅವಕಾಶಕೊಡದಿರುವುದು ಮೇಲು.'

—ತಮಗೂ ರಾಜಕುಮಾರನಿಗೂ ಯಾವ ಸಂಬಂಧವೂ ಇಲ್ಲವೆಂಬಂತೆ ಹೇಳಿದರು ಚಕ್ರವರ್ತಿಗಳು. ಅವರ ಮಾತು ಉಕ್ಕಿನೆಳೆಯಂತಿತ್ತು. ಮುಖ ವಿವರ್ಣವಾಗಿತ್ತು. ದಟ್ಟವಾದ ಹುಬ್ಬುಗಳಡಿಯಲ್ಲಿ ಸದಾ ಪ್ರಶಾಂತವಾಗಿರುತ್ತಿದ್ದ ಕಣ್ಣುಗಳು ಇಂದು ತೀಕ್ಷ್ಣವಾಗಿ ರಾಜಕುಮಾರನ ಕ್ರೋಧೋದ್ದೀಪಿತ ಮೊಗವನ್ನೇ ನೋಡುತ್ತಿದ್ದವು.

ರಾಜಕುಮಾರ ಕೃಷ್ಣ ಚಕ್ರವರ್ತಿಗಳ ಮಾತನ್ನು ಕೇಳಿ, ತಲೆಬಾಗಿಸಿ ಸಿಂಹಾಸನಕ್ಕೆ ವಂದಿಸಿದವನೇ ಅಲ್ಲಿ ನಿಲ್ಲದೆ, ಓಲಗದಿಂದ

ಹೊರಟುಹೋದ–ಬಿರುಗಾಳಿಯಂತೆ.

ಸಭೆ, ಸಭಿಕರ ಉಸಿರಸದ್ದೂ ಕೇಳಿಸುವಷ್ಟು ಸ್ತಬ್ಧವಾಗಿತ್ತು.

ಯಾರೂ ಊಹಿಸದ ಈ ಅನಿರೀಕ್ಷಿತ ಕಹಿ ಪ್ರಸಂಗ ಎಲ್ಲರ ಹೃದಯದಲ್ಲೂ ಮಂಕುಬೆರೆತ ಭೀತಿಯನ್ನು ಕವಿಸಿತ್ತು. ಮಾತನಾಡುವು ದಿರಲಿ, ಯಾರಿಗೂ ಗಟ್ಟಿಯಾಗಿ ಉಸಿರಾಡುವಷ್ಟು ಧೈರ್ಯವೂ ಉಳಿ ದಿರಲಿಲ್ಲ. ಈ ಪ್ರಸಂಗಕ್ಕೆ ಕಾರಣರಾದ ಆಸ್ಥಾನ ಕರಣಿಕರೇ, ಸಿಂಹಾಸ ನದ ಮುಂದೆ ಮೊಳಕಾಲು ಊರಿ, ಚಕ್ರವರ್ತಿಗಳತ್ತ ಮೊಗವೆತ್ತಿ ನೋಡಲೂ ಸಾಧ್ಯವಾಗದೆ—

'ಮಹಾಪ್ರಭು, ಸೇವಕನ ಅಪರಾಧವನ್ನು ಮನ್ನಿಸಬೇಕು.'— ಎಂದರು ಬಾಡಿದ ಧ್ವನಿಯಲ್ಲಿ.

'ಅವರವರಿಗೆ ವಿಧಿಸಿದ ಕರ್ತವ್ಯವನ್ನು ಅವರವರು ಮಾಡುವುದು ಅಪರಾಧವಲ್ಲ. ನಿಮ್ಮ ಕರ್ತವ್ಯವನ್ನು ನೀವು ಪಾಲಿಸಿದುದಕ್ಕಾಗಿ ಅಭಿನಂದನೆಗಳು–ಸಭೆಯ ಮುಂದಿನ ಕಾರ್ಯ ಸಾಗಲಿ.'

—ಎಂದರು ಚಕ್ರವರ್ತಿಗಳು, ನೀರಸಕಠೋರವಾದ ಧ್ವನಿಯಲ್ಲಿ.

ಒಬ್ಬೊಬ್ಬರಾಗಿ–ಬಾಗಿಲ ಬಳಿಯ ಭಟನು ರಾಗನಾಗಿ, ಬಿರುದು ಬಾವಲಿಗಳನ್ನು ವಿವರಿಸಿ ಹೆಸರು ಹಿಡಿದು ಕೂಗಿದಾಗ, ಒಬ್ಬೊಬ್ಬರಾಗಿ, ಕರೆಬಂದ ದಳಪತಿಗಳು ಓಲಗಸಾಲೆಯ ಅಂಗಳವನ್ನು ಪ್ರವೇಶಿಸಿದರು. ಚಕ್ರವರ್ತಿಗಳ ಕಣ್ಣು ಅವರ ಕಾಲನ್ನೇ ನೋಡುತ್ತಿತ್ತು. ಅವರೆಲ್ಲರಿಗೂ, ಓಲಗಸಾಲೆಯ ಅಂಗಳದಲ್ಲಿ ಬೆಳೆದ ಸಸ್ಯದ ಮಡಿಗಳನ್ನು ಕಂಡು ಆಶ್ಚರ್ಯವಾಯಿತು. ಆದರೆ ಯಾರೂ ಅದಕ್ಕೆ ವಿಶೇಷ ಮಹತ್ವ ಕೊಡಲಿಲ್ಲ. ಕೆಲವರು, ಅದರ ಅಂಚಿನಲ್ಲಿ, ದಂಡೆಯ ಸಸಿಗಳನ್ನು ತುಳಿದುಬಂದರೆ, ಕೆಲವರು ಮಡಿಯಲ್ಲೇ ನಡೆದು ಬಂದರು. ಮಡಿಯ ಬದುವಿನಮೇಲೆ ಬಿಟ್ಟ ಕಿರುದಾರಿಯಲ್ಲಿ ಎಚ್ಚರವಾಗಿ ನಡೆದು ಬಂದವನು ಬಂಕರಸರ ಮಗ ಲೋಕಾದಿತ್ಯ.

ಲೋಕಾದಿತ್ಯ ರಾಜಕುಮಾರರ ಸಹಪಾಠಿ, ಅವರಿಗಿಂತ ವಯಸ್ಸಿ ನಲ್ಲಿ ಎರಡು ವರ್ಷ ಹಿರಿಯ. ಆತನ ಮನೋಧರ್ಮವನ್ನು ಕಂಡು ಚಕ್ರವರ್ತಿಗಳಿಗೆ ಮೆಚ್ಚಿಕೆಯಾಯಿತು.

'ಬಂಕರಸರ ಮಕ್ಕಳು, ಅಂಗಳದಲ್ಲಿ ನಡೆದಾಗ ಹೆದಹೆದರಿ ನಡೆದುದೇಕೆ?'

— ಎಂದು ಕೇಳಿದರು ಚಕ್ರವರ್ತಿಗಳು, ಅಂದಿನ ತೀರ್ಮಾನಕ್ಕೂ ಅದಕ್ಕೂ ಏನೂ ಸಂಬಂಧವಿಲ್ಲವೆಂಬಂತೆ.

'ಪ್ರಭುಗಳು ಕ್ಷಮಿಸಬೇಕು. ಸಸ್ಯದ ಮಡಿಗಳ ನಡುವಿನ ಕಿರುದಾರಿಯಲ್ಲಿ ವೇಗವಾಗಿ ನಡೆವುದಾಗಲಿಲ್ಲ. ಎಚ್ಚರವಾಗಿರದಿದ್ದರೆ ಸಸಿಗಳು ಕಾಲತುಳಿತಕ್ಕೆ ಸಿಕ್ಕು ಹಾಳಾಗುತ್ತಿದ್ದವು.'

'ಸಸಿಗಳ ಮೇಲೆ ಅಷ್ಟು ಪ್ರೀತಿಯೇ?'

'ಪ್ರೀತಿಯಲ್ಲ ಪ್ರಭು, ಗೌರವ.'

'ಏಕೆ?'

'ಅವು ಬರಿಯ ಸಸಿಗಳಲ್ಲ ಪ್ರಭು, ಅನ್ನ ನೀಡುವ ಸಸ್ಯಮಾತೆ; ಜಗತ್ತನ್ನು ಪೋಷಿಸುವ ಆಹಾರವನ್ನು ಗರ್ಭದಲ್ಲಿ ಧರಿಸಿದ ಲೋಕಜನನಿ. ಆದ್ದರಿಂದ.'

'ಸೈನಿಕರಿಗೂ, ಕೃಷೀವಲರಂತೆ ಅದರ ಮೇಲೆ ಅಷ್ಟು ಭಕ್ತಿಯೇ?'

'ಕೃಷೀವಲನೇ ಜಗತ್ತಿನಲ್ಲಿ ಪರಮಪೂಜ್ಯನೆಂದು ಆಚಾರ್ಯರು ಅಪ್ಪಣೆ ಕೊಡಿಸಿದಾರೆ ಪ್ರಭು. ಅವನ ಮುಂದೆ ಸೈನಿಕ–ಕ್ಷುಲ್ಲಕ ವಸ್ತು.'

'ಹೇಗೆ? ಅಲ್ಲದೆ ಸ್ವಯಂ ಸೈನಿಕರಾಗಿರುವವರೇ ಹಾಗೆ ಹೇಳಬಹುದೇ?'

'ಮಹಾಪ್ರಭುಗಳಿದಿರು ಅತಿಮಾತನಾಡುವ ಅವಿಧೇಯತೆಯನ್ನು ಮನ್ನಿಸಬೇಕು. ಅಪ್ಪಣೆಯಾದರೆ [illegible]'

'ಹೇಳಿ.'

'ಜಗತ್ತಿಗೆ ಅನ್ನವೇ ಆಧಾರ [illegible] ಜನಿಸಿದ [illegible]. ಈ ಚರಾಚರ ಜಗತ್ತು. ಈ ಅನ್ನ ಪರ್ಜನ್ಯ[illegible] ಉತ್ಪತ್ತಿಯಾಗುವುದಾದರೂ, ಭೂಮಿ ಅದಕ್ಕೆ ಕ್ಷೇತ್ರವಾದಂತೆ, ಕೃಷೀವಲರ ಕರ್ಮ ಅದರ ಉತ್ಪತ್ತಿಗೆ ಸಾಧನ. ಆ ಕರ್ಮ ಯಜ್ಞವಾಗದೆ, ಅನ್ನ ಉತ್ಪತ್ತಿಯಾಗುವುದಿಲ್ಲ. ಸಕಲ ಜಗತ್ತಿನ ಉತ್ಪತ್ತಿಗೆ ಕಾರಣವಾದ ಅನ್ನ ಸೃಷ್ಟಿಗೆ ತಾನು ಕಾರಣನಾದುದರಿಂದ ಕೃಷೀವಲನಿಗೆ ಸೃಷ್ಟಿಕರ್ತನಾದ ಬ್ರಹ್ಮನ ಸ್ಥಾನ, ಪಿತೃ

ಸ್ಥಾನ. ಸೈನಿಕ ಸ್ವತಃ ಅನ್ನಸೃಷ್ಟಿ ಮಾಡದೆ, ಬೇರೆಯವರ ಕರ್ಮ ಫಲವಾದ ಅನ್ನದಿಂದ ದೇಹಪೋಷಣೆ ಮಾಡಿಕೊಳ್ಳುವುದರಿಂದ, ಅನ್ನ ಋಣಿಯಾದ ಆತನದು ದಾಸಸ್ಥಾನ. ಆದರೆ ಕೃಷಿಕರ್ಮಕ್ಕೆ ರಕ್ಷಣೆ ನೀಡುವುದರಿಂದ ಪುತ್ರಸ್ಥಾನ ಪ್ರಾಪ್ತಿಯಾಗುತ್ತದೆ. ತನ್ನ ರಕ್ಷಣಾಧರ್ಮ ವನ್ನು ಮರೆತ ಸೈನಿಕ ಅನ್ನದ್ರೋಹಿಯೂ, ಪಿತೃದ್ರೋಹಿಯೂ ಆಗಿ, ಕರ್ಮಲೋಪಫಲವಾದ ನರಕಕ್ಕೆ ಭಾಜನನಾಗುತ್ತಾನೆ. ಆದುದರಿಂದ ಕೃಷೀವಲ ಸೈನಿಕನಿಗಿಂತ ಪರಮೋತ್ತಮ ಪ್ರಭು. ಆತನ ರಕ್ಷಣೆ, ಅನ್ನ ಮಾತೆಯ ರಕ್ಷಣೆ ಸೈನಿಕನ ಮೊದಲ ಕರ್ತವ್ಯ, ಕ್ಷತ್ರಿಯ ಧರ್ಮದ ಮೂಲ ಮಂತ್ರ.'

ವಿನೀತ ಭಾವದಿಂದ ಲೋಕಾದಿತ್ಯನಾಡಿದ ಮಾತುಗಳನ್ನು ಕೇಳಿ ಸಭೆಗೆ ಸಭೆಯೇ ತಲೆದೂಗಿತು. ಚಕ್ರವರ್ತಿಗಳಿಗಂತೂ ಹುದುಗಲಾಗದೆ ಕಣ್ಣುಗಳಲ್ಲಿ ತುಳುಕುವಷ್ಟು ಸಂತೋಷ. ಆ ಸಂತೋಷದಲ್ಲೇ ಹೇಳಿ ದರು:

'ಬಂಕರಸರ ಮಕ್ಕಳಿಗೆ ತಕ್ಕ ಹಾಗೆ ಮಾತಾಡಿದ್ದೀರಿ. ನಿಮ್ಮನ್ನು ಹಡೆದವರ ಶ್ರಮ ಸಫಲವಾಯಿತು.' ಎಂದು ಹೇಳಿ, ಓಲಗ ಸಾಲೆಯ ಅಂಗಳದಲ್ಲಿ ಸಸ್ಯದಮಡಿ ಮಾಡಿಸಿದುದರ ಉದ್ದೇಶವನ್ನು ಸಭೆಗೆ ವಿವರಿಸಿ—

'ಈ ಪರೀಕ್ಷೆಯಲ್ಲಿ ಲೋಕಾದಿತ್ಯರು ಜಯಶೀಲರಾಗಿದಾರೆ. ಆದುದರಿಂದ ಅವರಿಗೆ ಸೇನಾಧಿಪತ್ಯವನ್ನು ಕೊಡಬಹುದೆಂಬುದು ನಮ್ಮ ಅಭಿಪ್ರಾಯ. ನಮ್ಮ ಈ ಅಭಿಪ್ರಾಯ ಸಚಿವಮಂಡಲಿಗೂ, ಉಳಿದ ದಳಪತಿಗಳಿಗೂ ಒಪ್ಪಿಗೆಯಾದೀತೆಂದೇ ನಾವು ನಂಬಿದೇವೆ. ವಿರುದ್ಧಾಭಿ ಪ್ರಾಯವುಳ್ಳವರಿದ್ದರೆ, ನಿಸ್ಸಂಶಯವಾಗಿ, ನಿರ್ಭಯವಾಗಿ ಸೂಚಿಸ ಬಹುದು. ಮುಖಮರ್ಯಾದೆಗಾಗಿ, ಚಕ್ರವರ್ತಿಗಳ ಮಾತು ಎಂಬ ಕಾರಣಕ್ಕಾಗಿ ಯಾರೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸದೆ ಇರ ಬಾರದು. ಇದು ಚಕ್ರವರ್ತಿಗಳ ಆಪ್ತ ವಿಷಯವಲ್ಲ, ರಾಷ್ಟ್ರಕ್ಕೆ ಸಂಬಂಧಿಸಿದ ಸಮಸ್ಯೆ. ಆದುದರಿಂದ ಇಂಥ ವಿಷಯದಲ್ಲಿ ತೋರಿಕೆಯ ಏಕಾಭಿಪ್ರಾಯ, ದಾಕ್ಷಿಣ್ಯದ ಅಂಗೀಕಾರ, ಪರಿಣಾಮದಲ್ಲಿ ರಾಷ್ಟ್ರಗೌರವ ನಾಶಕ್ಕೆ, ಏಕೆ ರಾಷ್ಟ್ರಕ್ಕೇ ಹಾನಿಕರವಾಗಿ ಪರಿಣಮಿಸಬಹುದು. ಆದು

ದರಿಂದ ಸೇನಾಧಿಪತಿಯನ್ನು ಆರಿಸುವ ಗುರುತರ ಹೊಣೆಗಾರಿಕೆಯನ್ನು ನಮಗೇ ಒಪ್ಪಿಸಿದ್ದರೂ, ಸಚಿವಮಂಡಲಿ, ಉಳಿದ ಮಾನ್ಯ ದಳಪತಿಗಳು ತಮ್ಮ ಸ್ಪಷ್ಟಾಭಿಪ್ರಾಯವನ್ನು ಸೂಚಿಸಬೇಕು. ನಮ್ಮ ಆಯ್ಕೆ ತಮಗೂ ಸಮ್ಮತವಾದರೆ ಸಂತೋಷ, ಆಗದಿದ್ದರೆ ದುಃಖವಿಲ್ಲ.'

—ಎಂದು ಹೇಳಿದರು ಚಕ್ರವರ್ತಿಗಳು.

ಚಕ್ರವರ್ತಿಗಳಾಡಿದ ಮಾತು ಕೇಳಿ, ಅನಿರೀಕ್ಷಿತವಾಗಿ ಗೌರವ ಒದಗಿದುದನ್ನು ಕಂಡು ಚಕಿತನಾದ ಲೋಕಾದಿತ್ಯನಂತೆ, ಸಭೆಗೆ ಸಭೆಯೇ ಚಕಿತವಾಯಿತು.

ಲೋಕಾದಿತ್ಯ ಬಂಕರಸರ ಮಗನೆಂಬ ಕಾರಣಕ್ಕಾಗಿ ಎಲ್ಲರಿಗೂ ಆತನಮೇಲೆ ಗೌರವವಿತ್ತು. ಬಂಕರಸರ ಕೈಕೆಳಗೆ ನುರಿತ ಆತ ಉತ್ತಮ ಸೇನಾಧಿಪತಿಯಾಗಬಲ್ಲನೆಂಬ ಭರವಸೆಯೂ ಇತ್ತು. ಆ ದಿನ ಸಭೆಯಲ್ಲಿ ಆತನಾಡಿದ ಮಾತು ಎಲ್ಲರ ಮನವನ್ನೂ ಒಲಿಸಿತ್ತು. ಆದರೂ ಮಿಹಿರಭೋಜನಂಥವನಮೇಲೆ ದಾಳಿಮಾಡ ಹೊರಟ ಸೇನೆಯ ಆಧಿಪತ್ಯ ವಹಿಸಬಲ್ಲನೇ? ಆ ಮಹತ್ವದ ಹೊಣೆಹೊರುವ ವಯಸ್ಸೇ ಅವನಿಗೆ? ಆದರೆ ಅದೊಂದು ಸಣ್ಣಕಾರಣಕ್ಕಾಗಿ ಚಕ್ರವರ್ತಿಗಳ ಆಯ್ಕೆಯನ್ನು ಸಾಧುವಲ್ಲವೆನ್ನಬಹುದೇ? ಆ ಮನಸು ಯಾರಿಗೂ ಬರಲಿಲ್ಲ. ಎಲ್ಲರೂ ಚಕ್ರವರ್ತಿಗಳ ಆಯ್ಕೆ ನ್ಯಾಯವೆಂದೇ ಒಪ್ಪಿದರು.

ಲೋಕಾದಿತ್ಯನೇ ತನಗೆ ಸಂದ ಗೌರವದಿಂದ ಪುಲಕಿತನಾಗಿ, ಹೆಮ್ಮೆಯಿಂದ ಹಿಗ್ಗಿದರೂ, ಆ ಭಾವವನ್ನು ಬದಿಗೆ ಸರಿಸಿ, ಎದ್ದುನಿಂತು ಸಿಂಹಾಸನಕ್ಕೆ, ಸಭೆಗೆ ವಂದಿಸಿ—

'ಮಹಾಪ್ರಭುಗಳು, ನನ್ನಲ್ಲಿ, ನಮ್ಮ ಹಿರಿಯರಲ್ಲಿ ತಮಗಿರುವ ಅಪಾರ ವಿಶ್ವಾಸವನ್ನು ಈ ಸೇನಾಧಿಪತ್ಯಕ್ಕೆ ನನ್ನನ್ನು ಆಯುವ ಅನುಗ್ರಹಮಾಡಿ ಸೂಚಿಸಿದಾರೆ. ಸಭೆಯೂ ಅದಕ್ಕೆ ಸಮ್ಮತಿಯಿತ್ತು ನನ್ನನ್ನು ಆಶೀರ್ವದಿಸಿದೆ. ಅದಕ್ಕೆ ನಾನು ಕೃತಜ್ಞ. ಆದರೂ ಮಹಾಪ್ರಭುಗಳಲ್ಲಿ ನನ್ನದೊಂದು ಬಿನ್ನಹ....'

'ಏನು ಹೇಳಿ?'

'ಅವಿನಯವನ್ನು ಮನ್ನಿಸಬೇಕು. ಇಲ್ಲಿ ನೆರೆದ ಹಿರಿಯರಲ್ಲಿ ನಾನು ವಯಸ್ಸಿನಲ್ಲಿ, ಯೋಗ್ಯತೆಯಲ್ಲಿ ತುಂಬಾ ಚಿಕ್ಕವನು. ಆದುದರಿಂದ, ಚಕ್ರವರ್ತಿಗಳು ಹಿರಿಯರು ಯಾರನ್ನಾದರೂ ಆಧಿಪತ್ಯಕ್ಕೆ ನೇಮಿಸಿದರೆ, ನಾನವರ ಅನುಚರನಾಗಿ ಜೋಳದಪಾಳಿಯ ಋಣ ತೀರಿಸುತ್ತೇನೆ. ನನ್ನ ಮೇಲೆ ಕೃಪೆದೋರಿದ ಸಿಂಹಾಸನದ ಕೀರ್ತಿಗೆ ಕಲಂಕ ಬರದಂತೆ, ಪ್ರಭುಗಳ ಉಪ್ಪಿಂತಿಂದು ಬೆಳೆದ ಮೈಯನ್ನು ಸಮರಾಂಗಣದಲ್ಲಿ ಸವೆಸುತ್ತೇನೆ. ಈ ಮನ್ನಣೆಯನ್ನು ಪ್ರಭುಗಳು ಅನುಗ್ರಹಿಸಬೇಕು.'

ಆತನ ಮಾತು ಸಭೆಯನ್ನು ಮತ್ತಷ್ಟು ಮೆಚ್ಚಿಸಿತು. ಪ್ರಧಾನಾಮಾತ್ಯರೇ ಹೇಳಿದರು—

'ವೀರಕ್ಕೆ ವಿನಯ ಭೂಷಣವೆಂದು ಆಡುತ್ತಾರೆ. ಅದರ ಸೊಗಸನ್ನು ನಾವಿಂದು ಲೋಕಾದಿತ್ಯರ ನಡೆನುಡಿಯಲ್ಲಿ ಕಂಡು, ಸಭೆ ಆನಂದಿಸಿದೆ. ಚಕ್ರವರ್ತಿಗಳು ಅನುಗ್ರಹಿಸಿದ ಗೌರವಕ್ಕೆ ಲೋಕಾದಿತ್ಯರು ಸರ್ವಥಾ ಪಾತ್ರರೆಂಬುದು ಸಭೆಗೆ ನಂಬಿಕೆಯಾಗಿದೆ. ಸಭೆಯ ಆಯ್ಕೆಯನ್ನು ಲೋಕಾದಿತ್ಯರು ಸ್ವೀಕರಿಸಬೇಕು.'

'ನಿಜ ನಿಜ,' ಎಂದು ಉಳಿದವರೂ ತಲೆಹಾಕಿದರು.

'ಮಹದಾಶೀರ್ವಾದ' ಎಂದು ಸಿಂಹಾಸನಕ್ಕೂ, ಸಭೆಗೂ ಮತ್ತೆ ಮಣಿದ ಲೋಕಾದಿತ್ಯ.

ಬಳಿಕ ಚಕ್ರವರ್ತಿಗಳೇ ಸ್ವಹಸ್ತದಿಂದ ಲೋಕಾದಿತ್ಯನಿಗೆ ಸೇನಾಧಿಪತ್ಯ ಸೂಚಕವಾದ ವಸ್ತ್ರ, ಶಿರೋಭೂಷಣ, ಅಸ್ತ್ರಗಳನ್ನಿತ್ತು, ವೀರವೀಳಯವನ್ನು ನೀಡಿದರು. ಕಹಳೆಗಳು ಕೂಗಿ, ಭೇರಿಗಳು ಮೊಳಗಿ ಜಗತ್ತಿಗೆ ಈ ಸುದ್ದಿಯನ್ನು ಸಾರಿದವು.

ಲೋಕಾದಿತ್ಯ ಸಿಂಹಾಸನದಿದಿರು ಮಂಡಿಯೂರಿ, ಎದೆಯಲ್ಲಿ ತುಂಬಿಬಂದ ಭಾವದ ವೇಗಕ್ಕೆ ದೃಢವಾದ ಮೈ ನಸುಕಂಪಿಸುತ್ತಿರಲು, ಕೃತಜ್ಞತೆಯ ಅಶ್ರುಗಳನ್ನು ಸುರಿಸುತ್ತಾ ಹೇಳಿದ—

'ಪ್ರಭೂ, ನಾನು ನಿಮ್ಮ ಕರುಣೆಯ ಕಂದ. ಗೆಲುವಾಗಲೆಂದು ಹರಸಿ. ಈ ಸಿಂಹಾಸನಕ್ಕೆ ನನ್ನ ಮೈ ಮೀಸಲು; ನನ್ನ ಹೃದಯ ಚಕ್ರವರ್ತಿಗಳ ಪಾದಾರವಿಂದಕ್ಕೆ ಅರ್ಪಿತ.'

ಆ ಹೊತ್ತಿನಲ್ಲಿ ಚಕ್ರವರ್ತಿಗಳಿಗೆ ಏಕೋ ರಾಜಕುಮಾರನ ನೆನಪಾಯಿತು. 'ಇವನು ನನ್ನ ಮಗನಾಗಿದ್ದರೆ....?' ಎನಿಸಿ ಮನಸು ಒಳಗೇ ಮುದುಡಿಕೊಂಡಿತು.

'ನಿಮ್ಮ ಸೇನಾಧಿಪತ್ಯಕ್ಕೆ ಶುಭವಾಗಲಿ, ನಿಮ್ಮ ಸೇನೆಗೆ ಜಯವಾಗಲಿ'

—ಎಂದು ಹರಸಿದರು. ಅಂದಿನ ಓಲಗ ಮುಗಿಯಿತು.

## ೧೪

ಅಂದು ರಾಜಸಭೆಯಲ್ಲಾದ ಘಟನೆ ರಾಜಕುಮಾರ ಕೃಷ್ಣನ ಕಣ್ಣು ತೆರೆಸುವ ಬದಲು, ಕ್ರೋಧಕ್ಕೆ ಮಸೆಗಲ್ಲಾಯಿತು. 'ಅಪಮಾನ, ಅಪಮಾನ' ಎಂದು ಬುಸುಗುಡುತ್ತಿತ್ತು ಕ್ರೋಧದ ಕಾಳಸರ್ಪ ಅವನ ಹೃದಯದಲ್ಲಿ. 'ಅರಸುಗುವರನಿಗಿಂತ, ಸಿಂಹಾಸನಕ್ಕೆ ವಾರಸುದಾರನಾದ ಔರಸಪುತ್ರನಿಗಿಂತ, ಆಸ್ಥಾನ ಕರಣಿಕರಿಗೆ ಹೆಚ್ಚಿನ ಮನ್ನಣೆಯೇ? ತುಂಬಿದೋಲಗದಲ್ಲಿ ತಂದೆಯೇ ಮಗನ ಅವಮಾನ ಮಾಡುವುದೇ?' ಎಂಬ ಅಪಮಾನದ ಭಾವನೆಯ ಉರಿ ಮಸಗಿ, ಅವನ ಮಿದುಳು ಗುರಿಯರಿಯದ ಪ್ರತೀಕಾರಕ್ಕೆ ಹಾತೊರೆಯುತ್ತಿತ್ತು. ಪ್ರತೀಕಾರ ಭಾವನೆಯ ಕರಗವನ್ನು ಹೊತ್ತು, ತಂದೆಗೆ ಮೊಗದೋರದೆ ಅರಮನೆಯಲ್ಲಿ ಸುತ್ತಾಡುತ್ತಿದ್ದ ಕೃಷ್ಣ.

ಅವನ ಆ ರೀತಿಯನ್ನು ಕಂಡು ಚಕ್ರವರ್ತಿಗಳ ಹೃದಯಕ್ಕೆ ಅಪಾರ ವ್ಯಥೆಯಾಯಿತು. ಯೌವ್ವರಾಜ್ಯಾಭಿಷೇಕಕ್ಕೆ ಯೋಗ್ಯವಾದ ವಯಸ್ಸು ಬಂದರೂ, ರಾಜಕುಮಾರನಿಗೆ ಇನ್ನೂ ತಮ್ಮ ಹೃದಯವನ್ನು ಅರಿತುಕೊಳ್ಳುವ ಬುದ್ಧಿ ಬರಲಿಲ್ಲವಲ್ಲಾ ಎಂದು ನೊಂದರು. ತಮಗೆ ಮೊಗದೋರದೆ, ಸಿಡುಕುತ್ತಾ ಅಲೆವ ರಾಜಕುಮಾರನನ್ನು ಕರೆಸಿ ಬುದ್ಧಿಹೇಳಿ, ಅವನ ಹೃದಯದಲ್ಲಿ ಮೂಡಿದ ಕ್ರೋಧವನ್ನು ತವಿಸಬೇಕು ಎನಿಸಿತು. ಆದರೆ ಅದರಿಂದ ರಾಜಕುಮಾರನಮೇಲೆ ಒಳ್ಳೆಯ ಪರಿಣಾಮವಾಗುವುದಕ್ಕಿಂತ ಹೆಚ್ಚಾಗಿ, ತಮ್ಮ ದುರ್ಬಲತೆಯ ಪ್ರದರ್ಶನ ಮಾತ್ರವೇ ಆಗಬಹುದು ಎನಿಸಿ ಸುಮ್ಮನಾದರು.

ತಮ್ಮ ನಡತೆಯನ್ನೇ ತಾವು ಒರೆಗಿಟ್ಟು ನೋಡಿಕೊಂಡರು ಚಕ್ರವರ್ತಿಗಳು. 'ವಯಸ್ಸಿಗೆ ಬಂದ ಮಗನನ್ನು, ರಾಜಕುಮಾರನನ್ನು ಹಾಗೆ ತುಂಬಿದೋಲಗದಲ್ಲಿ ಮುಖಭಂಗಮಾಡಿದುದು ಉಚಿತವಾಯಿತೇ, ಕೃಷ್ಣ ಎಷ್ಟು ನೊಂದುಕೊಂಡನೋ ಆ ಗಳಿಗೆಯಲ್ಲಿ' ಎಂದು ತಂದೆಯ ಮನ ನೊಂದರೆ, 'ಚಕ್ರವರ್ತಿಗಳು ಮಾಡಿದುದು ಸರಿಯಾಯಿತು. ಇಲ್ಲವಾದಲ್ಲಿ ಚಕ್ರವರ್ತಿಗಳು ಮಗನಿಗಾಗಿ ಆಸ್ಥಾನದ ಸಂಪ್ರದಾಯುವನ್ನು ಮುರಿದರು ಎಂಬ ಅಪಖ್ಯಾತಿ ಬರುತ್ತಿತ್ತು. ಅಲ್ಲದೆ, ಅಧಿಕಾರಿಗಳಿಗೆ ತಮ್ಮ ಕರ್ತವ್ಯಮಾಡುವುದಕ್ಕೂ ಭೀತಿಯಾಗಿ ಅರಸರ, ರಾಜಕುಮಾರನ ಚಿತ್ತ ಹರಿದಂತೆ ನಡೆವ ಚಪಲತೆ ಬರುತ್ತಿತ್ತು. ಮಾಡಿದುದು ತಪ್ಪಲ್ಲ, ಸರಿ' ಎಂದಿತು ಚಕ್ರವರ್ತಿ ಚಿತ್ತ. ಚಕ್ರವರ್ತಿಗಳು ಚಕ್ರವರ್ತಿಯಾಗಿ ಮಾಡುವ ಕರ್ತವ್ಯವನ್ನು ಮಾಡಿದಂತೆ, ತಂದೆಯ ಹೃದಯ ಮಗನಿಗಾದ ಮುಖಭಂಗಕ್ಕಾಗಿ ಬೇಯುತ್ತಿತ್ತು. ಕರ್ತವ್ಯ-ವಾತ್ಸಲ್ಯಗಳ ಹೋರಾಟದಲ್ಲಿ ಚಕ್ರವರ್ತಿಗಳ ಹೃದಯ ತಲ್ಲಣಿಸಿ, ಪ್ರಿಯವಚನದ ಸ್ವಾಂತನೆ ಬಯಸಿ ಸುಯ್ಯುತ್ತಿತ್ತು- 'ಲಕ್ಷ್ಮೀ.... ನೀನೀಗ ಇರಬೇಕಾಗಿತ್ತು....ಲಕ್ಷ್ಮೀ.... ಲಕ್ಷ್ಮೀ....' ಎಂದು, ಬರಿದಾದ ಅಂತಃಪುರದಲ್ಲಿ ಸುಳಿವ ಗಾಳಿಯೂ ಮಾರ್ದನಿಸಿ ಸದ್ದಿಲ್ಲದೆ ಸುಯ್ಯುವಂತೆ.

ಅಂದು ಓಲಗಸಾಲೆಯುಲ್ಲಿ ನಡೆದ ಆ ಘಟನೆ ಓಲಗಸಾಲೆಯಲ್ಲೇ ಉಳಿಯದೆ, ಬಾಯಿಂದ ಬಾಯಿಗೆ ದಾಟಿ ರಾಜಧಾನಿಯಲ್ಲೆಲ್ಲಾ ವ್ಯಾಪಿಸಿತು. ಚಕ್ರವರ್ತಿಗಳ ನಿಷ್ಪಕ್ಷಪಾತ ವರ್ತನೆ, ಕರ್ತವ್ಯನಿಷ್ಠೆಯನ್ನು ಕಂಡು ಸಾಮಾನ್ಯವಾಗಿ ಎಲ್ಲರಿಗೂ ಸಂತೋಷವಾದರೂ, ಚಕ್ರವರ್ತಿಗಳು ಹಾಗೆ ತುಂಬಿದ ಸಭೆಯಲ್ಲಿ ರಾಜಕುಮಾರರ ಮುಖಭಂಗ ಮಾಡಬಾರದಾಗಿತ್ತು ಎನ್ನುವವರೂ ಇಲ್ಲದಿರಲಿಲ್ಲ. ಆದರೆ ತಂದೆ ಮಕ್ಕಳ ನಡುವೆಯಾದ ಈ ಘರ್ಷಣೆಯಿಂದ ಬೇರೊಂದು ಬಗೆಯ ತೃಪ್ತಿಯನ್ನು, ಸಂತೋಷವನ್ನು ಅನುಭವಿಸುವ ಜನರೂ ರಾಜಧಾನಿಯುಲ್ಲಿ ಇಲ್ಲದಿರಲಿಲ್ಲ. ಹೂ ಗಿಡಗಳ ನಡುವೆ ಅಲ್ಲಲ್ಲಿ ಬೆಳೆದ ಮುಳ್ಳುಗಿಡಗಳಂತೆ ರಾಜಧಾನಿಯುಲ್ಲಿದ್ದ ಪರರಾಜ್ಯದ ಬೇಹುಗಾರರಿಗೆ ಈ ಸುದ್ದಿ ಉತ್ಸಾಹವನ್ನು ಉಂಟುಮಾಡಿತು. ತಂದೆ ಮಕ್ಕಳ ವಿರಸದಲ್ಲವರು, ರಾಷ್ಟ್ರಕೂಟ ರಾಜ್ಯದ

ಅಭೇದ್ಯವಾದ ಕೋಟೆಯಲ್ಲಿ ಬಿರುಕನ್ನು ಕಂಡು ಹರ್ಷಿಸಿದರು. ರಾಜಧಾನಿಯಲ್ಲಿದ್ದ ಪರರಾಜ್ಯದ ಪ್ರತಿನಿಧಿಗಳು ಎಷ್ಟು ಬೇಗ ಈ ಘಟನೆಯನ್ನು ತಮ್ಮ ಅನುಕೂಲಕ್ಕಾಗಿ ಉಪಯೋಗಿಸಿಕೊಳ್ಳಬಹುದೆಂದು ಲೆಕ್ಕಹಾಕತೊಡಗಿದರು.

ಹಾಗೆ ಲೆಕ್ಕಹಾಕಿದ ಅನೇಕರಲ್ಲಿ ಚೇದಿಯ ಶಂಕರಗಣ, ನೊಳಂಬ ಮಂಗಿಯೂ ಇಬ್ಬರು. ಅವರ ಹೃದಯ:ವೂ ಅಪಮಾನತಪ್ತವಾಗಿ, ಪ್ರತೀಕಾರತೃಷಾಕಾತರವಾಗಿತ್ತು—ಚಕ್ರವರ್ತಿಗಳು ಸೇನಾಧಿಪತ್ಯವನ್ನು ತಮಗೆ ತಪ್ಪಿಸಿ ಲೋಕಾದಿತ್ಯನಿಗೆ ನೀಡಿದುದಕ್ಕಾಗಿ. ಚಕ್ರವರ್ತಿಗಳ ಬಳಗಕ್ಕೆ ಸೇರಿದ ಚೇದಿಯ ಶಂಕರಗಣ ಸೇನಾಧಿಪತ್ಯ ತನಗಲ್ಲದೆ ಬೇರಾರಿಗೂ ದೊರೆಯದೆಂದು ನಂಬಿದ್ದ. ಅವನ ದೃಷ್ಟಿಯಲ್ಲಿ ಇಂಥ ಸ್ಥಾನಗಳು, ಚಕ್ರವರ್ತಿಗಳ ಆಪ್ತರಿಗೆ, ನೆಂಟರಿಗೆ ಮೀಸಲು ಸ್ಥಾನಗಳು. ಅವರಿರುವಾಗ ಅದು ಇತರರ ಕೈಸೇರಿದರೆ, ಇವರ ಅಪಮಾನ ಮಾಡಿದಂತೆ. ಎಂತಲೇ ಅವನು ಅಪಮಾನದ ಕುದಿಯಲ್ಲಿ ಸಿಕ್ಕಿ ಬೇಯುತ್ತಿದ್ದ.

ನೊಳಂಬ ಮಂಗಿಯ ವ್ಯಥೆಯ ರೀತಿಯೇ ಬೇರೆ. ನೊಳಂಬ ಮಂಗಿ, ತೋರಿಕೆಗೆ ರಾಷ್ಟ್ರಕೂಟರ ಸಾಮಂತರಾಗಿದ್ದು, ಗಂಗ ದೊರೆ ನೀತಿಮಾರ್ಗನ ಸೋದರಿ ಜಾಯಬ್ಬೆಯನ್ನು ಕೈಹಿಡಿದುದರ ಫಲವಾಗಿ ಗಂಗಾಭಿಮಾನಿಯಾಗಿದ್ದ ನೊಳಂಬದೊರೆ ಪೊಳಲಚೋರನ ಬಳಗಕ್ಕೆ ಸೇರಿದವನು. ತನಗೆ ಸೇನಾಧಿಪತ್ಯ ದೊರೆತರೆ ಸಮಯಬಂದಾಗ, ರಾಷ್ಟ್ರಕೂಟರಾಜ್ಯದ ಬೆನ್ನಲ್ಲಿ ಹೊಕ್ಕು ಕರುಳಿರಿದು ಗಂಗರ ಹಿತ ಬಗೆಯಲೆಂದು ಬಂದಿದ್ದ. ಆದರೆ ಲೋಕಾದಿತ್ಯನಿಗೆ ಸೇನಾಧಿಪತ್ಯ ದೊರೆತುದರಿಂದ, ಆ ಅವಕಾಶ ತಪ್ಪಿ, ಬೇರೆಲ್ಲಿ ಸುಳುವುದಾರಿ ಕಾಣುವುದೆಂದು ಹುಡುಕುತಿದ್ದ. ಅಪಮಾನದ ಭಾವನೆಯಿಂದ ಕುರುಡಾಗಿದ್ದ ಶಂಕರಗಣ ಬಹುಬೇಗ ಇವನ ತೋರಿಕೆಯ ಸಹಾನುಭೂತಿಗೆಮರುಳಾಗಿ, ಇವನ ಕೈತವದ ಕೈಗೊಂಬೆಯಾಗಿದ್ದ. ಅವನ ಮೂಲಕ ತನ್ನ ಕಾರ್ಯ ಸಾಧಿಸಬೇಕೆಂದಿದ್ದ ಮಂಗಿಗೆ, ಚಕ್ರವರ್ತಿ-ರಾಜಕುಮಾರರ ನಡುವೆಯಾದ ವಿರಸದ ಘಟನೆ ಮತ್ತಷ್ಟು ಸಂತೋಷವನ್ನುಂಟುಮಾಡಿತು. ಶಂಕರಗಣನ ಮೂಲಕ ರಾಜಕುಮಾರನ ಬೇಟೆಯಾಡಲು ಲೆಕ್ಕಹಾಕಿದ.

ಆದರೆ ಮರುದಿನವೇ ರಾಜಧಾನಿಯಿಂದ ಹೊರಡಲಿದ್ದ ಸೇನೆಯೊಂದಿಗೆ ತಾನೂ ಹೋಗಬೇಕಾದುದರಿಂದ ಶಂಕರಗಣನನ್ನು ಅನಾರೋಗ್ಯದ ನೆಪಮಾಡಿಕೊಂಡು ಹಿಂದೆ ಉಳಿಯಲು ಹೇಳಿ, ಆತ ಹೇಗಾದರೂ ರಾಜಕುಮಾರನೊಂದಿಗೆ ಆಪ್ತತೆ ಬೆಳಸಿ, ಆತನ ಮನಸ್ಸನ್ನು ಚಕ್ರವರ್ತಿಗಳ ವಿರುದ್ಧ ತಿರುಗಿಸಬೇಕೆಂದೂ, ಒಮ್ಮೆ ರಾಜಕುಮಾರನನ್ನು ತಮ್ಮ ಗುಂಪಿಗೆ ಸೇರಿಸಿಕೊಂಡರೆ, ಬಳಿಕ ಅಂದು ಸೇನಾಧಿಪತ್ಯದ ವಿಷಯದಲ್ಲಿ ಚಕ್ರವರ್ತಿಗಳು ಮಾಡಿದ ಅಪಮಾನಕ್ಕೆ ಮುಯ್ಯಿ ತೀರಿಸುವುದು ಸುಲಭವಾಗುವುದೆಂದೂ ನಂಬಿಸಿದ. ಕ್ರೋಧದಿಂದ ಕುರುಡಾದ ಶಂಕರಗಣ ಮಂಗಿಯ ಮಾತಿನಂತೆ ನಡೆಯಲು ಸಿದ್ಧನಾದ.

ಮರುದಿನವೇ ರಾಷ್ಟ್ರಕೂಟ ಸೇನೆ ರಾಜಧಾನಿಯಿಂದ ಭರುಕಚ್ಛದತ್ತ ಯಾತ್ರೆ ಮಾಡಿತು. ಉಳಿದೆಲ್ಲರೂ ತೆರಳಿದರೂ, ಶಂಕರಗಣನೊಬ್ಬ ಅನಾರೋಗ್ಯದ ಕಾರಣದಮೇಲೆ, ಕೆಲವು ಮಂದಿ ಆಪ್ತ ಭಟರೊಡನೆ ಹಿಂದೆ ಉಳಿದ.

ಚಕ್ರವರ್ತಿಗಳ ನೆಂಟರ ಬಳಗಕ್ಕೆ ಸೇರಿದ ಶಂಕರಗಣನಿಗೆ ಅರಮನೆಯನ್ನು ಪ್ರವೇಶ ಮಾಡುವುದು ಕಷ್ಟವಾಗಲಿಲ್ಲ. ಅಷ್ಟೇಮಟ್ಟಿಗೆ ಅಪಮಾನ ಜ್ವಾಲೆಯಲ್ಲಿ ಸಿಲುಕಿ ಕುದಿಯುತ್ತಿದ್ದ ರಾಜಕುಮಾರನ ಮನಸ್ಸನ್ನು ಸವಿನುಡಿಗಳಿಂದ ಒಲಿಸಿಕೊಳ್ಳುವುದೂ ಕಷ್ಟವಾಗಲಿಲ್ಲ. ತನ್ನ ಬಗ್ಗೆ ಅಪಾರ ವಿಶ್ವಾಸ, ಅನಂತ ಸಹಾನುಭೂತಿ, ವಿಶೇಷ ಗೌರವಗಳನ್ನು ತೋರಿಸುತ್ತಿದ್ದ ಶಂಕರಗಣನ ಸ್ನೇಹಕ್ಕೆ ರಾಜಕುಮಾರ ಸೋತುಹೋದ. ದಿನದಿನಕ್ಕೆ ಬೆಳೆಯಿತು ಅವರ ಸ್ನೇಹ—ಒಣ ಹುಲ್ಲಿನಲ್ಲಿ ವೇಗವಾಗಿ ಹಬ್ಬುವ ಬೆಂಕಿಯಂತೆ.

ಮಹಾರಾಣಿಯವರು ಸ್ವರ್ಗಸ್ಥರಾದಂದಿನಿಂದ ಚಕ್ರವರ್ತಿಗಳ ಪಾಲಿಗೆ ಅರಮನೆ ಅರಮನೆಯಾಗದೆ ಒಂದು ಬಗೆಯ ಪರ್ಣಶಾಲೆಯಾಗಿತ್ತಾದುದರಿಂದ, ಅಲ್ಲಿ ವಿಲಾಸಕ್ಕೆ ಹೆಚ್ಚು ಆಸ್ಪದವಿರಲಿಲ್ಲ. ಆದರೆ ರಾಜಕುಮಾರನಿಗೆ ಜನ್ಮತಃ ಬಂದ ಸುಖೋಪಭೋಗದ ಬಯಕೆ, ಯೌವ್ವನದ ಕಾವು ತುಂಬಿದ ಮೈಯಲ್ಲಿ ಮತ್ತಷ್ಟು ಪ್ರಬಲವಾಗಿ, ತೃಪ್ತಿಗೆ ಅವಕಾಶವಿಲ್ಲದೆ, ಅವನೆದೆಯಲ್ಲಿ ಬುಟ್ಟಿಯಲ್ಲಿಟ್ಟ ಸರ್ಪದಂತೆ ಬುಸುಗುಟ್ಟು

ತ್ತಿತ್ತು. ರಾಜಕುಮಾರನ ಈ ದೌರ್ಬಲ್ಯವನ್ನು ಕಂಡುಕೊಳ್ಳಲು ಶಂಕರ ಗಣನಿಗೆ ಬಹುಕಾಲ ಬೇಕಾಗಲಿಲ್ಲ. ಆ ದೌರ್ಬಲ್ಯದ ಎಳೆ ಸಿಕ್ಕ ಕೂಡಲೇ ಸಣ್ಣಗೆ ಅದಕ್ಕೆ ಗಾಳಿ ಹಾಕತೊಡಗಿದ. ಒಮ್ಮೆ ರಾಜಕುಮಾರನ ಉಡುಪು ನೋಡಿ—'ಮುಂದೆ ಚಕ್ರವರ್ತಿಗಳಾಗುವವರು ಇಂಥ ಉಡುಪು ಧರಿಸುವುದೇ. ನೋಡಿದ ಜನರೇನಂದಾರು ರಾಜಕುಮಾರ. ಊಹೂ—ಆ ಮುತ್ತಿನ ಹಾರದೊಂದಿಗೆ, ವಜ್ರಪದಕದ ಪಚ್ಚೆಯ ಸರ ವಿದ್ದರೆ ಹೆಚ್ಚು ಸೊಗಸು' ಎಂದು ರಾಜಕುಮಾರ ಹೆಚ್ಚು ಆಭರಣ ಧರಿಸುವಂತೆ ಮಾಡಿ—

'ರಾಜಕುಮಾರರ ಸೌಂದರ್ಯವೀಗ, ಕುಂದಣವಿಕ್ಕಿದ ರತ್ನಕಾಂತಿ ಯಂತಿದೆ. ಆದರೆ ನನಗೊಂದೇ ವ್ಯಥೆ ರಾಜಕುಮಾರ' ಎನ್ನುವನು ಸಣ್ಣಮುಖ ಮಾಡಿಕೊಂಡು.

'ಏನು, ಏನು ವ್ಯಥೆ ಶಂಕರಗಣ ನಿನಗೆ?' ಎಂದು ಸ್ನೇಹಿತನಿಗೆ ಏನು ವ್ಯಥೆಯೋ ಎಂಬ ಆತುರತೆಯಿಂದ ಕೇಳುವನು ರಾಜಕುಮಾರ.

'ದೊಡ್ಡ ಚಿಂತೆಯೇನೂ ಇಲ್ಲ. ರಾಜಕುಮಾರರ ಈ ರೂಪ, ವೈಭವ, ಪ್ರಾಯ ಕಾಡು ಬೆಳದಿಂಗಳವಾಗುತ್ತಿದೆ ಎಂದಷ್ಟೇ ವ್ಯಥೆ. ಬರೀ ನಾನು ನೋಡಿ ಮೆಚ್ಚಿದರಾಯಿತೇ?' ಎನ್ನುವನು ಶಂಕರಗಣ.

'ನನ್ನ ರೂಪು, ವೈಭವವನ್ನು ನೋಡಿ ಮಿತ್ರರು ಮೆಚ್ಚಿದರೆ ಸಾಲದೇ?'

'ಸಾಲದು ರಾಜಕುಮಾರ, ಸೌಂದರ್ಯವತಿಯ ಕಾಡಿಗೆಗಣ್ಣಿನ ಮೆಚ್ಚುಗೆಯ ಉಡುಗೊರೆಯಿಲ್ಲದೆ, ರೂಪು, ಯೌವ್ವನ ಸಾರ್ಥಕವಾಗುವುದಿಲ್ಲ. ನಿಮ್ಮ ಸೌಂದರ್ಯವನ್ನು ನಾನು ನೋಡಿ ಮೆಚ್ಚುವುದೂ, ಅಲಂಕಾರಸಾಲೆಯ ಕನ್ನಡಿ ಮೆಚ್ಚುವುದೂ ಎರಡೂ ಒಂದೇ!'

ಎಂದು ನಿಟ್ಟುಸಿರು ಬಿಡುವನು ಶಂಕರಗಣ. ಅವನ ಮಾತು, ಸುಯ್ಯುವ ನಿಟ್ಟುಸಿರು ರಾಜಕುಮಾರನ ಎದೆಯಲ್ಲಿ ಬಯಕೆಯ ಉರಿಯನ್ನು ಹೊತ್ತಿಸುವವು.

ಇನ್ನೊಮ್ಮೆ, ವಿಹಾರಕ್ಕೋ ಬೇಟೆಗೋ ಸಿದ್ಧನಾಗಿನಿಂತ ರಾಜ ಕುಮಾರನನ್ನು ನೋಡಿ

'ಚಕ್ರವರ್ತಿಗಳಿಗೆ ವಂದನೆಗಳು' ಎನ್ನುವನು. ಅವನ ಮಾತು ಕೇಳಿದ ರಾಜಕುಮಾರ, ಆ ಸ್ತುತಿಯಿಂದ ಪ್ರಸನ್ನನಾಗಿ—

'ಇನ್ನೂ ಯುವರಾಜನೇ ಆಗದವನನ್ನು, ಚಕ್ರವರ್ತಿ ಎನ್ನುವುದು ಯಾವ ಚದುರು ಶಂಕರಗಣ?' ಎನ್ನುವನು.

'ಚದುರಲ್ಲ ರಾಜಕುಮಾರ, ಮನದ ಆಸೆಯನ್ನು ಬೇಡಬೇಡ ವೆಂದರೂ ಹಾಳು ನಾಲಗೆ ನುಡಿಯುತ್ತದೆ. ನಿಮ್ಮನ್ನು ಚಕ್ರವರ್ತಿಗಳಾಗಿ ಕಾಣಬೇಕೆಂದು ನನಗಿರುವಷ್ಟೇ ಆಸೆ ತಮಗೂಇಲ್ಲವೇ ರಾಜಕುಮಾರ?'

'ಚಕ್ರವರ್ತಿ ಪದವಿ ಯಾರಿಗೆಬೇಡ ಶಂಕರಗಣ, ಆದರೆ ಅಪ್ಪಾಜಿ ಯವರು ಜೀವಂತರಾಗಿರುವಾಗ ಅದಕ್ಕೆ ಬಯಸುವುದು ಅಶುಭ.'

'ಚಕ್ರವರ್ತಿಗಳಿಗೆ ಅಶುಭ ಚಿಂತಿಸುವಂಥ ಘಾತುಕ ನಾನಲ್ಲ ರಾಜ ಕುಮಾರ. ಚಕ್ರವರ್ತಿಗಳು ಚಿರಾಯುಗಳಾಗಲಿ. ಆದರೂ....'

'ಏನು ಆದರೂ ಶಂಕರಗಣ?'

'ಚಕ್ರವರ್ತಿಗಳು ಜೀವಂತರಾಗಿದ್ದೂ ರಾಜಕುಮಾರರು ಚಕ್ರವರ್ತಿ ಗಳಾಗಬಹುದು....ಚಕ್ರವರ್ತಿಗಳು, ಮನಸ್ಸು ಮಾಡಿದರೆ.'

'ಅದು ಹೇಗೆ ಸಾಧ್ಯ?'

'ಎಷ್ಟೋ ಜನ ಚಕ್ರವರ್ತಿಗಳು ಮಕ್ಕಳು ಪ್ರಾಪ್ತವಯಸ್ಕರಾಗಿ, ರಾಜ್ಯಭಾರ ನಿರ್ವಹಿಸಲು ಸಮರ್ಥರಾದಾಗ, ರಾಜ್ಯತ್ಯಾಗಮಾಡಿ ತಾವೇ ಮಗನ ಪಟ್ಟಾಭಿಷೇಕ ಮಾಡಿದುದನ್ನು ಇತಿಹಾಸ ಪುರಾಣಗಳಲ್ಲಿ ಕೇಳಿ ಲ್ಲವೇ? ನಿಮ್ಮನ್ನು ಕಂಡಾಗ ಒಮ್ಮೊಮ್ಮೆ ಹಾಗೇಕೆ ಆಗಬಾರದು ಎನಿಸು ತ್ತದೆ.'

'ಅಂದರೆ ನನಗೆ ಅಷ್ಟು ವಯಸ್ಸಾಗಿದೆ ಎಂದು ನಿನ್ನ ಅಭಿಪ್ರಾ ಯವೇ ಶಂಕರಗಣ? ನನಗಿನ್ನೂ ಹದಿನೇಳು ವರ್ಷಮಾತ್ರ.'

'ಅದು ಕಡಮೆಯಾಯಿತೆ ರಾಜಕುಮಾರ?'

'ಅಲ್ಲವೇ?'

'ಊಹೂ, ಚಕ್ರವರ್ತಿಗಳು ಸಿಂಹಾಸನಕ್ಕೆ ಬಂದಾಗ ಅವರಿಗೆ ಹನ್ನೆರಡುವರ್ಷ ವಯಸ್ಸಾಗಿರಲಿಲ್ಲವೇ? ಸಿಂಹಾಸನಕ್ಕೆ ಬರಲು ವಯಸ್ಸು ಮುಖ್ಯವಲ್ಲ ರಾಜಕುಮಾರ, ಯೋಗ್ಯತೆ ಮುಖ್ಯ. ತಮಗೆ ಆ ಯೋಗ್ಯತೆ

ಇಲ್ಲವೆಂದಾರು ತಾನೇ ಹೇಳಬಲ್ಲರು? ಅಲ್ಲದೆ ಮುಪ್ಪಿನಲ್ಲಿ ಮುಕುಟವಿಟ್ಟು ಕೊಂಡು ಮೆರೆದರೆ ತಾನೇ ಏನು ಸಾರ್ಥಕ, ರಾಜಕುಮಾರ, ವೃದ್ಧಾಪ್ಯ ದಲ್ಲಿ ವಿವಾಹ ಮಾಡಿಕೊಂಡಂತೆ. ನಾನು ಹೇಳಬೇಕೆ? ಚಕ್ರವರ್ತಿ ಗಳಿಗೇ ಇದು ತಿಳಿದಿರಬೇಕು.'

'ಊಹೂ. ಅಪ್ಪಾಜಿಯವರ ದೃಷ್ಟಿಯಲ್ಲಿ ನಾನಿನ್ನೂ ಯುವರಾಜ ಪಟ್ಟಕ್ಕೇ ಅರ್ಹನಲ್ಲ.'

—ಶಂಕರಗಣ ಬೀಸಿದ ಬಯಕೆ, ಭೋಗಗಳ ಬಲೆಯ ಮಿಗವಾಗಿ ಖಿನ್ನನಾಗಿ ಹೇಳಿದ ರಾಜಕುಮಾರ.

'ಪಾಪ! ರಾಜಕುಮಾರರು ಆ ತಪ್ಪನ್ನು ಚಕ್ರವರ್ತಿಗಳಮೇಲೆ ಹಾಕಬಾರದು.'

'ಮತ್ತೆ ಯಾರಮೇಲೆ ಹಾಕಬೇಕು?'

'ಚಕ್ರವರ್ತಿಗಳ ಕಿವಿಯನ್ನು ಆಳುತ್ತಿರುವವರಮೇಲೆ. ಚಕ್ರವರ್ತಿ ಗಳು ಸ್ವತಂತ್ರವಾಗಿ ವರ್ತಿಸುತ್ತಿಲ್ಲ ರಾಜಕುಮಾರ. ಈ ಬಾರಿಯ ಸಮರಯಾತ್ರೆಗೆ ಲೋಕಾದಿತ್ಯನನ್ನು ಸೇನಾಧಿಪತಿಯನ್ನಾಗಿ ಆರಿಸಿದುದೇ ಅದಕ್ಕೆ ಸಾಕ್ಷಿ. ಲೋಕಾದಿತ್ಯ ರಾಜಕುಮಾರಿಗಿಂತ ಒಂದೆರಡು ವರ್ಷ ದೊಡ್ಡವನಿರಬಹುದು. ಅಂಥವನಿಗೆ ಸೇನಾಧಿಪತ್ಯ ವಹಿಸುವ ಶಕ್ತಿ ಇದ್ದರೆ, ರಾಜಕುಮಾರರಿಗೆ ಚಕ್ರಾಧಿಪತ್ಯ ವಹಿಸುವ ಶಕ್ತಿ ಇಲ್ಲವೇ? ಲೋಕಾದಿತ್ಯನಿಗಿಂತಲೂ ರಾಜಕುಮಾರರು ಕೀಳೇ? ಇದೆಲ್ಲಾ ಚಕ್ರವರ್ತಿ ಗಳನ್ನು ಆಡಿಸುತ್ತಿರುವವರು ಮಾಡುತ್ತಿರುವ ಸಂಚು.'

'ಇದರಲ್ಲಿ ಸಂಚೇನಿದೆ ಶಂಕರಗಣ?'

'ಒಂದುಕಡೆ ಚಕ್ರವರ್ತಿಗಳ ನಂಟರಾದ ನಮ್ಮ ಮುಖಭಂಗ ಮಾಡಿ, ಬೇರೆಯವರನ್ನು ಮೇಲೆ ಎತ್ತಿ ಕಟ್ಟುವುದು; ಹೊತ್ತು ಬಂದಾಗ ಚಕ್ರವರ್ತಿಗಳಿಂದಲೇ ಓಲಗದಿದಿರು ರಾಜಕುಮಾರನ ಮುಖಭಂಗ ಮಾಡಿಸಿ, ಜನಗಳ ದೃಷ್ಟಿಯಲ್ಲಿ ಆತನನ್ನು ಕೀಳಾಗಿ ಮಾಡುವುದು—ಇದಾ ವುದೂ ಆಕಸ್ಮಿಕವಲ್ಲ ರಾಜಕುಮಾರ, ಸುವ್ಯವಸ್ಥಿತ ಪಿತೂರಿ.'

'ಇದರ ಉದ್ದೇಶ?'

'ರಾಜಕುಮಾರರಿಗೆ ರಾಜ್ಯ ದಕ್ಕ ಬಾರದು. ಅದು ಬೇರೆಯವರ ದಾಗಬೇಕು.'

'ಹಾಗಾದರಿದನ್ನು ಅಪ್ಪಾಜಿಯವರ ಕಿವಿಯಮೇಲೆ ಹಾಕಬೇಕು, ಶಂಕರಗಣ. ಇದನ್ನು ಮೊಳಕೆಯಲ್ಲೇ ಮುರಿಯಬೇಕು.'

—ರಾಜಕುಮಾರ ಹೆದರಿ ಹೇಳಿದ.

'ಷ್! ಹಾಗೆಲ್ಲಿಯಾದರೂ ಮಾಡೀರ. ಇದಕ್ಕೇನು ಆಧಾರ ಎಂದು ಕೇಳಿದರೆ ಏನು ಹೇಳುತ್ತೀರಿ ರಾಜಕುಮಾರ? ಈ ಒಳಸಂಚಿನ ಮೂಲ ಸೂತ್ರಧಾರ ಯಾರೆಂದು ತಿಳಿಯುವವರೆಗೂ, ಚಕ್ರವರ್ತಿಗಳಿಗೆ ಹೇಳುವುದಿರಲಿ, ನೀವು ಕೂಡಾ ಇದು ತಿಳಿದಂತೆ ತೋರಿಸಿಕೊಳ್ಳಬಾರದು. ಅದು ಜಾಣತನವಲ್ಲ. ಶತ್ರು ವೈ ಮರೆತಿರುವುದೇ ನಮಗೆ ಮೇಲು.'

'ನಿಜ. ನಾವು ಹಾಗೆಂದು ಸುಮ್ಮನಿದ್ದು ರಾಜ್ಯಕ್ಕೆ ಅಪಾಯವೊದ ಗಿದರೆ....'

'ಆ ಭೀತಿಯಿಲ್ಲ. ಹಾಗಾಗಬಾರದು ಎಂದೇ ಅಲ್ಲವೇ ನಾನು ಅನಾರೋಗ್ಯದ ನೆಪಮಾಡಿ ರಾಜಧಾನಿಯಲ್ಲಿ ನಿಂತದ್ದು. ಮಂಗಿಯರಸರೂ ಇಷ್ಟರಲ್ಲೇ ಏನಾದರೂ ನೆಪಮಾಡಿಕೊಂಡು ಬರುತ್ತಾರೆ. ಅವರೂ ನಿಮ್ಮ ಹಿತೈಷಿಗಳೇ. ಅವರು ಬರುವವರೆಗೆ ಸುಮ್ಮನಿರಿ. ಬಳಿಕ ಮುಂದಿನ ಆಲೋಚನೆ. ನಾವು ಇರುವವರೆಗೂ ರಾಜಕುಮಾರರು ಯಾವುದಕ್ಕೂ ಹೆದರಬೇಕಾಗಿಲ್ಲ. ಆದರೆ ನಮ್ಮಲ್ಲಿ ತಮ್ಮ ವಿಶ್ವಾಸ ಏಕರೀತಿಯಾಗಿರಬೇಕು.'

'ನಮ್ಮ ನಿಮ್ಮ ವಿಶ್ವಾಸಕ್ಕೆ ಎಂದೂ ಚ್ಯುತಿ ಬರುವುದಿಲ್ಲ ಶಂಕರಗಣ.'

'ಆದರೂ ರಾಜಕುಮಾರರ ಚಿತ್ತ, ಗಾಳಿಗೊಡ್ಡಿದ ಸೊಡರು. ಪಿಸುಣರ ಮಾತುಕೇಳಿ....'

'ಎಂದೂ ಹಾಗಾಗುವುದಿಲ್ಲ, ನಂಬಿಕೆಯಿಡಿ.'

'ನಿಜವೇ ರಾಜಕುಮಾರ?'

'ಸ್ವರ್ಗದಲ್ಲಿರುವ ಮಾತೃದೇವತೆಯ ಸಾಕ್ಷಿಯಾಗಿ.'

‘ ರಾಜಕುಮಾರರ ಸ್ನೇಹಕ್ಕೆ ನಾನು ಚಿರಋಣಿ. ಈ ಸ್ನೇಹಕ್ಕೆ ನನ್ನ ಪ್ರಾಣ ಸಾಕ್ಷಿ ’

–ಎಂದ ಶಂಕರಗಣ, ರಾಜಕುಮಾರನನ್ನು ಆಲಂಗಿಸಿ. ರಾಜಕುಮಾರ ಶಂಕರಗಣನ ಸ್ನೇಹಕ್ಕೆ ಸೆರೆಯಾಳಾದ.

ತನ್ನ ತಂತ್ರದ ಬಳ್ಳಿ ನಾಟಲು ರಾಜಕುಮಾರರ ಹೃದಯಭೂಮಿ ಹದವಾಗಿದೆಯೆಂದು ಶಂಕರಗಣನಿಂದ ತಿಳಿದಕೂಡಲೇ ಮಂಗಿಯೂ, ನೆಪಮಾಡಿಕೊಂಡು, ಸಮರಭೂಮಿಯಿಂದ ರಾಜಧಾನಿಗೆ ಹಿಂದಿರುಗಿದ. ಗಾಳಿ–ತೈಲಗಳ ಸಂಯೋಗದಿಂದ ಉರಿ ಮತ್ತಷ್ಟು ಉರಿಯುವಂತೆ, ರಾಜಕುಮಾರನ ಸಂಶಯ, ಸಾಮ್ರಾಜ್ಯಾಕಾಂಕ್ಷೆ ದಿನದಿನಕ್ಕೆ ಬೆಳೆಯತೊಡಗಿದವು—ಇವರ ಸ್ನೇಹದ ಗಾಳಿಸೋಕಿ.

ಮಂಗಿ ಶಂಕರಗಣನಿಗಿಂತಲೂ ಚತುರ. ಈ ಬಗೆಯ ಸ್ನೇಹದ ಬಲೆ, ಬರೀ ವಿಶ್ವಾಸದಿಂದ, ಉಪಚಾರದಿಂದ ಬಿಗಿಯಾಗಿ ಉಳಿಯುವುದಿಲ್ಲವೆಂಬುದನ್ನಾತ ಬಲ್ಲ. ಆದುದರಿಂದಲೇ ಒಂದು ಕಡೆ ರಾಜಕುಮಾರನ ಹೃದಯದಲ್ಲಿ ಶಂಕರಗಣ ಹೊತ್ತಿಸಿದ ಸಂಶಯದ ಉರಿಗೆ ಗಾಳಿ ಬೀಸುತ್ತಿದ್ದಂತೇ, ನಿಧಾನವಾಗಿ ರಾಜಕುಮಾರನನ್ನು ವಿಷಯಾಸಕ್ತಿಯ ಶೃಂಖಲೆಯಿಂದ ಭದ್ರವಾಗಿ ಬಂಧಿಸಲು, ರಾಜಧಾನಿಯಲ್ಲಿ ತನ್ನ ಹಸ್ತಕಳಾಗಿದ್ದ ಜಯಂತಿ ಎನ್ನುವ ವೇಶ್ಯೆಯನ್ನು ರಾಜಕುಮಾರನಮೇಲೆ ಪ್ರಯೋಗಿಸಿದ. ಜಯಂತಿಯ ಲಾವಣ್ಯಕ್ಕೆ ಮುಗ್ಧನಾದ ರಾಜಕುಮಾರ ಮದ್ಯಪಾನಕ್ಕೂ ಮನಮಾಡಲು ತಡವಾಗಲಿಲ್ಲ. ಮಂಗಿ, ಶಂಕರಗಣರ ಸವಿಮಾತು, ಜಯಂತಿಯ ರೂಪಮಧು, ಪರ್ಷಿಯದ ದ್ರಾಕ್ಷಾರಸದ ವಿಲಕ್ಷಣ ಮಾದಕತೆಯಲ್ಲಿ ರಾಜಕುಮಾರ ಎಲ್ಲವನ್ನೂ ಮರೆತು ಬಾಳತೊಡಗಿದ. ಉಳಿದೆಲ್ಲದಕ್ಕಿಂತಲೂ ಮಿಗಿಲಾಗಿ ಜಯಂತಿಯ ವ್ಯಾಮೋಹ.

ಪುರುಷನನ್ನು ಮರಳುಮಾಡಿ, ಕೋಡಗನಂತೆ ಕುಣಿಸಲು ಹೆಣ್ಣಿಗೆ ರೂಪ ಚಾತುರ್ಯಗಳಲ್ಲಿ ಯಾವುದಾದರೂ ಒಂದು ಇದ್ದರೂ ಸಾಕು. ಜಯಂತಿಯಲ್ಲಿ ಈ ಎರಡು ಗುಣಗಳೂ ಸಮಸಮನಾಗಿದ್ದುದಲ್ಲದೆ, ವೇಶ್ಯಾಜಾತಿಗೆ ಸಹಜವಾದ ಕಲಾಪ್ರೌಢಿಮೆಯೂ ಇದ್ದು—ಆಕೆಯ ಸಂಗವೆಂದರೆ ಪಂಚೇಂದ್ರಿಯ ಸಮಾರಾಧನೆಯಾಗಿತ್ತು. ಆಕೆಯ ಕುಡಿ

ಗಣ್ಣ ನೋಟ ಅಕಸ್ಮಿಕವಾಗಿ ಸೋಕಿದರೂ, ಸೋಕಿದ ಮೈ ಉರಿಸೋಕಿದ ಕರ್ಪೂರದಂತೆ ಕಾಮಾಗ್ನಿಗೆ ಆಹುತಿಯಾಗುವಾಗ, ಬೇಕೆಂದೇ ಅಕೆ ತನ್ನ ಸೋಗೆಗಣ್ಣಿನ ಸೊಬಗುಬಾಣದ ಪ್ರಯೋಗಮಾಡಿದಾಗ ಬದುಕುವ ಬೇಟೆಯುಂಟೆ? ಅದರಲ್ಲೂ ಅವಳು ರಾಜಕುಮಾರರ ಬಗ್ಗೆ ಅವ್ಯಾಜ ಮೋಹವನ್ನು ತಳೆದಂತೆ ನಟಿಸುತ್ತಿದ್ದುದು, ರಾಜಕುಮಾರರ ಮೋಹಕ್ಕೆ ಮತ್ತಷ್ಟು ಮದ್ಯಪಾನಮಾಡಿಸುತ್ತಿತ್ತು. ಅವಳಿಗಾಗಿ, ಅವಳ ವ್ಯಾಮೋಹಕ್ಕಾಗಿ ರಾಜಕುಮಾರ ಬೆಂಕಿಯನ್ನು ಹಾಯಲೂ ಸಿದ್ಧವಾಗಿದ್ದ. ಒಮ್ಮೆ ರಾಜಕುಮಾರ ಆಕೆಗಾಗಿ, ಅನರ್ಘ್ಯ ರತ್ನ ಹಾರವೊಂದನ್ನು ಕಾಣಿಕೆಯಾಗಿ ತಂದ. ಪ್ರಿಯವಾದ ರೀತಿಯಲ್ಲೇ ತನಗದು ಬೇಡವೆಂದು ಹೇಳಿದಳು ಜಯಂತಿ.

'ನನ್ನ ಪ್ರೇಮದ ಪಾರಿತೋಷಕವನ್ನು ನಿರಾಕರಿಸಬೇಡ ಜಯಂತಿ.' ಎಂದು ಬೇಡಿದ ರಾಜಕುಮಾರ.

'ನಿರಾಕರಣೆಯಲ್ಲ ಪ್ರಭು, ನಿಮ್ಮ ಚರಣದಾಸಿಗೆ ಇದಾವುದರಿಂದಲೂ ತೃಪ್ತಿಯಾಗದು'—ನಿಟ್ಟುಸಿರಿಟ್ಟು ಹೇಳಿದಳು ಜಯಂತಿ.

'ಹಾಗಾದರೆ ನಿನ್ನ ಬಯಕೆ ತೀರಲು ಏನು ಬೇಕು ಹೇಳು?'

'ನನಗಿರುವುದೊಂದೇ ಬಯಕೆ'

'ಯಾವುದು ?'

'ತಾವು ಚಕ್ರವರ್ತಿಗಳಾಗಿ ಸಿಂಹಾಸನದಮೇಲೆ ವಿರಾಜಿಸುವುದನ್ನು ನೋಡಬೇಕೆಂಬುದೊಂದೇ ನನಗಿರುವ ಬಯಕೆ. ಆ ಬಯಕೆ ತೀರಿದರೆ ತೃಪ್ತಳಾಗುತ್ತೇನೆ. ಅದು ಸಾಧ್ಯವಾಗುತ್ತದೆ ಎನ್ನುವುದಾದರೆ ಅದಕ್ಕಾಗಿ 'ಸಿಡಿದಲೆ' ಯಾಡಿ ತಲೆಯೊಪ್ಪಿಸಲೂ ಸಿದ್ಧಳಾಗಿದೇನೆ ಪ್ರಭು. ಆದರೆ ಆ ದಿನ ಎಂದೋ? ಅಥವಾ ನನ್ನ ಬಯಕೆ ಬಯಕೆಯಾಗಿಯೇ ಉಳಿಯುವುದೋ ಏನೋ?'

'ಏಕಷ್ಟು ನಿರಾಶೆ ಜಯಂತಿ. ರಾಜಕುಮಾರನಾಗಿ ಜನಿಸಿದವನು ಚಕ್ರವರ್ತಿಯಾಗುವುದು ತಪ್ಪುವುದೇ.'

'ತಾವು ಹೀಗೇ ಇದ್ದರೆ ತಪ್ಪುವುದೇನೋ ಎಂದು ನನಗೆ ಭೀತಿ.'

'ನಾನು ಹೇಗಿದ್ದೇನೆ....?'

'ಶ್ರಮಣನ ಹಾಗೆ! ನಿಮಗೇ ಚಕ್ರವರ್ತಿಪದವಿ ಬೇಡವಾದಂತಿದೆ.'

'ನಿನ್ನ ಪ್ರೇಮಕ್ಕಿಂತ ಬೇರೆ ಚಕ್ರವರ್ತಿ ಪದವಿ ಬೇಕೇ ಜಯಂತಿ?'

'ನನ್ನ ಪ್ರೇಮ ನಿಮಗೇ ಮೀಸಲು ಪ್ರಭು. ಆದರೂ ಅದೇ ಸಾಕೆಂದು ಭಾವಿಸುವುದು ಲಂಪಟಗ ಮಾತು. ತಾವು ಇದನ್ನು ಮರೆತು ಚಕ್ರವರ್ತಿಗಳಾಗಲು ಯತ್ನಿಸಬೇಕು. ನನ್ನ ಹೃದಯವನ್ನಾಳಿದಂತೆಯೇ ತಾವು ರಾಜ್ಯವನ್ನೂ ಆಳಬೇಕು.'

'ನಿಜ. ಅವೆರಡೂ ನನಗೆ ಪ್ರಿಯವಾದವೇ.'

'ಬಯಸಿದ ಎರಡರಲ್ಲಿ ಒಂದಂತೂ ನಿಮ್ಮದೇ ಆಗಿದೆ. ಇನ್ನೊಂದಕ್ಕೆ ಪ್ರಯತ್ನಪಡಿ.'

'ಹೇಗೆ ಪ್ರಯತ್ನ ಮಾಡುವುದು ಜಯಂತಿ?'

'ಅದಕ್ಕೆ ಅಡ್ಡವಾಗಿರುವವರನ್ನು ವಿರೋಧಿಸಿ.'

'ಅಪ್ಪಾಜಿಯವರ ಮೇಲೆ ಕೈಮಾಡಲೇ?'

'ಊಹೂ. ಚಕ್ರವರ್ತಿಗಳ ಕಿವಿಯಲ್ಲಿ ನಿಮ್ಮ ಬಗ್ಗೆ ವಿಷ ಊದುತ್ತಿರುವವರನ್ನು ತುಳಿಯಬೇಕು. ತಮಗೆ ಈ ರಾಜ್ಯ ಸಿಕ್ಕಬಾರದೆಂದೇ, ತಮಗೆ ಯೌವ್ವರಾಜ್ಯಾಭಿಷೇಕವೂ ಆಗದಂತೆ ಪ್ರಯತ್ನಮಾಡುತ್ತಿದಾರೆ....'

'ಯಾರು?'

'ಹೇಳಿದರೆ ಪ್ರಭುಗಳು ನನ್ನ ಮೇಲೆ ಅಸಮಾಧಾನ ಪಡುವಿರೋ ಏನೊ.'

'ಇಲ್ಲ, ಹೇಳು ಜಯಂತಿ.'

'ಗುಣಭದ್ರಾಚಾರ್ಯರ ಗುಂಪು.'

'ಆ!'—ಆಚಾರ್ಯರ ಹೆಸರು ಕೇಳಿ ಚಕಿತನಾದ ರಾಜಕುಮಾರ. 'ಉಂಟೇ ಜಯಂತಿ?'—ಅವಳ ಮಾತು ನಂಬಲಾಗದೆ ಕೇಳಿದ.

'ನಾನು ಸುಳ್ಳಾಡಿದರೆ ನನ್ನ ತಲೆ ಸಹಸ್ರ ಪಾಲಾಗಲಿ ಪ್ರಭು. ತಮ್ಮಲ್ಲಿ ಸುಳ್ಳಾಡುವೆನೇ ನಾನು?'

‘ಆಚಾರ್ಯರು ಇಂಥ ನೀಚ ಕೆಲಸಕ್ಕೆ ಎಂದೂ ಮನಮಾಡಲಾರರು ಜಯಂತಿ. ಸರ್ವಸಂಗ ಪರಿತ್ಯಾಗಿಗಳಾಗಿ, ಧರ್ಮಚಿಂತನೆಯಲ್ಲೇ ಇರುವ ಅವರೆಂದೂ ಹೀಗೆ ಮಾಡಲಾರರು.’

‘ಅವರ ಈ ಸಂಚಿಗೂ ಅವರ ಧರ್ಮವೇ ಕಾರಣ ಪ್ರಭು.’

‘ಅಂದರೆ.... ’

‘ಆಚಾರ್ಯರು ಜೈನರು. ಜೈನಧರ್ಮವನ್ನು ಜಗದ್ವ್ಯಾಪಿಯಾಗಿ ಮಾಡಬೇಕೆಂಬುದೇ ಅವರ ಮಹದಾಂಕಾಕ್ಷೆ.’

‘ಅದಕ್ಕೆ ನನ್ನ ಮೇಲೇಕೆ ಸಂಚುಮಾಡಬೇಕು.’

‘ತಾವು ಆ ಮಹತ್ವಾಕಾಂಕ್ಷೆಯ ದಾರಿಯಲ್ಲಿ ಅಡ್ಡಿಯೆಂದು.’

‘ಅದು ಹೇಗೆ?’

‘ತಾವು ಜಿನಧರ್ಮೀಯರಲ್ಲ.’

‘ಆದರೂ ಅದಕ್ಕೆ ಎಂದೂ ನಾವು ಕೇಡು ಬಗೆದಿಲ್ಲ. ಅಪ್ಪಾಜಿಯವರಂತೂ ಅವರಿಗೆ ರಾಜಗೌರವ ಸಲ್ಲಿಸುತ್ತಾರೆ.’

‘ನಿಜ, ಪ್ರಭೂ.’

‘ಮತ್ತೆ?’

‘ಜಿನಸೇನಾಚಾರ್ಯರ ಶಿಷ್ಯರಾಗಿದ್ದುದರಿಂದ ಚಕ್ರವರ್ತಿಗಳಿಗೆ ಗುಣಭದ್ರಾಚಾರ್ಯರ ಮೇಲೆ ಪ್ರೇಮ. ಆದರೆ ಹಾಗೆಂದು ಜೈನಧರ್ಮ ಪ್ರಚಾರದಲ್ಲವರು ನಿರತರಾಗಿಲ್ಲ. ಸರ್ವಧರ್ಮಗಳಿಗೂ ಒಂದೇ ರೀತಿಯ ಗೌರವ ಸಲ್ಲಿಸುತ್ತಾರೆ. ಅದು ಅವರಿಗೆ ಸಾಲದು. ಈ ಸಿಂಹಾಸನದ ಮೇಲೆ ಜಿನ ಧರ್ಮೀಯನನ್ನೇ ಕಳ್ಳಿರಿಸಿದರೆ, ಆಗ ಅವರ ಬಯಕೆ ಹೆಚ್ಚು ಸಫಲವಾಗುತ್ತದೆ.’

‘ಯಾರನ್ನು ಈ ಸಿಂಹಾಸನದ ಮೇಲೆ ಕೂರಿಸಲೆಂದು ಅವರ ಸಂಚು?’

‘ಬಂಕರಸರ ಮಗ ಲೋಕಾದಿತ್ಯರನ್ನು.’

‘ಇದು ನಂಬಲಾಗದ ಮಾತು ಜಯಂತಿ....ಲೋಕಾದಿತ್ಯ ನನ್ನ ಸಹಪಾಠಿ, ಅವನನ್ನು ನಾನು ಬಲ್ಲೆ....ಅವನೆಂದೂ ಇಂಥ ಕೃತಘ್ನತೆಗೆ ಮನಮಾಡಲಾರ.’

'ರಾಜಕುಮಾರರು ರಾಜಕಾರಣದಲ್ಲಿ ಅಜ್ಞರೆನ್ನುವುದು ಇದಕ್ಕೇ.' ಬರಿದಾದ ರಾಜಕುಮಾರನ ಮದ್ಯದ ಬಟ್ಟಲಲ್ಲಿ ಮತ್ತಷ್ಟು ಮದ್ಯ ತುಂಬಿ ಹೇಳಿದಳು ಜಯಂತಿ—'ಈ ಒಳಸಂಚು ಇಂದು ನಿನ್ನೆಯದಲ್ಲ, ಬಹು ದೀರ್ಘಕಾಲದ್ದು. ಬಂಕರಸರು ಲೋಕಾದಿತ್ಯನನ್ನು ಗುಣಭದ್ರಾಚಾರ್ಯರ ಬಳಿ ಶಿಷ್ಯನನ್ನಾಗಿ ಬಿಟ್ಟುದೇ ಈ ಕಾರಣಕ್ಕಾಗಿ—ರಾಜಧಾನಿಯಲ್ಲಿ ಲೋಕಾದಿತ್ಯನ ವರ್ಚಸ್ಸು ಬೆಳೆಯಲೆಂದು. ಈ ಮಾತಿಗೆ ಮತ್ತೊಂದು ನಿದರ್ಶನ—ಲೋಕಾದಿತ್ಯನಿಗೆ ಸೇನಾಧಿಪತ್ಯ ದೊರೆತದ್ದು. ಅದಕ್ಕಾಗಿ ಪರೀಕ್ಷೆಯೊಂದು ನಡೆಯಿತಲ್ಲ. ಅದನ್ನು ಚಕ್ರವರ್ತಿಗಳಿಗೆ ಸೂಚಿಸಿದವರಾರು ಬಲ್ಲಿರಾ ಪ್ರಭು?'

'ಯಾರು?'

'ಗುಣಭದ್ರಾಚಾರ್ಯರು'

'ನಿಜವೇ?'

'ನಿಜ. ಬೇಕಾದರೆ ಗುಣಭದ್ರಾಚಾರ್ಯರನ್ನೇ ಕೇಳಿ. ಚಕ್ರವರ್ತಿಗಳನ್ನೇ ಕೇಳಿ. ಸುಳ್ಳಾದರೆ ನೀವು ವಿಧಿಸಿದ ದಂಡನೆ ಅನುಭವಿಸುತ್ತೇನೆ. ಈ ಪರೀಕ್ಷೆಯನ್ನು ಸೂಚಿಸಿದವರು ಗುಣಭದ್ರಾಚಾರ್ಯರು, ಅದರಲ್ಲಿ ಗೆದ್ದವರು ಅವರ ಶಿಷ್ಯ ಲೋಕಾದಿತ್ಯ. ಇದೆಲ್ಲವೂ ಪೂರ್ವಸಿದ್ಧತೆಮಾಡಿಕೊಂಡ ನಾಟಕ. ಆಯಿತು. ಈಗ ಲೋಕಾದಿತ್ಯ ಎಲ್ಲರ ಕಣ್ಣಮಣಿ. ಈ ಬಾರಿಯ ಯುದ್ಧದಲ್ಲಿ ಅವನು ಗೆಲ್ಲುವುದು ಖಂಡಿತ.'

'ಅದು ಹೇಗೆ ಹೇಳುತ್ತೀಯಾ?'

'ಈ ಅಗಾಧ ಸೇನೆಯ ಇದಿರು ಪ್ರತೀಹಾರ ಬಲ ಬದುಕುವುದುಂಟೇ? ಗೆಲುವಾಗುತ್ತದೆ, ಗೆಲುವಿನ ಕೀರ್ತಿ ಲೋಕಾದಿತ್ಯನದಾಗುತ್ತದೆ. ಇಲ್ಲಿ ಜನರ, ಪ್ರಮುಖರ ವಿಶ್ವಾಸ ಗಳಿಸಿದ. ಅಲ್ಲಿ ಸೇನೆಯ ವಿಶ್ವಾಸ, ಪ್ರೇಮವನ್ನು ಗಳಿಸುತ್ತಾನೆ. ಸೇನೆಯ ಬೆಂಬಲವಿದ್ದಮೇಲೆ ಸಿಂಹಾಸನ ಗಳಿಸುವುದು ಅಸಾಧ್ಯವೇ?'

'ಲೋಕಾದಿತ್ಯ ಸಿಂಹಾಸಕ್ಕೆ ಕಣ್ಣು ಹಾಕಿದರೆ, ರಾಜಧಾನಿಯ ಮನೆಮನೆಯೂ ಕೋಟೆಯಾಗುತ್ತದೆ ಜಯಂತಿ. ಈ ಜನರ ನಿಷ್ಠೆಯನ್ನು ನಾನು ಬಲ್ಲೆ.'

'ನಾನೂ ಬಲ್ಲೆ. ಅದಕ್ಕಾಗಿಯೇ ಇಲ್ಲಿಯ ಜನರಲ್ಲಿ ರಾಜಕುಮಾರ ಅಯೋಗ್ಯನೆಂದು ಸಾರುತ್ತಿರುವುದು. ಓಲಗದಲ್ಲಿ ಚಕ್ರವರ್ತಿಗಳಿಂದಲೇ ರಾಜಕುಮಾರರಿಗೆ ಅಪಮಾನ ಮಾಡಿಸಿದುದರ ಉದ್ದೇಶವೂ ಅದೇ. ಒಂದುಕಡೆ ಲೋಕಾದಿತ್ಯನನ್ನು ಜನಪ್ರಿಯನನ್ನಾಗಿ ಮಾಡುವುದು, ಇತ್ತ ರಾಜಕುಮಾರನನ್ನು ಕೀಳುಗಳೆಯುವುದು—ಇದೆರಡೂ ರಾಷ್ಟ್ರಕೂಟ ಸಿಂಹಾಸನಕ್ಕೆ ಸಂಚಕಾರತರುವ ಸಂಚಿನ ಎರಡು ಮುಖ, ಪ್ರಭು. ಅವರ ಈ ಸಂಚು ವಿಫಲವಾಗಿ ತಾವು ರಾಷ್ಟ್ರಕೂಟರಾಜ್ಯ ಮಕುಟಧಾರಿಗಳಾದಂದು ನನ್ನ ಜನ್ಮ ಸಾರ್ಥಕವಾಗುತ್ತದೆ. ನನ್ನ ದೊರೆ, ಜನಜನದ ದೊರೆಯೂ ಆಗಿ ಮೆರೆಯಬೇಕೆಂಬುದೇ ನನ್ನ ಬಯಕೆ. ಶಂಕರಗಣ, ಮುಂಗಿ ಅರಸರೂ ಅದಕ್ಕಾಗೇ ಯತ್ನಿಸುತ್ತಿದ್ದಾರೆ. ನೀವು ಮಾಡಬೇಕಾದುದೊಂದೇ ಪ್ರಭು....'

'ಏನು ಜಯಂತಿ?'

'ಅವರಿಗೆ ನೆರವಾಗಿ ನಿಲ್ಲುವುದು, ಅಷ್ಟುಮಾಡುತ್ತೀರಾ ಪ್ರಭು? ಈ ಶನಿಸಂಚು ಸಾಯಲಿ.'

'ನಿನ್ನ ಮಾತಿಗೆ ಎದುರುಂಟೇ' ಎಂದ ರಾಜಕುಮಾರ, ಅವಳನ್ನು ಬಿಗಿದಪ್ಪಿ. ತನ್ನ ತೋಳಬಲೆಯಲ್ಲಿ ಸಿಲುಕಿದ ರಾಜಕುಮಾರನ ಮೊಗವನ್ನು ದಿಟ್ಟಿಸಿ ನೋಡಿ ಕಿಲಕಿಲ ನಕ್ಕಳು ಜಯಂತಿ.

ಅವಳು ರಾಜಕುಮಾರನ ಹೃದಯದಲ್ಲಿ ನಾಟಿದ ವಿಷಬಳ್ಳಿ ಮೋಹಜಲಪಾನ ಮಾಡಿ ಆಳವಾಗಿ ಬೇರುಬಿಟ್ಟಿತು.

## ೧೫

ದಿನದಿನಕ್ಕೆ ರಾಜಕುಮಾರನಲ್ಲಾಗುತ್ತಿದ್ದ ಬದಲಾವಣೆ ಮೊದಲು ಅಷ್ಟು ದಿನ ಚಕ್ರವರ್ತಿಗಳ ಗಮನಕ್ಕೆ ಬರಲಿಲ್ಲ. ಒಂಟಿಯಾಗಿದ್ದ ರಾಜಕುಮಾರ, ಶಂಕರಗಣನ ಸ್ನೇಹದಲ್ಲಿ ಬೇಸರ ಕಳೆದುಕೊಳ್ಳುತ್ತಿದ್ದಾನೆಂದು ನಂಬಿ 'ಇರಲಿ' ಎಂದಿದ್ದರು. ದಿನದಿನಕ್ಕೆ ರಾಜಕೀಯ ಪರಿಸ್ಥಿತಿ ವಿಷಮವಾಗುತ್ತಿತ್ತು. ರಾಜಕುಮಾರ ಈ ಸ್ನೇಹ ಸಲ್ಲಾಪದಲ್ಲಿ ಕಾಲ ಕಳೆಯದೆ, ರಾಜಕೀಯ ವಿಷಯಲ್ಲಿ ಆಸಕ್ತಿ ತೋರಿದ್ದರೆ ಚಕ್ರವರ್ತಿಗಳ ಮನಸ್ಸಿಗೆ

ಎಷ್ಟೋ ಸಂತೋಷವಾಗುತ್ತಿತ್ತು. ಆದರೆ ಅವನ ಮನಸು ರಾಜಕೀಯ ದಿಂದ ದೂರವಾಗಿ ದಿನದಿನಕ್ಕೆ ವಿಷಯಾಸಕ್ತಿ ಹೆಚ್ಚುತ್ತಿರುವುದು ಕಾಣು ತ್ತಿತ್ತು.

ಆದರೂ ರಾಜಕುಮಾರ ಪತನಮಾರ್ಗದಲ್ಲಿ ಎಷ್ಟು ಮುಂದು ವರಿದಿರುವನೆಂಬುದು ಚಕ್ರವರ್ತಿಗಳಿಗೆ ತಿಳಿದಿರಲಿಲ್ಲ. ಹೇಗಾದರೂ ಮಾಡಿ ರಾಜಕುಮಾರ ರಾಜ್ಯದ ಆಡಳಿತದಲ್ಲಿ ಆಸಕ್ತಿ ತೋರುವಂತೆ ಮಾಡಬೇಕೆಂದು ಚಿಂತಿಸುತ್ತಿದ್ದರು. ಅದಕ್ಕೆ ಇದ್ದದಾರಿ ಒಂದೇ— ಅವನಿಗೆ ಯುವರಾಜ ಪಟ್ಟಗಟ್ಟಿ, ಸಚಿವ ಮಂಡಲಿಯಲ್ಲಿ ಒಬ್ಬನನ್ನಾಗಿ ಮಾಡಿದರೆ, ಹೊಣೆಗಾರಿಕೆ ತಲೆಯಮೇಲೆ ಬಿದ್ದರೆ ಸರಿಹೋಗಬಹುದು ಎನಿಸುತ್ತಿತ್ತು. ಇದೇ ವಿಷಯವನ್ನು ಗುಣಭದ್ರಾಚಾರ್ಯರೊಂದಿಗೆ ಪ್ರಸ್ತಾಪಮಾಡಿದಾಗ, ಅವರೂ ಅದೇ ಪರಿಹಾರೋಪಾಯವನ್ನೇ ಸೂಚಿ ಸಿದ್ದರು. ಸಚಿವರು ಸಹಾ ಅದೇ ಸಲಹೆಯನ್ನೇ ಅನುಮೋದಿಸಿದ್ದರು. ಉತ್ತರದ ದಂಡಯಾತ್ರೆಯೊಂದು ಇಲ್ಲದಿದ್ದರೆ, ಆ ಕಾರ್ಯವನ್ನು ನೆರ ವೇರಿಸಬಹುದಾಗಿತ್ತು. ಒಂದು ಕಡೆ ಸೇನೆ ಸಮರೋದ್ಯೋಗದಲ್ಲಿ ತೊಡ ಗಿದ್ದಾಗ, ಆ ಚಿಂತೆಯನ್ನು ಮರೆತು ಯಾವ್ವರಾಜ್ಯಾಭಿಷೇಕದಂಥ ಪ್ರಧಾನ ಕಾರ್ಯವನ್ನು ಮಾಡುವುದು ಚಕ್ರವರ್ತಿಗಳ ಮನಸಿಗೆ ಬರಲಿಲ್ಲ ಅದು ಮುಗಿಯಲಿ ಎಂದು ಕಾದರೆ, ಅದು ದಿನದಿನಕ್ಕೆ ದೀರ್ಘವಾಗು ತ್ತಿತ್ತು.

ಪ್ರತೀಹಾರರೊಬ್ಬರೊಂದಿಗೇ ಯುದ್ಧವೆಂದುಕೊಂಡುದು, ಸೌರಾ ಷ್ಟ್ರದಲ್ಲಿ ಅಲ್ಲಲ್ಲಿದ್ದ ಚಾಲುಕ್ಯ ಸಾಮಂತರೂ ಈ ಯುದ್ಧದ ಸಂದ ರ್ಭವೇ ಶುಭ ಮುಹೂರ್ತವೆಂದುಕೊಂಡು ರಾಷ್ಟ್ರಕೂಟರ ವಿರುದ್ಧ ದಂಗೆ ಎದ್ದು ಗಡಚಾಗಿತ್ತು. ಸೌರಾಷ್ಟ್ರದರಸುಗಳ ಅಲ್ಪಸೇನೆ, ಈ ಇಬ್ಬಗೆಯ ದಾಳಿಯನ್ನು ಎದುರಿಸಲಾಗದೆ ಹೆಣಗುತ್ತಿದ್ದುದರಿಂದ ಯುದ್ಧದ ಪೂರಾ ಭಾರ ಮಾನ್ಯಖೇಟದ ಸೇನೆಯಮೇಲೇ ಬಿದ್ದಿತ್ತು. ಅದರ ಚಿಂತೆಯೇ ಚಕ್ರ ವರ್ತಿಗಳಿಗೆ ಹೊರಲಾಗದಷ್ಟಾಗಿತ್ತು. ಹೊಸಹೊಸ ಸೇನೆ ಕೂಡಿಸಿ ಕಳಿ ಸುವುದು, ಅದರ ವೆಚ್ಚ ಹೊರುವುದು, ಸರಬರಾಯಿಗೆ ಏರ್ಪಾಡು ಮಾಡು ವುದು–ಇದೆಲ್ಲದರ ಜೊತೆಗೆ ಸಕಲ ಸಿದ್ಧತೆಗಳೊಡನೆ ದಾಳಿ ಮಾಡಿದ

ಮಿಹಿರಭೋಜನೊಂದಿಗೆ ಹೂಡಿದ ಈ ಸಮರದ ಪರಿಣಾಮ ಹೇಗಾಗುವುದೋ ಎಂಬ ಚಿಂತೆ. ಸಮರಾಂಗಣದಿಂದ ದಿನಕ್ಕೊಂದು ಬಗೆಯ ಸುದ್ದಿ ಬಂದು ಚಕ್ರವರ್ತಿಗಳ ಚಿತ್ತವನ್ನು ಕಲಕುತ್ತಿತ್ತು. ಈ ಹೊತ್ತಿನಲ್ಲೇ ಮಗನ ನೀತಿಪತನದ ಸುದ್ದಿಯೂ .ಬೇಹುಗಾರರ ನಾಯಕನಿಂದ ತಿಳಿದು, ಸಿಡಿಲು ಬಡಿದಂತಾದರು ಚಕ್ರವರ್ತಿಗಳು.

ಏನು ಮಾಡಬೇಕೆಂಬುದೇ ದಿಕ್ಕುತೋಚದಂತಾಯಿತು ಅವರಿಗೆ. 'ಮಗ ದುಷ್ಟ ಸಹವಾಸದ ಆಮಿಷಗಳಿಗೆ ಬಲಿಯಾಗಿದ್ದಾನೆ' ಎಂಬುದನ್ನು ಕೇಳಿ ಮಾನಧನರಾಗಿ ಬಾಳಿದ ಚಕ್ರವರ್ತಿಗಳಿಗೆ, ಅರಮನೆಯಲ್ಲಿ ಸುತ್ತಿಸಿ, ಸುತ್ತಿಸಿ ಚಾವಟಿಯಿಂದ ಹೊಡೆದಂತಾಯಿತು. ಹತ್ತು ಕಡೆಯಿಂದ ಕಲ್ಲು ಬೀರಿದ ಕೊಳದ ನೀರಿನಂತಾಯಿತು ಅವರ ಮನಸ್ಸು. ಕೆಟ್ಟದಾರಿಗೆ ಬಿದ್ದವನು ಮಗ, ಮುಂದಕ್ಕೆ ಚಕ್ರವರ್ತಿಯಾಗಬೇಕಾದ ರಾಜಕುಮಾರ; ಆತನ ಪತನದ ಸುದ್ದಿ ಹೇಳುವವನು, ನಾಳೆ ಆತನಿಂದ ಆಳಲ್ಪಡಬೇಕಾದ ಬೇಹುಗಾರ! ಅರಮನೆಯ ಮರ್ಯಾದೆ, ರಾಜಧಾನಿಯ ವೇಶ್ಯಾವಾಟಿಯಲ್ಲಿ ಬೆತ್ತಲೆಯಾಗಬೇಕೇ? ಎಷ್ಟುಜನ ಪೌರರು ಅರಮನೆಯ ಈ ಸೌಭಾಗ್ಯವನ್ನು ಆಡಿಕೊಂಡು ನಗುತ್ತಿರಬಹುದು; ಎಷ್ಟು ಜನ ಈ ಮನೆಯ ಗೌರವವನ್ನು ಹೀಗಳೆದು ಮೂಗುಮುರಿಯುತ್ತಿರಬಹುದು; ಓಲಗದಲ್ಲಿ ಮೊಗವೆತ್ತಿ ಕೂಡಲು ಸಾಧ್ಯವೇ? ಅಡ್ಡದಾರಿ ಹಿಡಿದ ರಾಜಕುಮಾರನನ್ನು ಪಡೆದ ಚಕ್ರವರ್ತಿಯಾಗಿ, ಕೆಟ್ಟ ಮಗನನ್ನು ಪಡೆದ ತಂದೆಯಾಗಿ, ಬೆಂಕಿಯ ಬಲೆಯಲ್ಲಿ ಬಿದ್ದ ಮಿಗವಾಗಿ ಹೊಯ್ದಾಡಿದರು ಚಕ್ರವರ್ತಿಗಳು. ಅರಮನೆಯ ಕಂಭವೂ ಅವರನ್ನು ಅಣಕಿಸಿ ನಕ್ಕಂತಾಯಿತು. ಮಹಾರಾಜ್ಞಿಯವರು ಅಂದು ಆಡಿದ ಮಾತು—

'ನನಗಿಂದು ಅರಿವಾಗಿದೆ. ನಾನು ಹಡೆದುದು ಮಗನನ್ನಲ್ಲ, ದುಃಖವನ್ನು'

—ಎಂದುದು ಅಂತಃಪುರದ ಮೂಲೆಮೂಲೆಯಿಂದಲೂ ಮಾರ್ದನಿಸಿ, ಚಕ್ರವರ್ತಿಗಳ ಚಿತ್ತಕ್ಕೆ ಮುತ್ತಿಗೆ ಹಾಕಿತು.

'ಕೃಷ್ಣಾ ಈ ಅಪಮಾನದ ಸುರಿಗೆಯಿಂದ ಇರಿವ ಬದಲು ವಿಷವಿಡಬಾರದಾಗಿತ್ತೇ'

—ಎಂದು ಹಂಬಲಿಸಿ ಹಲುಬಿದರು, ಉರೆಗೋಲುಗಳನ್ನು ಕಳೆದುಕೊಂಡ ಹೆಳವನಂತೆ.

‘ಮಗ! ಮಗ! ಕುಲೋದ್ಧಾರಕನಾದ ಪುತ್ರ! ಹೆಮ್ಮೆಪಡು ಇಂಥ ಪುತ್ರನನ್ನು ಪಡೆದುದಕ್ಕೆ’

—ಎಂದು ತಮ್ಮನ್ನು ತಾವೇ ಹಿಯಾಳಿಸಿಕೊಂಡು ಹೊಯ್ದಾಡಿದರು.

ಈ ಮಗನನ್ನು ದಾರಿಗೆ ತರುವುದು ಹೇಗೆ? ಹೇಗೆ ಅವನಿಗೆ ಬುದ್ಧಿವಾದ ಹೇಳುವುದು? ಯಾರಿಂದ ಹೇಳಿಸಲು ಸಾಧ್ಯ—ತಾವೇ ಯಾರ ಮುಂದೆ ಈ ಮಾನಗೇಡಾದ ಸುದ್ದಿಯನ್ನು ತೋಡಿಕೊಂಡು ಜೀವಿಸುವುದು? ಯಾರ ಆಸರ ಎದೆಯನ್ನು ಈ ಉರಿವಾರ್ತೆ ದಹಿಸುತ್ತಿರುವ ಹೊತ್ತಿನಲ್ಲಿ? ಈ ದುಃಖದ ಕಡಲಿನ ನಡುವೆ ತಮ್ಮನ್ನು ಕೈಬಿಟ್ಟು ಹೋದ ಮಡದಿಯನ್ನು ನೆನೆದುಕೊಂಡರು.

‘ಲಕ್ಷ್ಮೀ, ನಿನ್ನೊಂದಿಗೆ ನನ್ನನ್ನೂ ಏಕೆ ಕರೆದೊಯ್ಯಲಿಲ್ಲ? ನಿನ್ನನ್ನು ಒಯ್ದ ಕಾಲ ನನ್ನನ್ನೇಕೆ ಬಿಟ್ಟುಹೋದ. ಅಂತಕನ ದೂತರೂ ಮುಟ್ಟಲು ಹೇಸುವಷ್ಟು ದೂಷಿತವೇ ನನ್ನ ಬಾಳು? ಲಕ್ಷ್ಮೀ....ಎಲ್ಲಿರುವೆ ಲಕ್ಷ್ಮೀ ಈ ಹೊತ್ತಿನಲ್ಲಿ?’

—ಎಂದು ತಾಯನ್ನಗಲಿದ ಕರುವಿನಂತೆ ಹಂಬಲಿಸಿದರು—ಬಾಳು ಬೇಸರವಾಗಿ, ಹಗಲು ಹೊರೆಯಾಗಿ, ಇರುಳು ಉರಿಯಾಗಿ, ಅನ್ನ ವಿಷವಾಗಿ.

ಒಮ್ಮೊಮ್ಮೆ ಮಗನ ನಡತೆಯನ್ನು ನೆನೆದು ಸಿಟ್ಟಾಗುವರು. ಇನ್ನೊಮ್ಮೆ ಕಂಬನಿ ಇಡುವರು. ಅಪಮಾನದ ಭಾವನೆಯಲ್ಲಿ ಬೇಯುವರು. ನಾಚಿಕೆಯಲ್ಲಿ ಸೊರಗುವರು. ಮೈಗೆ ಹಾವು ಹತ್ತಿದವರಂತೆ ಭಯ ವಿಸ್ಮಯಗಳಲ್ಲಿ ಆಂದೋಲಿತರಾಗುವರು. ಆದರೆ ಇದೆಲ್ಲದರಿಂದ ಆ ಚಿಂತೆ ಪರಿಹಾರವಾಗುವುದೇ? ಕಡೆಗೆ ಬೇರಾವ ದಾರಿಯೂ ಕಾಣದೆ, ತಮಗೆ ಮೊಗಗೊಡದೆ ಸುತ್ತುವ ರಾಜಕುಮಾರನನ್ನು ಅಂತಃಪುರದ ಆಪ್ತಾಲೋಚನಾಗೃಹಕ್ಕೆ ಕರೆಸಿಕೊಂಡರು. ತಮ್ಮೆದುರು ಬಂದುನಿಂತ ಮಗನನ್ನು ನೋಡಿ, ಬಹಳ ಹೊತ್ತು, ಹೇಗೆ ನಾಲಿಗೆ ನುಡಿಯಲು

ಹೇಸುವ ಆ ವಿಷಯವನ್ನು ಆರಂಭಿಸಬೇಕೆಂದು ಚಿಂತಿಸಿದರು. ಏಕೋ ಅವನ ಮೊಗವನ್ನು ನೋಡುವುದೂ ಅವರಿಂದ ಸಾಧ್ಯವಾಗಲಿಲ್ಲ. ಸುಮ್ಮನೆ ತಾವೇ ತಲೆತಗ್ಗಿಸಿ ಕುಳಿತರು. ಎಷ್ಟುಹೊತ್ತಾದರೂ ತಂದೆ ಮಾತನ್ನು ಆರಂಭಿಸದುದನ್ನು ಕಂಡು, ರಾಜಕುಮಾರನೇ ಕೇಳಿದ—

'ಏನು ಅಪ್ಪಾಜಿ ಹೇಳಿ ಕಳಿಸಿದಿರಿ ?'

ಕೃಷ್ಣನೇ ಮಾತು ಆರಂಭಿಸಿದುದರಿಂದ ಚಕ್ರವರ್ತಿಗಳೂ ಮಾತಾಡಲು ಅನುಕೂಲವಾಯಿತು. ಆಗಲೂ ಬಹಳ ಹೊತ್ತು ಚಿಂತಿಸಿ, ಚಿಂತಿಸಿ ಹೇಳಿದರು—

'ಕೃಷ್ಣಾ....'

'ಏನು ಅಪ್ಪಾಜಿ ?'

'ನೀನೀಗ ಪ್ರಾಪ್ತ ವಯಸ್ಕ. ಹದಿನಾರು ವರ್ಷ ಮೀರಿದ ಮಗ ನನ್ನ ಮಿತ್ರನಂತೆ ಕಾಣಬೇಕೆಂಬುದು ಶಾಸ್ತ್ರ ವಚನ. ಆದ್ದರಿಂದ ಈ ದಿನ ನಿನ್ನೊಂದಿಗೆ ಮನಬಿಚ್ಚಿ ಮಾತಾಡುತ್ತೇನೆ ಕೃಷ್ಣಾ....'

'ಹೇಳಿ ಅಪ್ಪಾಜಿ?'

'ಮಕ್ಕಳಿಂದ ತಂದೆ ತಾಯಿಗಳು ಏನು ಬಯಸುತ್ತಾರೆ ಬಲ್ಲೆಯಾ ಕೃಷ್ಣಾ ?'

'ಏನು?'

'ಧನ, ಪ್ರತಿಷ್ಠೆ, ಸೇವೆ ಯಾವುದನ್ನೂ ಬಯಸುವುದಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಬಯಸುವುದು—ಪುತ್ರನಿಂದ ತಮ್ಮ ಮನೆತನಕ್ಕೆ ಕಲಂಕ ಬರಬಾರದು; ಆತನೂ ಕೀರ್ತಿವಂತನಾಗಿ ಬಾಳಬೇಕು—ಇಷ್ಟೇ ಅವರು ಬಯಸುವುದು.'

'ಸರಿ ಅಪ್ಪಾಜಿ....'

'ಸಾಕಿ ಸಲಹಿ, ಅಕ್ಕರೆ ಪಟ್ಟು, ಕನಸು ಕಂಡವರಿಗಾಗಿ ಅಷ್ಟಾದರೂ ಮಾಡಬೇಕಾದದ್ದು ಧರ್ಮವಲ್ಲವೇ ಕೃಷ್ಣಾ? ಮಗ ಎಂದರೆ ಬಂಕರಸರ ಮಗ ಲೋಕಾದಿತ್ಯರು ಇದ್ದಹಾಗಿದ್ದರೆ, ಅಂಥ ಮಗನನ್ನು ಹಡೆದವರ ಬದುಕೂ ಸಾರ್ಥಕ, ಆತನ ಬಾಳೂ ಸಾರ್ಥಕ. ಅಲ್ಲವೇ ಕೃಷ್ಣಾ?'

ಲೋಕಾದಿತ್ಯನ ಹೆಸರು ಕೇಳಿದ ಕೂಡಲೇ ಕೃಷ್ಣ ಸದ್ದು ಕೇಳಿದ ಸರ್ಪದಂತೆ ಸೆಟೆದು ನಿಂತ.

'ಅಪ್ಪಾಜಿಯವರಿಗೆ ಲೋಕಾದಿತ್ಯನ ವಿಷಯದಲ್ಲಿರುವ ಅಭಿಮಾನವನ್ನು ನಾನು ಬಲ್ಲೆ. ಆದ್ದರಿಂದ ಅವನ ಹೆಸರು ಎತ್ತದೆ, ನನಗೆ ಹೇಳಬೇಕಾದುದನ್ನು ನೇರವಾಗಿ ಹೇಳಬಹುದು ಅಪ್ಪಾಜಿ.'

ಆ ಮಾತು ಆಡುವಾಗ ರಾಜಕುಮಾರನ ಧ್ವನಿಯಲ್ಲಿ ಮೂಡಿದ ಬಿರುಸನ್ನು ಕಂಡು ಚಕ್ರವರ್ತಿಗಳ ಹೃದಯಕ್ಕೆ ಮುಳ್ಳು ಮುರಿದಂತಾಯಿತು. ಆದರೂ ಆ ವ್ಯಥೆಯನ್ನು ತೋರಗೊಡದೆ—

'ನಾವು ಹೇಳಬೇಕೆಂದಿದ್ದುದಿಷ್ಟೇ ಕೃಷ್ಣಾ—ರಾಜಕುಮಾರರು ತಮ್ಮ ಸ್ಥಾನಕ್ಕೆ ಕುಂದುತರುವವರೊಂದಿಗೆ ಸ್ನೇಹ ಬೆಳೆಸಬಾರದು.'

'ನಾನು ಅಂಥವರೊಂದಿಗೆ ಸ್ನೇಹ ಬೆಳೆಸಿರುವೆನೆಂದು ಯಾರಾದರೂ ಹೇಳಿದರೇ ಅಪ್ಪಾಜಿ?'

'ಅಂಥವರೊಂದಿಗೆ ನೀನಿದ್ದುದನ್ನು ಕಣ್ಣಾರೆ ಕಂಡವರು ಹೇಳಿದರು.'

'ಅದು ಸುಳ್ಳು ಸುದ್ದಿ. ನಿಮ್ಮ ಮನಸನ್ನು ಕೆಡಿಸಲು ಹೂಡಿದ ಕುಹಕ.'

'ಅದು ಹಾಗಾಗಲೆಂದೇ ನಾನು ಬಯಸುತ್ತೇನೆ ಕೃಷ್ಣಾ, ಆದರೆ ಅದು ಕುಹಕದ ಮಾತಲ್ಲ, ನಾನು ಬಲ್ಲೆನು. ಅವರಾಡಿದುದು ನಿರಾಧಾರವಾದ ಆರೋಪವಲ್ಲ. ನನಗೆ ನಂಬಿಕೆಯಿದೆ.'

'ನನ್ನ ಮಾತುಗಳಿಗಿಂತ ತಮಗೆ ಪರರ ಮಾತಿನಲ್ಲೇ ಹೆಚ್ಚು ನಂಬಿಕೆ ಇರುವಂತಿದೆ ಅಪ್ಪಾಜಿ. ನಂಬುವುದು ಬಿಡುವುದು ತಮ್ಮ ಚಿತ್ತ. ಆದರೆ ನನಗೆ ಬೇಕಾದವರೊಂದಿಗೆ, ನನ್ನಲ್ಲಿ ಅಕೃತ್ರಿಮ ವಿಶ್ವಾಸವಿಟ್ಟುಕೊಂಡಿರುವವರಲ್ಲಿ ಸ್ನೇಹ ಬೆಳೆಸುವಷ್ಟು ಸ್ವಾತಂತ್ರ್ಯವಾದರೂ ನನಗಿದೆ, ಅಲ್ಲವೇ, ಅಪ್ಪಾಜಿ?!'

ಕರ್ಕಶವಾಗಿ, ನಸುವ್ಯಂಗ್ಯ ಬೆರೆತ ಧ್ವನಿಯಲ್ಲಿ ಕೇಳಿದ ರಾಜಕುಮಾರ ಕೃಷ್ಣ. ಹಿಂದೆಂದೂ ಅವನು ಚಕ್ರವರ್ತಿಗಳೊಂದಿಗೆ ಈ ರೀತಿ ಮಾತನಾಡಿರಲಿಲ್ಲ. ಅವನ ಮಾತಿನ ರೀತಿಯಲ್ಲಿ ಮಗ ತಂದೆಯೊಡನೆ

ಮಾತನಾಡುವ ರೀತಿಗಿಂತ ಹೆಚ್ಚಾಗಿ, ಸಮಾನರೊಂದಿಗೆ ಸೆಣಸಿ ವಾಗ್ವಾದ ಮಾಡುವ ಒಗರಿತ್ತು. ಅದು ಅರಿವಾಗಿ ಚಕ್ರವರ್ತಿಗಳ ಹೃದಯವನ್ನು ಹಿಂಡಿದಂತಾಯಿತು. ಹಾಗೂ ಅದನ್ನು ತೋರಗೊಡದೆ—

'ನಿನಗೆ ಸ್ವಾತಂತ್ರ್ಯವಿಲ್ಲದಿಲ್ಲ ಕೃಷ್ಣ, ಆದರೆ ಸ್ವಾತಂತ್ರ್ಯ ಸ್ವಚ್ಛಂದಾಚರಣೆಗೆ ರಹದಾರಿಯಲ್ಲ, ಅದು ಹೊಣೆಗಾರಿಕೆಯ ಅರಿವಿನ ಸುವರ್ಣ ಶೃಂಖಲೆ. ಇತರರ ಮಾತು ಹೇಗಾದರೂ ಇರಬಹುದು. ಆದರೆ ರಾಜಕುಮಾರರು, ಯಾರಿಗೂ ತಮ್ಮ ಸ್ನೇಹವನ್ನು ಅರ್ಪಿಸುವಾಗ ಬಹು ಎಚ್ಚರವಾಗಿರಬೇಕು.'

'ನಾನು ರಾಜಕುಮಾರನೆಂಬುದು ಇಂದಾದರೂ ಅಪ್ಪಾಜಿಯವರಿಗೆ ನೆನಪಾಯಿತು. ನಾನು ಭಾಗ್ಯವಂತ!'

—ಕಠೋರ ವ್ಯಂಗ್ಯದ ಕೂರಂಬುವಿನಿಂದ ಚಕ್ರವರ್ತಿಗಳ ಎದೆಯನ್ನಿರಿದು ರಾಜಕುಮಾರ ಹೇಳಿದ.

'ಇದೇನು ಮಾತು ಕೃಷ್ಣ?'—ಎಂದು ಕಾತರವಾಗಿ ಕೇಳಿದರು.

'ಅಂದು ಆಸ್ಥಾನದಲ್ಲಿ, ಆಸ್ಥಾನ ಕರಣಿಕರ ಮಾತಿಗೆ ಬೆಲೆಗೊಟ್ಟು, ನನ್ನನ್ನು ಸಭಿಕರೆಲ್ಲರಿದಿರು ತೇಜೋವಧೆ ಮಾಡುವಾಗ ನಾನು ರಾಜಕುಮಾರನೆಂಬುದು ಅಪ್ಪಾಜಿಯವರಿಗೆ ನೆನಪಿರಲಿಲ್ಲ. ಈಗ ನೆನಪಾಯಿತು—ಮತ್ತೊಂದು ರೀತಿಯಲ್ಲಿ ಮುಖ ಮುರಿಯಲು. ನನ್ನ ಮುಖಭಂಗ ಮಾಡುವುದು ಅಪ್ಪಾಜಿಯವರಿಗೆ ತುಂಬಾ ಪ್ರೀತಿಯ ವಿಷಯವೇನೋ.'

ಅವನ ಮಾತು ಕೇಳಿ ದುಃಖ–ಸಿಟ್ಟುಗಳೆರಡೂ ನಾನು ಮುಂದೆ, ತಾನುಮುಂದೆ ಎಂದು ನುಗ್ಗಿ ಬಂದವು ಚಕ್ರವರ್ತಿಗಳ ಎದೆಯಲ್ಲಿ. ಕೊಂಚ ಬಿರುಸಾದ ಧ್ವನಿಯಲ್ಲಿ ಹೇಳಿದರು—

'ಈ ರೀತಿ ಮಾತನಾಡುವುದು ನಿನಗೆ ಶೋಭಿಸುವುದಿಲ್ಲ ಕೃಷ್ಣ.'

'ನಿಜ. ನಾನು ಮಾಡುವ ಯಾವುದೂ ತಮಗೆ ಶೋಭಿಸುವುದಿಲ್ಲ. ನಾನು ಬಲ್ಲೆ ಅಪ್ಪಾಜಿ. ಲೋಕಾದಿತ್ಯನನ್ನುಳಿದು ಬೇರಾರೂ ತಮಗೆ ಮೆಚ್ಚುಗೆಯಾಗುವುದಿಲ್ಲ. ಅವನ ಮುಂದೆ ರಾಜಕುಮಾರ ಯಾವ ಗಿಡದ ತೊಪ್ಪಲು.'

'ನಿಜ ಕೃಷ್ಣಾ, ನೀನಾಡುವುದು ನಿಜ. ರಾಜಕುಮಾರರು ಲೋಕಾದಿತ್ಯರ ಹಾಗಾಗಿದ್ದರೆ ನಮ್ಮ ಹೆಮ್ಮೆಗೆ ಚಿನ್ನದ ಕೋಡು ಮೂಡುತ್ತಿತ್ತು.'

'ಗುಣಭದ್ರಾಚಾರ್ಯರೂ ಹಾಗೇ ಹೇಳುತ್ತಾರೆ. ಅಲ್ಲವೇ ಅಪ್ಪಾಜಿ?'

ಧೂರ್ತವಿನಯದಿಂದ ಕೇಳಿದ ಕೃಷ್ಣ.

'ಆಚಾರ್ಯರೇನು, ಲೋಕವೇ ಹಾಗನ್ನುತ್ತದೆ ಕೃಷ್ಣಾ.'

'ಲೋಕ ಹಾಗೆನ್ನಬೇಕೆಂಬುದೇ ಲೋಕಾದಿತ್ಯನ ಅಪೇಕ್ಷೆ. ತಮ್ಮನ್ನು ನಾನು ಒಂದು ಮಾತು ಕೇಳಬಹುದೇ ಅಪ್ಪಾಜಿ?'

'ಕೇಳು.'

'ಸೇನಾಧಿಪತಿಯ ಆಯ್ಕೆಗೆ ಆ ಪರೀಕ್ಷೆಯನ್ನು ಸೂಚಿಸಿದವರು ಯಾರು ಅಪ್ಪಾಜಿ?'

'ಅದು ಭರತೋಕ್ತ ರಾಜನೀತಿ.'

'ಇರಬಹುದು ಅಪ್ಪಾಜಿ, ಆದರೆ ನಿಮಗೆ ಅದನ್ನು ಸೂಚಿಸಿದವರು ಯಾರು?'

'ಗುಣಭದ್ರಾಚಾರ್ಯರು.'

'ನಾನು ಊಹಿಸಿದುದು ಸುಳ್ಳಾಗಲಿಲ್ಲ! ಅಪ್ಪಾಜಿ–ನನ್ನ ಮಿತ್ರರು ಅಯೋಗ್ಯರೆಂದು ತಮ್ಮ ಶಂಕೆ. ಆದರೆ ಇಷ್ಟುಮಾತ್ರ ಹೇಳುತ್ತೇನೆ: ನನ್ನ ಮಿತ್ರರು ತಮ್ಮ ಮಿತ್ರರಂತೆ ವಿಶ್ವಾಸಘಾತುಕರಲ್ಲ, ರಾಜದ್ರೋಹಿಗಳಲ್ಲ, ಗೋಮುಖ ವ್ಯಾಘ್ರಗಳಲ್ಲ. ನನಗೆ ಬುದ್ಧಿವಾದ ಹೇಳುತ್ತೀರಿ ನಿಜ. ಹೇಳಬೇಕು. ಹಾಗೇ ನಿಮ್ಮ ಬುದ್ಧಿಯೂ ನಿಮ್ಮ ಕೈಯಲ್ಲಿರಲಿ ಅಪ್ಪಾಜಿ, ಇಲ್ಲವಾದಲ್ಲಿ ನೀವಾಗಲಿ, ನಾನಾಗಲಿ, ರಾಜ್ಯವಾಗಲಿ ಯಾವುದೂ ಉಳಿಯುವುದಿಲ್ಲ.'

—ಎಂದವನೇ ರಾಜಕುಮಾರ ಚಕ್ರವರ್ತಿಗಳ ಎದುರಿನಿಂದ ದಪ ದಪ ಕಾಲು ಹಾಕಿ ಹೊರಟುಹೋದ.

ಅವನಾಡಿದುದನ್ನು ಕೇಳಿ ಚಕ್ರವರ್ತಿಗಳ ತಲೆ ಗಿರ್ರನೆ ಸುತ್ತುತ್ತಿತ್ತು. ಕೃಷ್ಣನ ನಿಷ್ಠುರ ಮಾತು, ಅವಿಧೇಯತೆ, ಉದ್ಧಟತನಗಳು ಅವರ ಹೃದಯದಲ್ಲಿ ಕ್ರೋಧಕ್ಕಿಂತ ಹೆಚ್ಚಾಗಿ ದುಃಖವನ್ನೇ ಕಲಕಿದವು.

ಕೃಷ್ಣ ಕೈಮೀರುತ್ತಿದ್ದಾನೆಂಬುದು ಅವರಿಗೆ ಅರಿವಾಗಿತ್ತು, ಆದರೆ ಇಷ್ಟು ದೂರ ಹೋಗಿರಬಹುದೆಂದು ಅವರು ಕನಸು—ಮನಸಿನಲ್ಲಿಯೂ ಊಹಿಸಿರಲಿಲ್ಲ.

'ಕೃಷ್ಣಾ, ನಿನ್ನ ಬಾಳು ಈ ಪರಿಯಾಗಬೇಕೆಂಬುದೇ ದೈವೇಚ್ಛೆಯೋ' ಎಂದು ಬಿಸುಸುಯ್ದರು. ಹಾಗೇ ಚಿಂತಾಕ್ರಾಂತರಾಗಿ ಒರಗಿದರು. ಏನು ಮಾಡಬೇಕು, ಮುಂದೇನು ಮಾಡಬೇಕೆಂಬ ಚಿಂತೆ ತ್ರಿವಿಕ್ರಮನಂತೆ ಬೆಳೆದು ನೆಲಮುಗಿಲನ್ನಾವರಿಸಿ, ಅವರ ಶಿರದಮೇಲೇ ಕಾಲಿಟ್ಟು ನಿಂತಿತು. ಒಂದುಗಳಿಗೆ ಅವರ ಪಾಲಿಗೆ ಜಗತ್ತೇ ಬರಿದಾದಂತೆ ತೋರಿತು. ಮರುಗಳಿಗೆ ಅವರ ಮೈಯನ್ನು ಮರಗಟ್ಟಿಸುವ ಭೀತಿ ಮೂಡಿ, ಭೂತಾಕಾರ ತಳೆದು ನಿಂತಿತು.

'ಹಾಗಾಗದಿರಲಿ, ಹಾಗಾಗದಿರಲಿ, ದೇವಾ, ಹಾಗಾಗದಿರಲಿ'—ಎಂದು ವಿಹ್ವಲರಾಗಿ ಮೊರೆಯಿಟ್ಟರು.

ಮರುದಿನವೇ ಬೇಹುಗಾರರ ನಾಯಕನಿಗೆ,ರಾಜಕುಮಾರನ ಚಲನವಲನಗಳಮೇಲೆ, ಅವರ ಸಂಗಡಿಗರಮೇಲೆ ಕಟ್ಟೆಚ್ಚರದ ಬೇಹುಗಾವಲು ಹಾಕುವಂತೆ ಅಪ್ಪಣೆಮಾಡಿದರು.

## ೧೬

ಮಂಗಿಯ ಹೃದಯದಲ್ಲಿ ಆನಂದವೇ ಆನಂದ.

ಅವನ ಸಂಚು ಸಫಲವಾಗಿ, ರಾಷ್ಟ್ರಕೂಟ ಸಿಂಹಾಸನದ ಏಕೈಕ ವಾರಸುದಾರ ಅವನ ಕೈಗೊಂಬೆಯಾಗಿದ್ದ. ಬೆಂಕಿಯಿಂದಲೇ ಬೆಂಕಿಯನ್ನು ಗೆಲ್ಲಬೇಕೆಂಬ ಅವನ ತಂತ್ರ ಗೆಲುವಿನ ಫಲಕೊಡುವ ಕುರುಹು ದೋರಿತ್ತು.

ಎಲ್ಲ ಪರಿಸ್ಥಿತಿಗಳೂ ಅವನಿಗೆ ಅನುಕೂಲವಾಗಿತ್ತು. ದಿನದಿನಕ್ಕೆ ಎಳೆಯುವ ಉತ್ತರ ದಂಡಯಾತ್ರೆ, ಸೇನಾಸಂಪತ್ತನ್ನು ಬರಿದು ಮಾಡುತ್ತಿತ್ತು. ದಿನಕ್ಕೆ ಒಂದು ರೀತಿ ತೂಗುತ್ತಿದ್ದ ಆ ಸಮರರಂಗಕ್ಕೆ ತೆರಳಲು ಸದಾಸಿದ್ಧವಾಗಿರಲು ಸಕಲ ಪಡೆಗಳಿಗೂ ಅಪ್ಪಣೆ ಕೊಡಲಾಗಿತ್ತು. ಎಲ್ಲರ ದೃಷ್ಟಿಯೂ ಉತ್ತರದತ್ತ; ಎಲ್ಲರಿಗೂ ಅದರ ಪರಿಣಾಮ ಹೇಗೋ

ಎಂಬ ಚಿಂತೆ. ಇದು ದಕ್ಷಿಣದವರು ದಾಳಿ ಆರಂಭಿಸಲು ಸುಸಮಯ.

ದಕ್ಷಿಣದಲ್ಲಿ ನೀತಿಮಾರ್ಗ್ಗ ದಾಳಿ ಆರಂಭಿಸಿದ ಕೂಡಲೇ, ರಾಜಧಾನಿಯಲ್ಲಿ ರಾಜಪುತ್ರ ದಂಗೆಯೆದ್ದು ನಿಂತರೆ, ದೇಶದಲ್ಲೆಲ್ಲಾ ಯಾದವೀ ಕಲಹದ ಕಹಳೆ ಮೊಳಗಿ, ಅನಾಯಕತ್ವವಾಗಿ, ರಾಷ್ಟ್ರಕೂಟರಾಜ್ಯ, ಅಸ್ತಿಭಾರ ಸಡಲಿದ ಭವನದಂತೆ ತಾನೇ ಕಳಚಿಕೊಂಡು, ಬಾಳಿಯ ದಾರಿ ಸುಗಮವಾಗುತ್ತದೆ—ಎಂದು ಅವನ ಲೆಕ್ಕ.

ನೀತಿಮಾರ್ಗ್ಗನ ದಾಳಿ, ರಾಜಕುಮಾರನ ದೊಂಬಿ ಎರಡೂ ಏಕಕಾಲಕ್ಕೆ ಆರಂಭವಾಗಬೇಕೆಂದು, ಅತ್ತ ದಿನದಿನದ ಬೆಳವಣಿಗೆಯನ್ನು ಗಂಗರಾಜ್ಯಕ್ಕೆ ಕಳುಹಿಸುತ್ತಾ, ಇತ್ತ ರಾಜಧಾನಿಯಲ್ಲಿ ತನ್ನ ಕಾರಾಸ್ಥಾನವನ್ನು ಸಜ್ಜುಗೊಳಿಸುತ್ತಿದ್ದ. ರಾಜಕುಮಾರನಂತೂ ಅವನ ಕೈಯೊಳಗಿನ ದಾಳವಾಗಿದ್ದ. ಮಂಗಿ, ಜಯಂತಿಯರ ಮಾತು ಅವನಿಗೆ ವೇದವಾಕ್ಯವಾಗಿತ್ತು.

ಗುಣಭದ್ರಾಚಾರ್ಯರು ಸಿಂಹಾಸನದ ವಿರುದ್ಧ ಸಂಚುಮಾಡುತ್ತಿದ್ದಾರೆಂಬುದನ್ನು ಜಯಂತಿಯ ಬಾಯಿಂದ ಕೇಳಿದಾಗ ರಾಜಕುಮಾರನಿಗೆ ಸಂಶಯವಾದರೂ ನಂಬಿರಲಿಲ್ಲ. 'ಲೋಕಾದಿತ್ಯನಿಗೆ ಸೇನಾಧಿಪತ್ಯವನ್ನು ಗಳಿಸಿಕೊಟ್ಟ ಪರೀಕ್ಷೆ ಗುಣಭದ್ರಾಚಾರ್ಯರು ಸೂಚಿಸಿದ್ದು. ನನ್ನ ಮಾತು ಸುಳ್ಳೆನ್ನುವುದಾದರೆ ಚಕ್ರವರ್ತಿಗಳನ್ನೇ ಕೇಳಿ' ಎಂದಿದ್ದಳು ಜಯಂತಿ. ಚಕ್ರವರ್ತಿಗಳ ಬಾಯಿಂದಲೂ ಅದೇಮಾತು ಬಂದು, ರಾಜಕುಮಾರನ ಸಂಶಯ ಸತ್ಯವೆಂದು ತೋರಿ, ರಾಜಕುಮಾರ ಕ್ರೋಧದಲ್ಲಿ ಕುದಿವ ಕಾಳಸರ್ಪವಾಗಿದ್ದ. ಆ ಕ್ರೋಧದಲ್ಲಿ ಏನು ಮಾಡಲೂ ಸಿದ್ಧವಾಗಿದ್ದ.

ಅರಮನೆಯಿಂದ ಹೊರಬಿದ್ದು ಬಂದವನೇ ಆ ಮೂವರಿಗೂ ನಡೆದುದನ್ನು ತಿಳಿಸಿ—

'ನೀನಾಡಿದ ಮಾತೇ ನಿಜವಾಯಿತು ಜಯಂತಿ. ಈಗ ಉಳಿದಿರುವುದೊಂದೇ. ಈ ವಿರೋಧಿಮಂಡಲವನ್ನು ಮಟ್ಟಹಾಕುವುದು. ನೀನು ಹೇಳಿದಾಗ ನಾನು ನಂಬಿರಲಿಲ್ಲ. ಈಗ ಗೊತ್ತಾಯಿತು—ಅದರಲ್ಲಿ ಏನೂ ಉತ್ಪ್ರೇಕ್ಷೆ ಇರಲಿಲ್ಲ.' ಎಂದ.

‘ ರಾಜಕುಮಾರರ ಮುಂದೆ ಸುಳ್ಳಾಡಿದವರ ನಾಲಿಗೆಯನ್ನು ಹರಿದು ಬೇಟೆಯ ನಾಯಿಗೆ ಊಟಕ್ಕೆ ಬಡಿಸಬೇಕು. ಈಗ ಮುಂದೇನು ಮಾಡುತ್ತೀರಿ ಪ್ರಭು?’ ಎಂದಳು ಜಯಂತಿ.

‘ ಕತ್ತಲಲ್ಲಿದ್ದವನಿಗೆ ಬೆಳಕು ತೋರಿದವರು ನೀವು, ನೀವೇ ಹೇಳಿ–ಮುಂದೇನು?’—ರಾಜಕುಮಾರ ಕೇಳಿದ.

‘ ನಾವು ಪ್ರಭುಗಳ ಸೇವಕರು. ತಂದೆ ಮಕ್ಕಳಲ್ಲಿ ವಿರಸವಾಗಬಹುದಾದ ಈ ಸಂದರ್ಭದಲ್ಲಿ ಏನು ಹೇಳಲೂ ನಮಗೆ ಧೈರ್ಯವಿಲ್ಲ, ಪ್ರಭು. ನೀವೇ ನಿರ್ಧಾರಮಾಡಿ. ತಮ್ಮ ಅಪ್ಪಣೆಯಂತೆ ನಡೆಯಲು ನಾವು ಸಿದ್ಧ ’ ಎಂದ ಮಂಗಿ, ವಿಧೇಯ ಸೇವಕನಂತೆ.

‘ ಹೆದರಬೇಡಿ, ಹೇಳಿ. ಶಂಕರಗಣ ನೀನೇ ಹೇಳು—ಈಗೇನು ದಾರಿ?’

‘ ಇಂಥ ಸಂದರ್ಭದಲ್ಲಿ ದಾರಿತೋರಲು ಮಂಗಿಯರಸರೇ ಶಕ್ತರು. ಈ ಸಂಚಿನ ಪತ್ತೆ ಹಚ್ಚಿದವರು ಅವರು. ಅವರೇ ಪ್ರತೀಕಾರೋಪಾಯವನ್ನೂ ಸೂಚಿಸಬೇಕು’ ಎಂದ ಶಂಕಗಣ. ಜಯಂತಿಯೂ ಅವನ ಮಾತನ್ನೇ ಅನುಮೋದಿಸಿದಳು. ಅವರೆಲ್ಲರ ಮಾತನ್ನೂ ಕೇಳಿ ಬಹಳ ಹೊತ್ತು ಆಲೋಚಿಸಿದಂತೆ ಮಾಡಿ ಮಂಗಿ–

‘ ನಾನು ಹೇಳುವುದು ಅಪ್ರಿಯವಾದರೆ ಪ್ರಭುಗಳು ಕ್ಷಮಿಸಬೇಕು’ ಎಂದ.

‘ ಹೇಳಿ, ನಾನಾಗಲೇ ಅಭಯ ನೀಡಿದ್ದೇನಲ್ಲ.’

‘ ಈಗ ಪ್ರಭುಗಳು ತಮ್ಮ ಹಿತಾಹಿತಗಳನ್ನು ಮರೆತು, ರಾಜ್ಯದ ಹಿತದೃಷ್ಟಿಯಿಂದ ಕೆಲಸಮಾಡಬೇಕು.’

‘ ಸರಿಯೇ.’

‘ ರಾಜಕುಮಾರರಿಗೆ ವೈಯ್ಯಕ್ತಿಕ ವ್ಯಾಮೋಹಗಳಿಗಿಂತ, ರಾಜ್ಯದ ರಕ್ಷಣೆ ಪ್ರಧಾನವೆಂದು ನನ್ನ ಭಾವನೆ.’

‘ ಅದೂ ನ್ಯಾಯವೇ?’

‘ ಹಾಗೇ ಆರಂಭದಲ್ಲಿ ಕಹಿಯಾಗಿ ಕಂಡರೂ, ಪರಿಣಾಮದಲ್ಲಿ ಮಧುರವಾಗುವ ಕಾರ್ಯವನ್ನೇ ಮಾಡಬೇಕು.’

‘ ಅಹುದು.’

‘ ಅದನ್ನು ಪ್ರಭುಗಳು ಒಪ್ಪಿದರೆ–ಈಗ ಉಳಿದಿರುವುದೊಂದೇ ಮಾರ್ಗ. ಆ ವಂಚಕರು ನಂಬುಗೆಯ ಸ್ವಭಾವದ ಚಕ್ರವರ್ತಿಗಳನ್ನು ಬಲೆಗೆ ಹಾಕಿಕೊಂಡು, ಅವರ ಮೂಲಕ ತಮ್ಮ ಕುಹಕವನ್ನು ಸಾಧಿಸಿ ಕೊಳ್ಳುತ್ತಿರುವುದರಿಂದ, ಈಗ ಅವರ ವಿರುದ್ಧವಾಗಿ ಏನು ಹೇಳಿದರೂ ಚಕ್ರವರ್ತಿಗಳು ನಂಬುವುದಿಲ್ಲ. ಆದುದರಿಂದ ರಾಜಕುಮಾರರೇ, ಸತ್ಯ ಕ್ಕಾಗಿ ತಂದೆಯನ್ನೇ ಪ್ರತಿಭಟಿಸಿದ ಪ್ರಹ್ಲಾದನಂತೆ, ದಂಗೆಯೆದ್ದು, ರಾಜ ಧಾನಿಯಮೇಲೆ ದಾಳಿಮಾಡಿ, ಸಿಂಹಾಸನವನ್ನು ವಶಪಡಿಸಿಕೊಳ್ಳಬೇಕು. ಆ ಕಾರ್ಯದಲ್ಲಿ ಶಂಕರಗಣರು ರಾಜಕುಮಾರರಿಗೆ ತಮ್ಮ ಸೇನಾ ಸಹಾಯ ನೀಡಬೇಕು. ರಾಜಧಾನಿಯಲ್ಲಿ ಈಗ ಹೆಚ್ಚು ಸೇನಾಸಂಪತ್ತು ಇಲ್ಲದಿರುವುದರಿಂದ ಆ ಕಾರ್ಯ ಅಷ್ಟು ಕಷ್ಟವಾಗುವುದಿಲ್ಲ. ಲೋಕಾದಿತ್ಯ ನಂತೂ ದೂರದ ಭರುಕಚ್ಛದಲ್ಲಿದ್ದಾನೆ. ಅವನು ಇಲ್ಲಿಗೆ ಬರುವುದು ಸಾಧ್ಯವಾಗುವುದಿಲ್ಲ....’

‘ ಆದರೆ ಅವನ ತಂದೆ ಬಂಕರಸರು....’

‘ ಆ ಯೋಚನೆ ರಾಜಕುಮಾರರಿಗೆ ಬೇಡ. ಅವನನ್ನು ನೋಡಿ ಕೊಳ್ಳುವ ಜವಾಬದಾರಿ ನನಗಿರಲಿ. ಒಮ್ಮೆ ರಾಜಧಾನಿ ರಾಜಪುತ್ರರ ವಶವಾಯಿತೆಂದರೆ, ಬಳಿಕ ಈ ಸಂಚುಗಾರರನ್ನೆಲ್ಲಾ ಆನೆಯ ಕಾಲಿಗೆ ಕೊಟ್ಟು ತುಳಿಸಿ, ಬಳಿಕ ಚಕ್ರವರ್ತಿಗಳಿಗೆ ವಾಸ್ತವ ಸಂಗತಿಯನ್ನರುಹಿ, ಅವರ ಕ್ಷಮಾಪಣೆ ಬೇಡಬಹುದು. ಸತ್ಯವನ್ನು ಅರಿತಾಗ ಅವರಿಗೂ ಸಂತೋಷವಾಗುವುದರಲ್ಲಿ ಸಂಶಯವಿಲ್ಲ. ಆದರೆ ಈ ಕಾರ್ಯ ಯಶಸ್ವಿ ಯಾಗಲು, ಎಲ್ಲದಕ್ಕೂ ಮೊದಲು ರಾಜಕುಮಾರರು ಚಕ್ರವರ್ತಿಗಳ ವಿರುದ್ಧ ದೊಂಬಿ ಏಳಲು ಸಿದ್ಧರಾಗಬೇಕು.....’

‘ ಅವರ ಪರವಾಗಿ ನಾನು ಆ ಮಾತು ಕೊಡುತ್ತೇನೆ. ಸತ್ಯಕ್ಕಾಗಿ, ರಾಜ್ಯ ರಕ್ಷಣೆಗಾಗಿ, ಪ್ರಭುಗಳು ತಾತ್ಕಾಲಿಕವಾಗಿ ಅಪ್ರಿಯವಾದ ಈ ಕಾರ್ಯ ವನ್ನು ಮಾಡಲು ಹಿಂಜರಿಯುವುದಿಲ್ಲ: ಪ್ರಭುಗಳ ಸಿಂಹಾಸನರಕ್ಷಣಾ ಕಾಂಕ್ಷೆಯಲ್ಲಿ ಮಂಗಿಯರಸರಿಗೆ ಸಂದೇಹವೇ?’ ಎಂದು ಜಯಂತಿ ರಾಜ ಕುಮಾರರು ಆಡಬೇಕಾದ ಮಾತನ್ನು ತಾನೇ ಆಡಿದಳು, ರಾಜಕು

ಮಾರನ ಮೇಲೆ ಮೋಹೋನ್ಮಾದಕ ಕಟಾಕ್ಷದ ಸಮ್ಮೋಹನಾಸ್ತ್ರವನ್ನು ಬೀರಿ. ಅವಳ ಕಣ್-ನೋಟಕ್ಕೆ ಚಲಿಸುವ ಕೀಲುಗೊಂಬೆಯಂತೆ, ರಾಜ ಕುಮಾರ ಅವಳ ಮಾತಿಗೆ ತಲೆ ಹಾಕಿದ.

'ರಾಜಕುಮಾರರ ಸಮ್ಮತಿಯಿಂದ ನನ್ನ ಎದೆಯಮೇಲಿನ ಬಹು ದೊಡ್ಡ ಭಾರ ಇಳಿದಂತಾಯಿತು. ಇನ್ನು ಮುಂದಿನದು ಶಂಕರಗಣರ ಕೆಲಸ.'—ಎಂದು ಮಂಗಿ ಶಂಕರಗಣನತ್ತ ನೋಡಿದ.

'ನಾನೇನು ಮಾಡಬೇಕು?'

'ನಾಳೆಯೇ ಚಕ್ರವರ್ತಿಗಳಿಂದ ಅಪ್ಪಣೆ ಪಡೆದು, ತ್ರಿಪುರಿಗೆ ಹಿಂದಿರುಗಿ, ಆದಷ್ಟು ಸೇನೆಯೊಡನೆ ಗಡಿಯ ಬಳಿಯ ಕಿರಣಪುರಕ್ಕೆ ಬಂದು ಅಲ್ಲಿರಾಜಕುಮಾರರಿಗಾಗಿ ಕಾಯಬೇಕು. ರಾಜಕುಮಾರರು ಅಲ್ಲಿಗೆ ಬಂದೊಡನೆಯೇ, ಅವರನ್ನು ಚಕ್ರವರ್ತಿಗಳೆಂದು ಘೋಷಿಸಿ, ದಾಳಿಯನ್ನಾರಂಭಿಸಬೇಕು. ರಾಜಕುಮಾರರ ಹೆಸರಿನಲ್ಲಿ ದಾಳಿ ಆರಂಭಿಸುವುದರಿಂದ ಪ್ರಜೆಗಳೂ ನಿಮಗೆ ನೆರವಾಗುವರು. ವೇಗವಾಗಿ ಮಾನ್ಯಖೇಟದತ್ತ ನುಗ್ಗಿ. ಒಮ್ಮೆ ಸೇನೆಯೊಡನೆ ರಾಜಕುಮಾರರು ರಾಜಧಾನಿಯನ್ನು ಸೇರಿದರೆ, ರಾಜಧಾನೀ ತಾನೇ ಅವರನ್ನು ಎದುರುಗೊಂಡು ಶರಣಾಗತವಾಗುವುದರಲ್ಲಿ ಸಂಶಯವಿಲ್ಲ. ಅದಕ್ಕೆ ನಾನೂ ಇಲ್ಲಿ ಬೇಕಾದ ಸಿದ್ಧತೆಗಳನ್ನು ಮಾಡುತ್ತೇನೆ. ಆಗಬಹುದೇ?'

ಮಂಗಿಯ ಮಾತಿಗೆ ಶಂಕರಗಣ ಸಮ್ಮತಿ ಸೂಚಿಸಿದ. ರಾಜಕುಮಾರ ಏನೂ ಮಾತನಾಡದೆ ಸುಮ್ಮನಿರುವುದನ್ನು ಕಂಡು, ಜಯಂತಿ ನಗುತ್ತಾ—

'ಪ್ರಭುಗಳು ಚಕ್ರಾಧಿಪತ್ಯದ ಕನಸು ಕಾಣುತ್ತಿದ್ದೀರಾ! ಈಗಲೇ ನಮ್ಮನ್ನು ಮರೆತುಬಿಟ್ಟರೆ, ನಾಳೆ ಚಕ್ರವರ್ತಿಗಳಾದಂದು ನಮ್ಮ ನೆನಪು ಉಳಿದೀತೇ?' ಎಂದಳು.

'ಆಗ ಬರೀ ನೆನಪು ಉಳಿಯುವುದಿಲ್ಲ ಜಯಂತಿ, ಚಕ್ರಾಧಿಪತಿಯೊಂದಿಗೆ ಚಕ್ರಾಧಿಪತ್ಯವೇ ನಿನ್ನದಾಗುತ್ತದೆ.'

—ಎಂದ ರಾಜಕುಮಾರ. ಅವನ ಮಾತು ಕೇಳಿ ಎಲ್ಲರೂ

ನಸ್ಸರು. ಒಬ್ಬೊಬ್ಬರಿಗೂ ಒಂದೊಂದು ಬಗೆಯ ಬಯಕೆ ಸಫಲವಾಗುವ ಕನಸು.

೧೭

ದಾಳಿಯಾರಂಭಿಸಲು ಮಂಗಿಯಿಂದ ಸೂಚನೆ ಬರುವುದನ್ನೇ ಕಾಯುತ್ತಿದ್ದ ನೀತಿಮಾರ್ಗ್ಗ, ಅವನಿಂದ ಸುದ್ದಿ ಬರುತ್ತಿದ್ದ ಹಾಗೇ, ಯುದ್ಧ ಘೋಷಣೆ ಮಾಡಿ, ಸೇನೆಯನ್ನು ನುಗ್ಗಿಸಿದ. ಗಂಗರ ಮದ ಗಜಾಂಕಿತ ಪತಾಕೆ, ಮುಗಿಲೆತ್ತರ ಹಾರಿ ನಡೆದಿತು—ಸೀಮೊಲ್ಲಂಘನೆ ಮಾಡಿ. ಈ ಅನಿರೀಕ್ಷಿತ ದಾಳಿಗೆ ಸಿಕ್ಕ ರಾಷ್ಟ್ರಕೂಟ ಗಡಿದುರ್ಗಗಳು ಪ್ರತಿಭಟಿಸಲಾಗದೆ ಸೋತವು. ಹಾಗೂ ರಾಜಾರಮಡುವಿನಲ್ಲಿ, ರಾಷ್ಟ್ರಕೂಟ ಸಾಮಂತ ಬಾಣವಿದ್ಯಾಧರ, ನೆರವಿಗೆ ಬಂದ ರಾಷ್ಟ್ರಕೂಟ ಸೇನೆಗಳೊಡನೆ ಗಂಗಬಲವನ್ನು ಇದುರಿಸಿದ. ರಾಜಾರಮಡು ಇಬ್ಬಣಗಳ ಸೇನೆಯ ರಕ್ತದ ಮಡುವಾಯಿತು. ಎಷ್ಟು ಉಗ್ರವಾಗಿ ಪ್ರತಿಭಟಿಸಿದರೂ, ಸಾಕಷ್ಟು ಸಿದ್ಧತೆ ಇಲ್ಲದ ರಾಷ್ಟ್ರಕೂಟರ ಅಲ್ಪ ಬಲ, ಸಕಲ ಸಿದ್ಧತೆಯನ್ನು ಮಾಡಿಕೊಂಡ ಗಂಗಬಲದಿದಿರು ಸೋಲಬೇಕಾಯಿತು. ಬಾಣವಿದ್ಯಾಧರ ಸಮರಭೂಮಿಯಲ್ಲೇ ಸ್ವರ್ಗಸ್ಥನಾಗಿ, ಅವನ ಮಗ ವಿಜಯಾದಿತ್ಯ ಬಾಣ, ಬೇರೆ ದಾರಿಗಾಣದೆ, ಗಂಗರ ಪ್ರಭುತ್ವವನ್ನೊಪ್ಪಿಕೊಂಡ. ರಾಜರಮಡುವಿನ ರಣಾಂಗಣದಲ್ಲಿ ರಾಷ್ಟ್ರಕೂಟ ಗರುಡ ಧ್ವಜ ಕೆಳಗಿಳಿದು, ಅದರ ಮುಡಿಯಮೇಲೆ ಗಂಗರ ಗಜಪತಾಕೆ ಹಾರಿತು.

ಗುಡ್ಡದ ಕೋಡುಗಳ ಮೇಲೆ ಹೊತ್ತಿಸಿದ ಅಪಾಯಸೂಚಕ ಬೆಂಕಿಗಳ ಮೂಲಕ, ಕೋಟೆಯಿಂದ ಕೋಟೆಗೆ ಸುದ್ದಿ ಮಿಂಚಿನ ವೇಗದಿಂದ ನಡೆದು ಬಂಕರಸರನ್ನು ಸೇರಿತು.

ಈ ಸುದ್ದಿ ಕಿವಿ ಸೋಕಿದ ಕೂಡಲೇ ಬಂಕರಸರು ಕೆಣಕಿದ ಕಾಳಸರ್ಪದಂತೆ ಪ್ರಕ್ಷುಬ್ಧವಾಗಿ ಸಿಡಿದು ನಿಂತರು. ಗಂಗರ ಕೃತಘ್ನತೆಯನ್ನು ನೆನೆದು ಅವರ ಹೃದಯ ಕ್ರೋಧ ಕರ್ಕಶವಾಯಿತು. ನಾಲ್ಕಾರು ವರ್ಷ ಮಾನ್ಯಖೇಟದ ಕಾರಾಗೃಹದಲ್ಲಿ ನರಳುತ್ತಿದ್ದ ಗಂಗ ಶಿವಮಾರನಲ್ಲಿ ಗೋವಿಂದ ಪ್ರಭೂತವರ್ಷರು ಕೃಪೆದೋರಿ, ಮತ್ತೆ ತಲವನಪುರದಲ್ಲಿ ಅವನಿಗೆ ಪಟ್ಟಗಟ್ಟಿ, ತಾವೇ ಸ್ವಹಸ್ತದಿಂದ ಅವನ ಶಿರದ ಮೇಲೆ

ಮುಕುಟವಿಟ್ಟಿದ್ದರು. ಅವನೇ ಚಕ್ರವರ್ತಿಗಳ ಸೋದರ ಕಂಭರಸರನ್ನು ಕೂಡಿಕೊಂಡು ಕೃತಘ್ನನಾಗಿ, ರಾಷ್ಟ್ರಕೂಟರ ಮೇಲೆ ಕತ್ತಿ ಎತ್ತಿ, ಸೋತು ಒದೆತಿಂದ ನಾಯಂತೆ ಹಲ್ಲುಕಿರಿದಿದ್ದ. ಆಗಲೂ ಗೋವಿಂದ ಚಕ್ರವರ್ತಿಗಳು ಕರುಣೆದೋರಿ ಅವನ ರಾಜ್ಯವನ್ನು ಅವನಿಗೇ ನೀಡಿದ್ದರು. ಆ ಉಪಕಾರಕ್ಕೆ, ಅವನ ತಮ್ಮನ ಮೊಮ್ಮಗ ನೀತಿಮಾರ್ಗ್ಗ ಈ ಪ್ರತ್ಯುಪಕಾರ ಮಾಡುತ್ತಿದ್ದಾನೆ—ಚಕ್ರವರ್ತಿಗಳು ಉತ್ತರದ ದಂಡಯಾತ್ರೆಯಲ್ಲಿ ನಿರತರಾದ ಹೊತ್ತಿನಲ್ಲಿ, ದಕ್ಷಿಣದಲ್ಲಿ ದಾಳಿಯಾರಂಭಿಸಿ.

ಬಂಕರಸರು ಕ್ರೋಧದ ಜ್ವಾಲಾಮುಖಿಯಾದರು. ಅವರ ಬಳಿಯೂ ಹೆಚ್ಚು ಸೇನೆಯಿರಲಿಲ್ಲ. ಬಹುಭಾಗ ಲೋಕಾದಿತ್ಯನ ಹಿಂದೆ ತೆರಳಿತ್ತು. ಅವರ ಬಳಿ ಉಳಿದಿದ್ದುದು ಮೂಲಬಲವೊಂದೇ. ಆದರೂ ಚಿಂತಿಸದೆ, ಹಳ್ಳಿಹಳ್ಳಿಗಳಲ್ಲೂ ಡಂಗೂರ ಸಾರಿಸಿ, ಆದಷ್ಟು ಸೇನೆಯನ್ನು ಸಂಗ್ರಹಿಸಿ, ಮಾನ್ಯಖೇಟಕ್ಕೆ ಸುದ್ದಿ ಕಳುಹಿಸಿದವರೇ ಗಂಗ ರಾಜ್ಯದತ್ತ ನುಗ್ಗಿದರು—ವಿಲಯಕಾಲದ ಬಿರುಗಾಳಿಯಂತೆ.

ಬಂಕರಸರ ಸೇನೆಯಲ್ಲಿದ್ದ ಜನಬಲ ಅಲ್ಪ. ಆದರೆ ಒಬ್ಬೊಬ್ಬನೂ ಉಕ್ಕಿನಾಳು. ಅದರ ಜೊತೆಗೆ, ಅವರೆಲ್ಲರ ಹೃದಯವೂ ಪ್ರತೀಕಾರ ತೃಷೆಯಿಂದ ಮತ್ತಷ್ಟು ಉಕ್ಕಾಗಿತ್ತು. ಗಂಗರ ಸೊಕ್ಕಡಿಗಿಸಿ ತಳವನ ಪುರವನ್ನು ಸುಟ್ಟು ಬೂದಿ ಮಾಡಬೇಕು, ಇಲ್ಲವೇ ಸಮರಾಂಗಣದಲ್ಲಿ ಸಾವನ್ನು ಆಲಂಗಿಸಬೇಕು ಎಂದು ಶಪಥತೊಟ್ಟು ಹೊರಟಿದ್ದರು. ಎದುರಾದವರನ್ನು ಕೊಚ್ಚಿ ಕೆಡಹುತ್ತಾ, ಕೋಟೆಗಳನ್ನು ಸೀಳುತ್ತಾ ಸಾಗಿದರು.

ಕೊಳತೂರಿನಿಂದ ಬಂಕರಸರು ಕಳಿಸಿದ ಸುದ್ದಿ ಮಾನ್ಯಖೇಟವನ್ನು ಮುಟ್ಟುವವೇಳೆಗೆ, ಬಂಕರಸರ ಬಲ ದಾರಿಯಲ್ಲಿ ಇದಿರಾದವರನ್ನು ಮುರಿದು ಕೈದಾಳ ದುರ್ಗಕ್ಕೆ ಲಗ್ಗೆ ಹಾಕಿತ್ತು.

ಕೈದಾಳದುರ್ಗ ಗಂಗ ಅರಸರ ಮೂಲಬಲಗಳ ಕೇಂದ್ರಗಳಲ್ಲಿ ಒಂದು. ಬಹು ದುಸ್ಸಾಧ್ಯವಾದ ಕೋಟೆಯೆಂದು ಹೆಸರಾದುದು. ಅದರ ಉಕ್ಕಿನ ಕವಚದಂತಹ ಕೋಟೆ, ಅಪಾರ ಶಸ್ತ್ರಾಸ್ತ್ರ ಸಂಗ್ರಹ, ಕೋಟೆಯೊಳಗಿನ ಪಟುಭಟರ ಪಡೆ, ಯಾವುದೂ, ಕಾಳನ ಕೋಣನಂತೆ ಕೆರಳಿ ಮುನ್ನುಗ್ಗಿದ ಬಂಕರಸರ ಬಲದಿದಿರು ನಿಲ್ಲಲಾಗಲಿಲ್ಲ. ಶತ್ರು ಸೇನೆ

'ಬಂದಿತು, ಬಂದಿತು' ಎಂದು ಕೋಟೆಯಲ್ಲಿ ಕೂಗಾಗುವುದರ ಒಳಗೇ ಗಜಪಡೆ ಹೆಬ್ಬಾಗಿಲನ್ನು ಪುಡಿಮಾಡಿ, ಕಾಲಾಳುಗಳು ನೂಲೇಣಿ, ಉಡಗಳ ನೆರವಿನಿಂದ ಗೋಡೆಯನ್ನೇರಿ ಕೊತ್ತಲಗಳಲ್ಲಿಯ ಕಾವಲು ಪಡೆಯನ್ನು ಕತ್ತರಿಸಿ ಚೆಲ್ಲಿತು. ರಾತ್ರಿ ಕೋಟೆಯ ಜನ ಮಲಗಿದಾಗ ಆರಂಭವಾದ ದಾಳಿ, ಹಗಲಾಗುವುದರೊಳಗಾಗಿ ಮುಗಿದು ಕೋಟೆಯ ಮೇಲೆ ರಾಷ್ಟ್ರಕೂಟರ ಗರುಡಧ್ವಜ ಹಾರಾಡಿತು.

ದುರ್ಭೇದ್ಯವೆಂದು ಹೆಸರಾದ ಕೈದಾಳದ ಕೋಟೆ ಉರುಳಿದುದು, ಬಂಕರಸರ ಸೇನೆಯ ಉತ್ಸಾಹಕ್ಕೆ ರೆಕ್ಕೆ ಮೂಡಿಸಿದಂತೆ, ಶತ್ರುಗಳ ಎದೆಯಲ್ಲಿ ಭೀತಿ ಕವಿಸಿತು — ಇದುರಿನಲ್ಲಿ ಸಿಕ್ಕದಲ್ಲೆವನ್ನೂ ಸುಟ್ಟುರುಬಿ ಮುಂಬರಿವ ಕಾಳ್ಗಿಚ್ಚಿನಂತೆ ಸೇನೆ, ನೇರವಾಗಿ ಗಂಗ ರಾಜಧಾನಿ ತಲವನಪುರದತ್ತಲೇ ನುಗ್ಗಿತು. ಮಳೆಗಾಲದಲ್ಲಿ ತುಂಬಿ ಹರಿವ ಕಾವೇರಿಯೂ ಗಂಗರಾಜಧಾನಿಗೆ ರಕ್ಷೆಯಾಗಲಿಲ್ಲ. ಅನಿರೀಕ್ಷಿತವಾಗಿ ನುಗ್ಗಿದ, ಸಾಲು ಗೆಲುವಿನಲ್ಲಿ ಮತ್ತವಾದ ಬಂಕರಸರ ಸೇನೆಯ ಇದಿರು ತಲವನಪುರ ಶರಣಾಗತವಾಯಿತು. ರಾಷ್ಟ್ರಕೂಟರ ಮೇಲೆ ಕತ್ತಿ ಎತ್ತಿದ ನೀತಿಮಾರ್ಗ್ಗನ ಸೊಕ್ಕು ಮುರಿಯಿತು. ಅಲ್ಪ ಬಲದಿಂದಾಗಿ ಅರಕ್ಷಿತವಾದ ರಾಜಧಾನಿಯನ್ನು ಹಿಡಿದುದರಿಂದಲೇ ಬಂಕರಸರು ಸಮರದಲ್ಲಿ ಸಂಪೂರ್ಣ ಗೆಲವು ಸಾಧಿಸಿದ ಹಾಗಾಗಿರಲಿಲ್ಲ.

ರಾಜಾರಮಡುವಿನ ಸಮರದಲ್ಲಿ ರಾಷ್ಟ್ರಕೂಟ ಪಡೆಗಳನ್ನು ಸೋಲಿಸಿದ ಗಂಗರ ಪ್ರಚಂಡ ಬಲ, ಆತ್ತಕಡೆ ದಾಳಿ ಬರುವುದೆಂದು ನಿರೀಕ್ಷಿಸಿ, ಕೊವಳಾಲಪುರದ ಬಳಿ ಬೀಡು ಬಿಟ್ಟಿದ್ದುದರಿಂದ, ಆ ಪಡೆಯನ್ನು ಗೆಲ್ಲದೆ ಗೆದ್ದೆನೆಂದು ಬಂಕರಸರು ತೃಪ್ತರಾಗಿ ಕೂಡುವಹಾಗಿರಲಿಲ್ಲ. ಶತ್ರು ರಾಜಧಾನಿಯಲ್ಲೇ, ಎರಡು ದಿನ, ಬಹುವೇಗದ ಪ್ರಯಾಣ ಮಾಡಿ ದಣಿದ ಸೇನೆಗೆ ವಿಶ್ರಾಂತಿಕೊಟ್ಟು, ಬಳಿಕ ಕೊವಳಾಲಪುರದತ್ತ ನುಗ್ಗುವುದೆಂದು ಯೋಚನೆಮಾಡಿ, ಬಂಕರಸರು ತಳವನಪುರವನ್ನು ಗೆದ್ದ ವಾರ್ತೆಯನ್ನು ಚಕ್ರವರ್ತಿಗಳಿಗೆ ಹೇಳಿ ಕಳುಹಿಸಿದರು.

ಆದರೆ ಮಾನ್ಯಖೇಟಕ್ಕೆ ಆ ಸುದ್ದಿ ಬಂದಾಗ ಚಕ್ರವರ್ತಿಗಳು ಆ ಆನಂದವನ್ನು ಅನುಭವಿಸುವ ಸ್ಥಿತಿಯಲ್ಲಿರಲಿಲ್ಲ. ಅವರ ಪಾಲಿಗೆ ಕಾಲ

ಕೆಳಗಿನ ಭೂಮಿಯೇ ಬಿರಿದಂತಿತ್ತು—

## ೧೮

ಅತ್ತ ನೀತಿಮಾರ್ಗ್ಗನ ಸೇನೆ ರಾಜಾರಮುಡುವಿನಲ್ಲಿ ರಾಷ್ಟ್ರಕೂಟ ಪಡೆಗಳ ಮೇಲೆ ದಾಳಿ ಮಾಡುತ್ತಿದ್ದಂತೆಯೇ, ಇತ್ತ ಮಂಗಿಯ ಒಳ ಸಂಚಿನ ಪ್ರಕಾರ, ತ್ರಿಪುರಿಯನ್ನು ನೋಡುವ ನೆಪಮಾಡಿಕೊಂಡು, ಶಂಕರಗಣನೊಂದಿಗೆ ತೆರಳಿದ ರಾಜಕುಮಾರ, ಚೇದಿಯ ಬಲದ ಬೆಂಬಲದಿಂದ ತಾನೇ ಚಕ್ರಾಧಿಪತಿ ಎಂದು ಘೋಷಿಸಿ, ರಾಷ್ಟ್ರಕೂಟ ರಾಜ್ಯದ ಮೇಲೆ, ಈಶಾನ್ಯದಿಂದ ದಾಳಿ ಮಾಡಬೇಕಾಗಿತ್ತು. ಅದರಂತೆಯೇ ತ್ರಿಪುರಿಗೆ ತೆರಳಿದ ರಾಜಕುಮಾರ ಕೃಷ್ಣ, ಶಂಕರಗಣರಿಗೆ ತಮ್ಮ ಒಳ ಸಂಚು ಸಫಲವಾಗುವುದರಲ್ಲಿ ಸ್ವಲ್ಪವೂ ಸಂಶಯವಿರಲಿಲ್ಲ. ಆದುದರಿಂದ ಚಕ್ರವರ್ತಿಯಾಗಲಿರುವ ಕೃಷ್ಣನಮೇಲೆ ತನ್ನ ಹಿಡಿತವನ್ನು ಬಲಪಡಿಸುವ ಉದ್ದೇಶದಿಂದ, ತನ್ನ ತಂದೆ ಕಕ್ಕಲನನ್ನು ಒಪ್ಪಿಸಿ, ಕೃಷ್ಣನಿಗೆ ತನ್ನ ಸೋದರಿಯನ್ನಿತ್ತು ವಿವಾಹ ಮಾಡಿ, ಸೇನೆಗಳೊಡನೆ ಕಿರಣಪುರಕ್ಕೆ ಬಂದು, ದಾಳಿಯನ್ನು ಆರಂಭಿಸಲು ಮಂಗಿಯಿಂದ ಸುದ್ದಿ ಬರುವುದನ್ನೇ ಕಾಯುತ್ತಿದ್ದ—ಶಂಕರಗಣ.

ರಾಜಾರಮುಡುವಿನಲ್ಲಿ ರಾಷ್ಟ್ರಕೂಟ ಪಡೆಗಳಿಗೆ ಸೋಲಾಯಿತೆಂಬ ಸುದ್ದಿ ತಿಳಿದ ಕೂಡಲೇ, ಶಂಕರಗಣ ಕೃಷ್ಣನನ್ನೇ ರಾಷ್ಟ್ರಕೂಟ ಚಕ್ರವರ್ತಿಯೆಂದು ಘೋಷಿಸಿ, ಚೇದಿ ರಾಜ್ಯದ ಗಡಿದಾಟಿ, ರಾಷ್ಟ್ರಕೂಟ ರಾಜ್ಯದ ಮೇಲೆ ದಾಳಿ ಮಾಡಿದ.

ಈ ಸುದ್ದಿ ಜಂಝಾವಾತದಂತೆ ಬೀಸಿಬಂದು ಚಕ್ರವರ್ತಿಗಳನ್ನು ಅಪ್ಪಳಿಸಿತು. ಆ ಅನಿರೀಕ್ಷಿತ ಆಘಾತದಿಂದ ಚಕ್ರವರ್ತಿಗಳು ತತ್ತರಿಸಿ ಹೋದರು. ಭೂಕಂಪವಾಗಿ, ಉಯ್ಯಾಲೆಯಂತಾಡುತ್ತಿದ್ದ ನೆಲದ ಮೇಲೆ ನಿಂತವರಂತೆ ತೂಗಾಡಿದರು. ತಮ್ಮ ಕಣ್ಣು, ಕಿವಿಗಳನ್ನೇ ನಂಬಲಾಗದೆ, ಮತಿವಿಕಳನಂತೆ ಅರಮನೆಯಲ್ಲಿ ಅಂಡಲೆದರು. ಅವರ ಸುತ್ತಲೂ ಕತ್ತಲವೊತ್ತವೇ ಬೀಡುಬಿಟ್ಟು, ಭೂತಾಕೃತಿಗಳು ವಿಕಾರವಾದ ಅಣಕದ ಗೂಬೆನಗು ನಕ್ಕು ಬೆದರಿಸಿದವು—

'ರಾಜಕುಮಾರ–ರಾಜದ್ರೋಹಿ!'

ಅವರ ಮಗ, ಅವರ ಮೋಹದ ಅಣುಗ, ಅವರ ನೇತ್ರರು ಬಯಸಿ ಪಡೆದ ಫಲ, ಅವರ ಬಯಕೆಯ ಬಳ್ಳಿ ಬಿಟ್ಟ ಹೂವು–ವಿದ್ರೋಹಿ!

ಯಾವನು ಹುಟ್ಟಿದ ಹರ್ಷಕ್ಕೆಂದು ರಾಷ್ಟ್ರಕೂಟರಾಜ್ಯ ವಧುವಿನಂತೆ ಅಲಂಕಾರ ಮಾಡಿಕೊಂಡು ನಲಿದಿತ್ತೋ, ಯಾರ ಜನುಮದಲ್ಲಿ ರಾಷ್ಟ್ರಕೂಟ ಸಾಮ್ರಾಟ ಪರಂಪರೆಯ ಶಾಶ್ವತತ್ವದ ಕನಸು ಕಂಡಿತ್ತೋ, ಅವನೇ, ಅವನೇ, ರಾಷ್ಟ್ರಕೂಟ ಚಕ್ರವರ್ತಿಯ ಮಗನೇ—ಇಂದು ಸಾಮ್ರಾಜ್ಯದ ವಿರುದ್ಧ ಕತ್ತಿ ಹಿರಿದು ನಿಂತಿದಾನೆ.

ತಂದೆಯ ಬಯಕೆ, ತಾಯಿಯ ಹರಕೆ, ಜನತೆಯ ಕನಸು—ಎಲ್ಲವೂ ಇಂದು ವಿಕೃತಭೂತಾಕಾರವಾಗಿ, ಹಾಲೆಂದುದು ಕುಡಿದುದು ವಿಷವಾಗಿ, ಹೂವು ಸಿಡಿಲಾಗಿ ನಿಂತಿದೆ—ಬಂಡಾಯದ ಭಯಂಕರ ರೂಪು ಧರಿಸಿ. ರಕ್ಷಣೆಗಾಗಿ ಮರೆಹೊಕ್ಕ ದೈವ ರಕ್ಕಸಿಯಾಗಿ ನಿಂತಿದೆ—ರಕ್ತದಾಹದಿಂದ ಜೋಲ್ದ ನಾಲಿಗೆ ಚಾಚಿ.

ಇದೇನೇ ಪ್ರತಿಫಲ? ಬಯಕೆಗೆ ಇದೇ ಬಹುಮಾನವೇ?

ಮತ್ತೆಮತ್ತೆ ಮಹಾರಾಜ್ಞಿಯವರು, ಈ ಪುತ್ರನನ್ನು ಹಡೆದ ತಾಯಿ, ಹೆತ್ತ ಕರುಳಿನ ನಿರಾಶೆಯ ಬೇಗೆಯಲ್ಲಿ, ಕರುಳು ಕಿತ್ತು ಆಡಿದಂತೆ ಆಡಿದ ಮಾತು—

'ನಾನು ಬಲ್ಲೆ, ನಾನು ಹಡೆದುದು ಮಗನನ್ನಲ್ಲ ದುಃಖವನ್ನು'

—ಅರಮನೆಯ ಮೂಲೆಮೂಲೆಯಿಂದಲೂ ಕಠೋರ ನಿರಾಶೆಯ ಉರಿನಿಟ್ಟುಸಿರಿನಂತೆ ಕೇಳಿಬರುತ್ತದೆ. ಅದರೊಂದಿಗೆ ದನಿಗೂಡಿಸಿ, ದೇಶಕ್ಕೆ ದೇಶವೇ ಚಿತ್ಕರಿಸುತ್ತಿದೆ—

'ಚಕ್ರವರ್ತಿಗಳು ಪಡೆದುದು ರಾಪುತ್ರನನ್ನಲ್ಲ, ರಾಜದ್ರೋಹಿಯನ್ನು.'

ಅಂದು ಮಗನಾಗಿ ವೇಶ್ಯಾವಾಟಿಯಲ್ಲಲೆದು, ದುಷ್ಟ ಸಹವಾಸದಲ್ಲಿಳಿದು ತಂದೆತನವನ್ನು ಶರಶಯ್ಯೆಯಾಗಿ ಮಾಡಿದ್ದ; ಇಂದು ಚಕ್ರವರ್ತಿಯ ಏಕೈಕ ಪುತ್ರನಾಗಿ, ಔರಸಪುತ್ರನಾಗಿ, ವಿದ್ರೋಹದ ಬಾವುಟವೆತ್ತಿ ಚಕ್ರವರ್ತಿತನದ ಕಿರೀಟವನ್ನು ಮುಳ್ಳಿನ ಮಕುಟವಾಗಿ ಮಾಡಿದ.

'ನಿಜ, ನಿಜ, ಇವನು ಮಗನಲ್ಲ, ಪುತ್ರರೂಪಿಯಾದ ದುಃಖ. ಬದುಕನ್ನು ನರಕವನ್ನಾಗಿ ಮಾಡಿದ, ಯಾವುದೋ ಪಾಪದ ಸೇಡು. ಈ ಜೀವಂತ ಚಿತೆಯನ್ನು ಎದೆಯಲ್ಲಿ ಹೊತ್ತು ನಗೆಗೇಡಾಗಿ ಬದುಕ ಬೇಕೇ? ತಿರಸ್ಕಾರ, ಅಣಕ, ತೋರಿಕೆಯ ಮರ್ಯಾದೆ, ಕನಿಕರದ ಮಾತುಗಳ ಬೇಟೆಯಾಗಿ ಉಸಿರೆಳೆಯಬೇಕೇ? ಈ ವಿಕೃತ ವಿಕಟಾಟ್ಟ ಹಾಸದ ಅಬ್ಬರದಲ್ಲಿ ಚಕ್ರವರ್ತಿಪದವಿಯು ಬುದ್ಬುದ ಸಿಡಿದೊಡೆಯ ಬೇಕೇ?'

ಚಕ್ರವರ್ತಿಗಳ ಪಾಲಿಗೆ ಇಡೀ ಜಗತ್ತೇ ನೂರುಬಗೆಯ ನಿರಾಶೆಯ ಪ್ರೇತಗಳಲೆವ ರುದ್ರ ಸ್ಮಶಾನವಾಯಿತು.

'ಊಹೂ–ಇಂಥ ಬದುಕಿಗಿಂತ ಸಾವು ಮೇಲು.'

ಘೋರ ನಿರಾಶೆಯು, ಕಗ್ಗತ್ತಲು ತುಂಬಿದ ಕೆಸರಾಳದಲ್ಲಿ ಕುಸಿದ ಜೀವ ಸಾವಿನ ಬಿಡುಗಡೆಯನ್ನು ಬಯಸಿ ಹಾತೊರೆಯಿತು.

ಆದರೆ ಇಂಥ ಮಗನನ್ನು ಪಡೆದ ತಂದೆಗೆ ಸ್ವರ್ಗದಲ್ಲಾದರೂ ಸ್ಥಳವುಂಟೇ ? ಕುಲದ ಕೀರ್ತಿಗೆ ಕುಠಾರನಾದ ಮಗನನ್ನು ಹಡೆದ ತಂದೆ ಎಂದು ಸ್ವರ್ಗವಾಸಿಗಳೂ ಹತ್ತಿರ ಸುಳಿಯಲು ಹೇಸಬಹುದು. ಹಿಮಾಲಯದಿಂದ ಲಂಕೆಯವರೆಗೆ ಅಖಂಡ ಭಾರತವನ್ನು ತೋಳ ಬಲ ದಿಂದ ಗೆದ್ದು, ಅವರ ಹೆಸರುಹೇಳಲೂ ಶತ್ರುಗಳು ಹೆದರುವಂತೆ ಬಾಳಿ, ರಾಷ್ಟ್ರಕೂಟ ಮನೆತನದ ಕೀರ್ತಿಯನ್ನು ಆಚಂದ್ರಾರ್ಕಸ್ಥಾಯಿಯಾಗಿ ನಿಲಿಸಿದ ಪಿತೃದೇವತೆಗಳು, ರಾಷ್ಟ್ರಕೂಟರ ಮಾನಭಂಗ ಕಂಡು ಹಗೆ ವಾಡಿ ಕೆಮ್ಮನೆ ನಗುವಂತೆ ಮಾಡಿದ ಮಗನನ್ನು ಪಡೆದ ತಾನು ಸ್ವರ್ಗಕ್ಕೆ ಹೋದರೆ, ಅವರು ಸ್ವರ್ಗಕ್ಕೆ ಹೆದರಿ ನರಕಕ್ಕೆ ಹಾರಬಹುದು. 'ನಿಜ ಇಹಪರಗಳೆರಡರಲ್ಲೂ ನಮಗಿನ್ನು ತಾವಿಲ್ಲದಂತೆ ಮಾಡಿದ ಈ ಹೊಟ್ಟೆ ಯಲ್ಲಿ ಹುಟ್ಟಿದ ವೈರಿ' ಎಂದು ಕುದಿವ ನೀರಿನಂತೆ ತಳಮಳಿಸಿದರು.

ಕೃಷ್ಣನಾಡಿದ ಮಾತು, ನಡೆದ ನೆಲ, ಉಟ್ಟ ಬಟ್ಟೆ, ಮಲಗಿದ ಸಜ್ಜೆ—ಒಂದೊಂದೂ ಅವರ ಹೃದಯವನ್ನು ಯಾತನೆಯ ಅಲಗಿನಿಂದ, ನಿರಾಶೆಯ ಸುರುಗಿಯಿಂದ ಇರಿದವು.

'ಊಹೂ. ಇನ್ನು ನನ್ನ ಪಾಲಿಗೆ ಮಗನಿಲ್ಲ'—ಎಂದುಕೊಂಡರು ಚಕ್ರವರ್ತಿಗಳು.

ಕೊರಗಿನ ಉರಿಯಲ್ಲಿ ಅವರ ಎದೆಯ ಮಮತೆ ಕುದಿಕುದಿದು ನಿರಾಶೆಯಾಗಿ ಕರ್ಕಶವಾಗಿ ಹೆಪ್ಪುಗಟ್ಟಿತು.

'ಮಗನಿಲ್ಲ, ಇನ್ನು ನನಗೆ ಮಗನಿಲ್ಲ. ವಿದ್ರೋಹದ ಘೋಷಣೆಯೊಂದಿಗೇ ಮಗ ಮೃತನಾಗಿ ಹೋದ. ಇನ್ನು ಕೃಷ್ಣ—ಬರೀ ಕಹಿ ನೆನಪು, ಉರಿ ನೆನಪು. ಈಗ ಉಳಿದಿರುವವನೊಬ್ಬನೇ—ವಿದ್ರೋಹಿ.'

ಅಂತೆಯೇ ವಿದ್ರೋಹಿಯಾದ ಮಗನೊಂದಿಗೆ ಅವರ ಬಾಳಬಯಕೆಗಳೆಲ್ಲವೂ ಉರಿದುಹೋಗಿ, ಕೊನೆಗುಳಿದುದೊಂದೇ ಬಯಕೆ-ಚಕ್ರವರ್ತಿಯಾಗಿ, ರಾಜ್ಯದ ಪಾಲಕನಾಗಿ ಮಾಡಬೇಕಾದ ಕರ್ತವ್ಯದ ಬಯಕೆ—ವಿದ್ರೋಹಿ ಮರ್ದನ, ಶತ್ರು ವಿಧ್ವಂಸನ.

ಎಲ್ಲ ಬಯಕೆಗಳೂ ಉರಿದುಹೋದ ಅವರ ಬಾಳಿನಲ್ಲಿ ಉಳಿದುದೊಂದೇ ಬಯಕೆ—ಆ ಬಯಕೆಗಳ ಮಸಣದಲ್ಲಿ ವಿದ್ರೋಹಿ ವಿಧ್ವಂಸನದ ಪ್ರಚಂಡ ತಾಂಡಾವಾಕಾಂಕ್ಷೆ.

ನಿರಾಶೆ, ದುಃಖಗಳ ಗರ್ಭದಿಂದ, ಒರೆಯಿಂದೆಳೆದ ಕತ್ತಿಯಂತೆ, ಕ್ರೋಧವೇ ಮೈವೆತ್ತು ಬಂದಂತೆ, ವಿದ್ರೋಹಿ ಮಾರಣ ಹೋಮ ಕಂಕಣ ಧರಿಸಿ ಸಿಡಿದೆದ್ದು ನಿಂತರು ಚಕ್ರವರ್ತಿಗಳು.

ಊಟ-ಉಪಚಾರಗಳನ್ನು ತಿರಸ್ಕರಿಸಿ, ಬಂಡಾಯವನ್ನು ತುಳಿಯಲು ಸಿದ್ಧರಾದರು. ಮಗನ ವಿರುದ್ಧ ದಂಡೆತ್ತಿಹೋಗಲು, ತಾವೇ ಸೇನಾಧಿಪತ್ಯ ಸ್ವೀಕಾರಮಾಡಿದರು. ವಿದ್ರೋಹಿ ರಾಜಕುಮಾರನನ್ನು ಹಿಡಿದು ತಂದವರಿಗೆ ಲಕ್ಷದ್ರಮ್ಮಗಳ ಬಹುಮಾನ ಕೊಡುವುದಾಗಿ ಕಟಕದಲ್ಲಿ ಸಾರಿಸಿದರು. ರಾಜಧಾನಿ ಮಿಂಚುಸೋಕಿದಂತೆ ಸ್ತಬ್ಧವಾಯಿತು-ತಮಟೆಗಳು ಸಾರಿದ ಆ ಸುದ್ದಿಯನ್ನು ಕೇಳಿ.'

ತಲವನಪುರವನ್ನು ಗೆದ್ದು, ಅದಕ್ಕಾಗಿ ಚಕ್ರವರ್ತಿಗಳಿಂದ ಮೆಚ್ಚುಗೆಯ ಓಲೆ ಬರಬಹುದೆಂದು ನಿರೀಕ್ಷಿಸುತಿದ್ದ ಬಂಕರಸರಿಗೆ ಬಂದುದು ಈ ಭೀಷಣ ವಾರ್ತೆ. ಅವಸರದ ಓಲೆಕಾರನೊಬ್ಬನೊಂದಿಗೆ ಗುಣಭದ್ರಾಚಾರ್ಯರು ಓಲೆ ಕಳುಹಿಸಿದ್ದರು—'ಬೇಗ ಬನ್ನಿ. ವಿದ್ರೋಹಿಯಾದ

ಮಗನ ತಲೆಕಾಣುವವರೆಗೂ ಅನ್ನಪಾನ ಮುಟ್ಟುವುದಿಲ್ಲವೆಂದು ಚಕ್ರವರ್ತಿಗಳು ಶಪಥ ತೊಟ್ಟು, ಸೇನೆಯನ್ನು ಅಣಿಗೊಳಿಸುತ್ತಿದ್ದಾರೆ. ತಾವೇ ಆ ಪಡೆಯ ನಾಯಕರಾಗಲು ಸಿದ್ಧರಾಗಿ ನಿಂತಿದಾರೆ. ರಾಜಧಾನಿಯಲ್ಲೂ ಒಳಸಂಚಿನ ಬೇಗೆ ಹಬ್ಬಿದೆ. ಈ ಹೊತ್ತಿನಲ್ಲಿ ನಿಮ್ಮಂಥ ಆಪ್ತರು, ನಿಷ್ಠರು ಚಕ್ರವರ್ತಿಗಳ ಬಳಿ ಇರುವುದು ಬಹು ಅಗತ್ಯ. ಕೂಡಲೇ ಹೊರಟು ಬನ್ನಿ,' ಎಂದು ಬರೆದಿದ್ದರವರು.

ಆ ಕಾಗದವನ್ನೋದಿ ಅಷ್ಟು ಹೊತ್ತು ಬಂಕರಸರು ದಿಕ್ಕುತೋಚದಂತೆ ಕುಳಿತರು. ಮರುಗಳಿಗೆಯೇ, ಗಂಗವಾಡಿಯಲ್ಲಿ ಸಮರವನ್ನು ಮುಂದುವರಿಸುವ ಕಾರ್ಯವನ್ನು, ತನ್ನ ನೆಚ್ಚಿನ ದಳಪತಿಯೊಬ್ಬನಿಗೆ ಒಪ್ಪಿಸಿ, ಅತ್ಯಂತ ವೇಗವಾಗಿ ಹೋಗಬಲ್ಲ ಕುದುರೆಯನ್ನೇರಿ, ವೇಳೆವಡಿಚರ ಪಡೆಯೊಂದಿಗೆ ಮಾನ್ಯಖೇಟದತ್ತ ದೌಡಾಯಿಸಿದರು, ಮಿಂಚಿನ ವೇಗದಲ್ಲಿ. ಮರಳುಗಾಡಿನಲ್ಲಿ ಹುಟ್ಟಿ ಬೆಳೆದು, ಬೇಗೆ ಬಸವಳಿಕೆಗೆ ಸೋಲದ, ಮರಳುಗಾಡಿನ ಸೀಳುಗಾಳಿಯೊಂದಿಗೆ ಸ್ಪರ್ಧಿಸಿ ಓಡಬಲ್ಲ, ಅರಬಿ ದೇಶದ ಕುದುರೆಗಳು, ತಾವೂ ಅಂದಿನ ಪರಿಸ್ಥಿತಿಯ ಅವಸರವನ್ನು ಅರಿತಂತೆ ಹಕ್ಕಿ ವೇಗದಿಂದ ಚಿಮ್ಮಿದವು—ಅವುಗಳ ಖುರಪುಟಗಳ ಧೂಳು ಕಂಡವರ ಎದೆಯಲ್ಲಿ ಭೀತಿ ಕವಿಸುತ್ತಿರಲು. ಮೂರು ದಿನದ ಬಿರುಗಾಳಿಯ ಓಟ—ಧೂಳೀಸ್ನಾನದಿಂದ ಗುರುತುಸಿಗದಂತಿದ್ದ ಬಂಕರಸರು, ವೇಳೆವಡಿಚರ ಪಡೆಯೊಂದಿಗೆ ಮಾನ್ಯಖೇಟದ ಹೆಬ್ಬಾಗಿಲನ್ನು ಪ್ರವೇಶಿಸಿ ಅರಮನೆಯ ಮುಂದೆಯೇ ಕುದುರೆಯಿಂದ ಇಳಿದು, ಅರಮನೆಯನ್ನು ಸುತ್ತಿ ಕಾವಲು ಕಾಯಲು ತಮ್ಮ ಪಡೆಗೆ ಅಪ್ಪಣೆಮಾಡಿ, ಅರಮನೆಯೊಳಗೆ ನುಗ್ಗಿದರು, ಚಕ್ರವರ್ತಿಗಳನ್ನು ಕಾಣಲು. ಅವರ ಪದಾಘಾತದ ವೇಗ, ಉಗ್ರತೆಗೆ ಅರಮನೆಯ ಅಮೃತಶಿಲೆಯ ಗಚ್ಚಿನ ನೆಲವೂ ಹೆದರಿ ನಡುಗಿತು.

ಇದ್ದಕ್ಕಿದ್ದ ಹಾಗೇ ಬಂದ ಬಂಕರಸರನ್ನು ಕಂಡು ಚಕ್ರವರ್ತಿಗಳು ಚಕಿತರಾದರು. ನಾಲ್ಕು ದಿನಗಳ ದಾರುಣ ವ್ಯಥೆಯಲ್ಲಿ ತಲೆ ನರೆತು, ನೂರು ವರ್ಷದ ಮುಪ್ಪಡಸಿದಂತಿದ್ದ ಚಕ್ರವರ್ತಿಗಳನ್ನು ಕಂಡು ಸಮರಾಂಗಣದ ಸಾಲು ಕಗ್ಗೊಲೆ, ರಕ್ತದ ಮಳೆಗೆ ಎದೆಗರಗದ ಬಂಕರಸರ

ಭಟ ಹೃದಯ ಉರಿಸೋಕಿದ ಬೆಣ್ಣೆಯಂತೆ ಕರಗಿ, ಕಣ್ಣಲ್ಲಿ ಕಂಬನಿ ಒಡೆಯಿತು. ' ಪ್ರಭೂ....' ಎಂದು ಮಾತನಾಡಲು ಯತ್ನಿಸಿದರು. ಗಂಟಲು ನರಬಿಗಿದು ಗದ್ಗದಿತವಾಯಿತು. ಮಾತನಾಡಲಾಗದೆ, ಕಂಬನಿ ದುಂಬಿದ ಕಣ್ಣುಗಳಿಂದ ಚಕ್ರವರ್ತಿಯ ಮೊಗವನ್ನು ನೋಡಿದರು.

' ಬಹು ಅನಿರೀಕ್ಷಿತವಾಗಿ ಬಂದಿರಿ ಬಂಕರಸರೇ. ಒಳ್ಳೆಯ ಕಾಲಕ್ಕೇ ಬಂದಹಾಗಾಯಿತು'—ಚಕ್ರವರ್ತಿಗಳೇ ಮೊದಲು ಮಾತನಾಡಿದರು.

' ಏಕೆ ಪ್ರಭೂ?'

' ಒಳಸಂಚಿನ ಸುಳಿಗಾಳಿ ಬೀಸುತ್ತಿರುವ ರಾಜಧಾನಿಯನ್ನು ಯಾರ ರಕ್ಷಣೆಗೆ ಒಪ್ಪಿಸಿಹೋಗುವುದೆಂದು ಯೋಚನೆ ಮಾಡುತ್ತಿದ್ದೆವು. ನೀವು ಬಂದಿರಿ, ಇನ್ನು ಭಯವಿಲ್ಲ. ನಿಶ್ಚಿಂತೆಯಾಗಿ ಸಮರಾಂಗಣಕ್ಕೆ ತೆರಳಬಹುದು.'

' ನಾವು ಜೀವದಿಂದ ಇದ್ದೂ ಪ್ರಭುಗಳು ಸಮರಾಂಗಣಕ್ಕೆ ತೆರಳುವುದೇ ? ಅದಾಗದು ಪ್ರಭು—ಸಮರಾಂಗಣದ ಹೊಣೆ ನಮಗಿರಲಿ.'

' ಇದು ಎಂದಿನ ಯುದ್ಧವಲ್ಲ ಬಂಕರಸರೇ—'

' ಸುದ್ದಿ ತಿಳಿಯಿತು ಪ್ರಭು. ತಾವದನ್ನು ಇಷ್ಟು ಮನಸಿಗೆ ಹಚ್ಚಿಕೊಂಡು ಕೊರಗುವುದೇ? ರಾಜಕುಮಾರರನ್ನು ದಾರಿಗೆ ತರುವ ಭಾರ ನಮ್ಮದು ಪ್ರಭು.'

' ರಾಜಕುಮಾರರನ್ನು ಯಾರೂ ದಾರಿಗೆ ತರುವ ಅಗತ್ಯವಿಲ್ಲ ಬಂಕರಸರೇ?'

' ಏಕೆ ಪ್ರಭು?'—ಚಕ್ರವರ್ತಿಗಳು ಆಡಿದ ಮಾತು, ಅದನ್ನು ಅವರು ಆಡಿದ ರೀತಿಯನ್ನು ಕೇಳಿ ಚಕಿತರಾಗಿ ಕೇಳಿದರು, ಬಂಕರಸರು.

' ಅವರನ್ನು ದಾರಿಗೆ ತರುವ ಹೊಣೆಯನ್ನು ನಾವೇ ಹೊತ್ತಿದೇವೆ. ರಾಜ್ಯಕ್ಕೆ ಈ ಕಂಟಕವನ್ನು ದಾನ ಮಾಡಿದ ಪಾಪ ನಮ್ಮದಾಯಿತು. ದೈವೇಚ್ಛೆಗೆ ಯಾರು ಇದಿರು-ಆಯಿತು-ಆ ಕಂಟಕ ನಮ್ಮ ಕೈಯಿಂದಲೇ ನಿವಾರಣೆಯಾಗಲಿ.'

'ಪ್ರಭುಗಳ ಹೃದಯವನ್ನು ನಾನು ಬಲ್ಲೆ. ರಾಜಕುಮಾರರ ವರ್ತನೆಯಿಂದ ತಮ್ಮ ಹೃದಯಕ್ಕಾಗುತ್ತಿರುವ ತಾಪವನ್ನು ನಾನು ಬಲೆ ಪ್ರಭು. ನನ್ನ ಬೇಡಿಕೆಯನ್ನು ನಡೆಸಿಕೊಡಬೇಕು. ಈ ಬಂಡಾಯವನ್ನು ಅಡಗಿಸುವ ಕಾರ್ಯ ನನಗಿರಲಿ. ಇನ್ನೊಂದು ವಾರದೊಳಗಾಗಿ ಬಂಡಾಯವನ್ನು ಅಡಗಿಸಿ, ರಾಜಕುಮಾರರನ್ನು ಚಕ್ರವರ್ತಿಗಳ ಇದಿರು ತಂದು ನಿಲ್ಲಿಸದಿದ್ದರೆ, ಅಗ್ನಿ ಪ್ರವೇಶ ಮಾಡುತ್ತೇನೆ. ಅದು ನನ್ನ ಪ್ರತಿಜ್ಞೆ ಪ್ರಭೂ. ತಮ್ಮ ಅನ್ನ ತಿಂದು ಬೆಳೆದ ಮೈ, ಅಷ್ಟು ಮಾಡಿ ಋಣ ತೀರಿಸಲು ಅವಕಾಶ ಕೊಡಬೇಕು. ಹಾಗೇ ಇನ್ನೊಂದು ಮಾತನ್ನು ನಡೆಸಿಕೊಡಬೇಕು ಪ್ರಭು?'

'ಏನು ಹೇಳಿ ಬಂಕರಸರೇ?'

'ತಾವು ಈ ಬಂಡಾಯ ಅಡಗುವವರೆಗೂ ಅನ್ನ ಪಾನವನ್ನು ಮುಟ್ಟುವುದಿಲ್ಲವೆಂಬ ಪ್ರತಿಜ್ಞೆ ಮಾಡಿರುವುದಾಗಿ ತಿಳಿಯಿತು. ಮಹಾಪ್ರಭುಗಳು ನನಗಾಗಿ ಆ ಪ್ರತಿಜ್ಞೆಯನ್ನು ತ್ಯಜಿಸಬೇಕು. ನನ್ನ ಕಣ್ಣೆದುರಿಗೆ ಪ್ರಭುಗಳು ಮತ್ತೆ ಆಹಾರ ತೆಗೆದುಕೊಂಡರೆ, ನನ್ನ ಮೈಗೆ ವಜ್ರಬಲ ಬಂದಂತಾಗುತ್ತದೆ.'

'ರಾಜಕುಮಾರರ ನಡತೆ ನಮ್ಮನ್ನು ಜೀವಂತ ಶವವಾಗಿ ಮಾಡಿದೆ ಬಂಕರಸರೇ. ಶವಕ್ಕೇಕೆ ಅನ್ನಪಾನ ? ಮತ್ತೆ ನಾವು ಮೊಗವೆತ್ತಿ ಲೋಕವನ್ನು ನೋಡುವಂತೆ ಆದ ದಿನ ಆ ಮಾತು ?'

'ಹಾಗಾದರೆ ನನ್ನಲ್ಲಿ ಪ್ರಭುಗಳಿಗೆ ನಂಬಿಕೆ ಇಲ್ಲವೆಂದಂತಾಯಿತ್ತು.'

'ಏಕೆ'

'ರಾಜಕುಮಾರರನ್ನು ಎಳೆದುತಂದು ಪ್ರಭುಗಳ ಪಾದದ ಮೇಲೆ ಕೆಡಹುವ ಭಾರ ನನಗಿರಲಿ ಎಂದೆ. ಆ ನಂಬಿಕೆ ತಮಗಿದ್ದರೆ, ನನ್ನ ಈ ಮಾತನ್ನು ನಡೆಸಿಕೊಡಬೇಕು. ನನ್ನಲ್ಲಿ ನಂಬಿಕೆ ಇಲ್ಲವಾದರೆ, ಪ್ರಭುಗಳು ತಮ್ಮ ಪ್ರತಿಜ್ಞೆಯನ್ನು ನಡೆಸಬಹುದು. ಆದರೆ ಪ್ರಭುಗಳು ಆಹಾರ ತ್ಯಜಿಸಿದಷ್ಟು ದಿನ, ನಮಗೂ ಆಹಾರ ತ್ಯಜಿಸಲು ಅಪ್ಪಣೆ ಕೊಡಬೇಕು.'

ಬಂಕರಸರಾಡಿದ ಮಾತು ಕೇಳಿ, ಅವರ ಪ್ರೇಮಕ್ಕೆ ಸೋತು ಚಕ್ರವರ್ತಿಗಳು ಅವರ ಮಾತಿನಂತೆ ನಡೆಯಲು ಒಪ್ಪಿದರು. ಉಕ್ಕಿ ಬಂದ ಸ್ನೇಹದಿಂದ ಬಂಕರಸರ ಹೆಗಲ ಮೇಲೆ ಕೈಹಾಕಿ ಹೇಳಿದರು—

'ರಾಜಕುಮಾರರು ಹೀಗಾದುದನ್ನು ಕಂಡು, -ಈ ರಾಜ್ಯ ಹೀಗಾಯಿತೇ ಎಂದು ಒಂದುಗಳಿಗೆ ವ್ಯಥೆಯಾಗಿತ್ತು. ಈಗ ನಮ್ಮದೇ ಮೂರ್ಖತನವೆಂದು ತಿಳಿಯಿತು. ನಿಮ್ಮಂತಹ ನಿಷ್ಠ ಪ್ರಜೆಗಳ ರಕ್ಷಣೆ ಇರುವವರೆಗೂ ಈರಾಜ್ಯಕ್ಕೆ ಚ್ಯುತಿಯಿಲ್ಲ ಬಂಕರಸರೇ. ನಿಮ್ಮ ಪ್ರತಿಜ್ಞೆ ಯಶಸ್ವಿಯಾಗಲಿ.'

'ತಮ್ಮಂತಹ ಪ್ರಭುಗಳಿದ್ದರೆ ನಮ್ಮಂತಹ ಸೇವಕರು ಸಾವಿರ. ನಿಮ್ಮ ಕಿರುನಗೆಯ ಕಾಣಿಕೆಗಾಗಿ ಕೋಟಿ ಜನ್ಮ ಜೀವ ತೇಯಲು ಸಿದ್ಧರಾಗಿದೇವೆ ಪ್ರಭು. ತಾವು ನಮ್ಮ ಭಾಗ್ಯದೇವತೆ.'

—ಎಂದರು ಬಂಕರಸರು.

## ೧೯

ಚಕ್ರವರ್ತಿಗಳ ಇದಿರು ಒಂದು ವಾರದೊಳಗೆ ರಾಜಕುಮಾರರ ಬಂಡಾಯವನ್ನು ಅಡಗಿಸಿ, ರಾಜಕುಮಾರರನ್ನು ಕರೆತಂದು ಚಕ್ರವರ್ತಿಗಳಿಗೆ ಒಪ್ಪಿಸುವೆನೆಂದು ಪ್ರತಿಜ್ಞೆ ಮಾಡಿದ ಬಂಕರಸರು, ರಾಜಧಾನಿಯಲ್ಲಿ ಹೊತ್ತುಗಳೆಯದೆ, ವಿಶ್ರಾಂತಿ ತೆಗೆದುಕೊಳ್ಳಲೂ ಮನಮಾಡದೆ ರಾಜಕುಮಾರನ ನಾಯಕತ್ವದಲ್ಲಿ ದಾಳಿ ಮಾಡಿದ ವಿದ್ರೋಹಿಗಳ ಸೇನೆಯನ್ನು ಇದುರಿಸಲು ಹೊರಟರು. ರಾಜಧಾನಿಯಲ್ಲೂ ಅವರೊಂದಿಗೆ ತೆರಳಲು ಹೆಚ್ಚು ಸೈನ್ಯವಿಲ್ಲದ್ದರಿಂದ, ಇದ್ದಸೇನೆ, ವಿದ್ರೋಹದ ಗಾಳಿ ಬೀಸುವ ಹೊತ್ತಿನಲ್ಲಿ ರಾಜಧಾನಿಯ ಕಾವಲಿಗೆ ಬೇಕಾಗಿದ್ದುದರಿಂದ, ಬಂಕಗಸರು ತಮ್ಮ ವೇಳೆವಡಿಚರ ಪಡೆಯೊಂದಿಗೇ ಹೊರಡಲು ನಿಶ್ಚಯಿಸಿದರು. ಅವರೊಂದಿಗೆ ಆದಷ್ಟು ಸೇನೆಯನ್ನು ಕೊಟ್ಟು ಈ ದಾಳಿಯಲ್ಲಿ ಬಂಕರಸರಿಗೆ ಸೇನೆಯೊಡನೆ ನೆರವು ನೀಡಬೇಕೆಂದು, ಚಕ್ರವರ್ತಿಗಳೇ ವೆಂಗಿಯ ಅರಸು ಗುಣಗವಿಜಯಾದಿತ್ಯನಿಗೆ ಓಲೆ ಕಳಿಸಿದರು. ಬಂಕರಸರ ನಾಯಕತ್ವದಲ್ಲಿ, ಅವರ ವೇಳೆವಡಿಚರ ಸಿಡಿಲಪಡೆ, ರಾಜಧಾನಿಯಿಂದ ಪ್ರಯಾಣಮಾಡಿತು.

ವಿದ್ರೋಹಿಯನ್ನು ಹಿಡಿದು ತರಲು ಬಂಕರಸರು ಪ್ರತಿಜ್ಞೆಮಾಡಿದುದರಿಂದ ಚಕ್ರವರ್ತಿಗಳ ಮನಸ್ಸಿನ ಆಂದೋಳನ ಸ್ವಲ್ಪ ಕಡಮೆಯಾಗಿ, ರಾಜಧಾನಿಯಲ್ಲಿ ಅಲ್ಲಲ್ಲಿ ತಲೆ ಎತ್ತಿದ ಬಂಡಾಯದ ಕುರುಹನ್ನು ತೊಡೆಯಲು ಕಂಕಣ ಕಟ್ಟಿನಿಂತರು. ಹಗಲಿರುಳು ಬಿಡುವಿಲ್ಲದೆ ಕಾವಲು ಪಡೆ, ರಾಜಧಾನಿಯಲ್ಲಿ ಕಾವಲು ತಿರುಗಲಾರಂಭಿಸಿತು. ಕೋಟೆಯ ರಾಜದ್ವಾರ ಬಂಧಿತವಾಗಿ ' ಅಪಾಯ ಭೇರಿ ' ಮೊಳಗಿ, ನಾಗರಿಕರನ್ನು ಎಚ್ಚರಿಸಿತು. ಪಾನಶಾಲೆ, ನಾಟ್ಯಗೃಹ, ವ್ಯಾಪಾರದ ಬೀದಿಗಳು, ದೇವಾಲಯ ಬಸದಿಗಳಲ್ಲಿ ಬೇಹುಗಾರರು ಬಗೆಬಗೆಯ ವೇಷಧರಿಸಿ, ಮೈಯೆಲ್ಲಾ ಕಿವಿಯಾಗಿ ಸುತ್ತಲಾರಂಭಿಸಿದರು. ಕಾವಲು ಪಡೆಯುವರೊಡನೆ ಸುತ್ತುವ ಮುದುವೊಳಲಿನ ಬೇಟೆಯ ನಾಯಿಗಳ ಮೊರೆತಕ್ಕೆ ರಾಜಧಾನಿಯೇ ಕಂಪಿಸಿತು. ' ಬಹುಮಾನ ' ' ಭಯಂಕರ ಶಿಕ್ಷೆ ' ಗಳ ಕಟ್ಟಪ್ಪಣೆಯನ್ನು, ಗಾಳಿಯನ್ನೇ ಮಿಡಿದು ಟಮುಟಮಿಸುವ ತಮಟೆಗಳು ಸಾರಿದವು.

ಚಕ್ರವರ್ತಿಗಳು ಚಾವಡಿಯಲ್ಲೇ ಬಿಡಾರಮಾಡಿ, ಕತ್ತಿ ಹಿರಿದು ಕಾದುನಿಂತರು—ಪ್ರತೀಕಾರದ ರುದ್ರಮೂರ್ತಿಯಂತೆ. ಒಳ—ಹೊರಗೆ ಹಬ್ಬಿದ ಒಳಸಂಚನ್ನು ತುಳಿಯುವವರೆಗೂ ಅವರಿಗೆ ಬೇರಾವುದೂ ಬೇಡವಾದಂತಿತ್ತು. ಆ ಕಟ್ಟೆಚ್ಚರದ ಇದಿರು ವಿದ್ರೋಹಿಗಳ ಬಂಡಾಯದ ಸಂಚು ಬುದ್ಬುದದಂತೆ ಸಿಡಿದು ಹೋಯಿತು. ಗಳಿಗೆಗೊಬ್ಬರಂತೆ ಬಂಡಾಯದ ಒಳಸಂಚಿನಲ್ಲಿ ಸೇರಿದವರು ಬಯಲಾಗಿ ಸೆರೆಸೇರಿದರು. ಎಷ್ಟು ಜನ–ಎಷ್ಟು ವೇಷದಲ್ಲಿ! ಗಳಿಗೆಗಳಿಗೆಗೆ ಒಳಸಂಚಿನ ವಿವರ ಬಯಲಾಯಿತು. ಆದರೆ ಅದರ ಸೂತ್ರಧಾರಿಗಳು ಮಾತ್ರ ಸಿಗಲಿಲ್ಲ.

ಗಂಗರ ದಾಳಿಯ ವಿರುದ್ಧ ಬಂಕರಸರು ದಂಡಯಾತ್ರೆ ಹೊರಟು, ಕೈದಾಳವನ್ನು ವಶಪಡಿಸಿಕೊಂಡರೆಂದು ಕೇಳಿದ ದಿನವೇ ಮಂಗಿ, ಜಯಂತಿಯೊಡನೆ ರಾಜಧಾನಿಯಿಂದ ವೇಷಾಂತರಧಾರಿಯಾಗಿ ಪಲಾಯನ ಮಾಡಿದ್ದ—ಇನ್ನು ರಾಜಧಾನಿಯಲ್ಲಿ ತಾನು ಕ್ಷೇಮವಾಗಿ ಬದುಕುವುದು ಅಸಾಧ್ಯವೆಂದರಿತು.

ರಾಜಧಾನಿಯನ್ನು ಕವಿದ ಒಳಸಂಚಿನ ಧೂಳುಹೊಗೆ ತೊಲಗಿ, ರಾಜಧಾನಿಯ ವಾತಾವರಣ ಶುಭ್ರವಾದಮೇಲೆ, ಚಕ್ರವರ್ತಿಗಳು ಕೊಂಚ

ಶಾಂತರಾಗಿ, ಬಂಕರಸರಿಂದ ವರ್ತಮಾನ ಬರುವುದನ್ನು ಕಾಯುತ್ತಾ ಕುಳಿತರು. ಅಂದಿನ ಅವರ ಮೊಗದ ಶಾಂತಿ, ಬಿರುಗಾಳಿ ಬೀಸುವ ಮುನ್ನ ನೆಲ-ಬಾಂದಳವನ್ನು ಕವಿವ ಭಯಾನಕ ಶಾಂತಿಯಂತಿತ್ತು. ಅವರ ಮೊಗವನ್ನು ನೋಡಲು ಕೂಡಾ ಯಾರಿಗೂ ಧೈರ್ಯವಿರಲಿಲ್ಲ- ಅಂಥ ಕಠೋರತೆ ಅವರ ಮೊಗದಲ್ಲಿ ಬೀಡುಬಿಟ್ಟಿತ್ತು.

ಬಂಕರಸರು ತಮ್ಮ ವಚನವನ್ನು ಸುಳ್ಳಾಗಿಸಲಿಲ್ಲ. ಹೆಚ್ಚು ಪಡೆಯಿಲ್ಲದ ಅವರು ಪ್ರತ್ಯಕ್ಷ ಯುದ್ಧಕ್ಕೆ ಹೋಗದೆ, ಶತ್ರುಪಾಳಯದ ಸುಳುವರಿತು, ಇರುಳು ಕವಿದ ಹೊತ್ತಿನಲ್ಲಿ ಶತ್ರುಗಳಮೇಲೆ ಬಿದ್ದು ಕಗ್ಗೊಲೆ ಕಾಳಗ ನಡೆಸಿದರು. ಕತ್ತಿಗೆ ಇದಿರಾದವರನ್ನು ನಿರ್ದಾಕ್ಷಿಣ್ಯವಾಗಿ ಕತ್ತರಿಸಬೇಕೆಂದು ಕಟ್ಟಪ್ಪಣೆ ಮಾಡಿದ್ದರೂ, ರಾಜಕುಮಾರರ ಕೂದಲಿಗೂ ಧಕ್ಕೆ ಬರದಂತೆ ಎಚ್ಚರವಾಗಿರಬೇಕೆಂದೂ, ಶಂಕರಗಣನನ್ನು ಜೀವಂತ ಸೆರೆ ಹಿಡಿಯಬೇಕೆಂದೂ ಅಪ್ಪಣೆ ಮಾಡಿದ್ದರು.

ಈ ಕಗ್ಗೊಲೆ ಕಾಳಗದ ದಾಳಿಯನ್ನು ಎದುರಿಸಲಾಗದೆ, ಚೇದಿಯ ಹೈಹಯರ ಸೇನೆ, ಕಂಗೆಟ್ಟು ಕಿರಣಪುರದತ್ತ ಪಲಾಯನ ಮಾಡಿತು. ಓಡುವ ಶತ್ರುವಿನ ಬೆನ್ನಟ್ಟಿದ ಬಂಕರಸರ ಸೇನೆ ಕಿರಣಪುರದ ಬಳಿಸಾರುವ ವೇಳೆಗೆ, ವಿಜಯಾದಿತ್ಯರ ಸೇನೆಯೂ ಅವರಿಗೆ ಸಹಾಯಕವಾಗಿ ಬಂದು ಮತ್ತೊಂದು ದಿಕ್ಕಿನಿಂದ ದಾಳಿಮಾಡಿತು. ಕಿರಣಪುರ ಅಡಕೆ ಗತ್ತರಿಯಲ್ಲಿ ಸಿಲುಕಿದ ಅಡಕೆಯಂತಾಯಿತು.

ರಾಜಧಾನಿಯಿಂದ ಪಲಾಯನಮಾಡಿದ ಮುಂಗಿಯೂ, ಬೇರೆಲ್ಲೂ ಹೋಗಲಾರದೆ ಕಿರಣಪುರಕ್ಕೇ ಬಂದು ಸೇರಿದ್ದ. ಇಬ್ಬದಿಯಿಂದಲೂ ಕವಿದು ಬಂದ ಈ ದಾಳಿಯ ಇದಿರು ಕಿರಣಪುರ ಉಳಿಯುವುದಿಲ್ಲವೆಂಬುದು ಅವನಿಗೆ ಅರಿವಾಯಿತು. ಹಾಗೇ ತಾನು ಜೀವಂತನಾಗಿ ಸೆರೆಸಿಕ್ಕರೆ ಮುಂದೆ ಏನಾಗುವುದೆಂಬುದೂ ತಿಳಿದಿತ್ತು. ವಿದ್ರೋಹಿಗಳಿಗೆ ಹೇಳಿದ ದಂಡನೆಯೊಂದೇ-ಮರಣದಂಡನೆ. ಶತ್ರುಗಳ ಕೈಗೆ ಸಿಕ್ಕು ಸಾಯುವುದಕ್ಕಿಂತ,ರಣಾಂಗಣದಲ್ಲಿ ಸಾಯುವುದುಮೇಲು ಎಂದು ಅವನು ತನ್ನ ಮುಂದಿನ ಮಾರ್ಗವನ್ನು ನಿಶ್ಚಯಿಸಿಕೊಂಡ.

ಆ ಗಳಿಗೆಯಲ್ಲಿ ಅವನಿಗಿದ್ದ ಬಯಕೆ ಒಂದೇ-ತನ್ನ ಸಂಚು ಸಫಲ

ವಾಗಲಿಲ್ಲ. ಹೋಗಲಿ, ಕೈಗೆ ಸಿಕ್ಕ ರಾಜಕುಮಾರನನ್ನಾದರೂ ತೀರಿಸಿ, ರಾಜ್ಯಕ್ಕೆ ಉತ್ತರಾಧಿಕಾರಿಯಿಲ್ಲದಂತೆಮಾಡಿ, ಹಾಗಾದರೂ ರಾಷ್ಟ್ರಕೂಟ ಮನೆತನ ಮುಳುಗಲಿ ಎಂಬ ಬಯಕೆ. ಅದಕ್ಕಾಗಿಯೇ ರಾಜಕುಮಾರನ ಕೊಲೆಗೆ, ಜಯಂತಿಯನ್ನು ಪ್ರೇರೇಪಿಸಿದ.

ಗೆಲುವೆನೆಂದು ಬಯಸಿ ಬಂದ ಸಮರದಲ್ಲಿ ಸೋತು ಬಂದ ಶಂಕರಗಣನಿಗೆ ಉಳಿದಿದ್ದ ಬಯಕೆ ತನ್ನಭಾವನಾದ ರಾಜಕುಮಾರನನ್ನು ರಕ್ಷಿಸುವುದೊಂದೇ. ರಾಜಕುಮಾರನನ್ನು ರಕ್ಷಿಸದಿದ್ದರೆ ತನ್ನ ಸೋದರಿ ವಿಧವೆಯಾಗುವಳೆಂಬ ಭೀತಿ ಅವನನ್ನು ಕಾಡುತ್ತಿತ್ತು. ಮೊದಲು ರಾಜಕುಮಾರ ರಾಜಕುಮಾರನೇ ಆಗಿದ್ದಾಗ, ಆತ ಜಯಂತಿಯ ವಿಲಾಸದಲ್ಲಿ ಮಗ್ನನಾಗಿರುವುದು ಅಪ್ರಿಯವಾಗಿರಲಿಲ್ಲ, ಹಿತವೇ ಆಗಿತ್ತು. ಈಗ ಅವಳ ವಿಲಾಸದ ಬಲೆಯಲ್ಲಿ ರಾಜಕುಮಾರ ಬೇಟೆಯಾಗಿ ಸಿಲುಕಿದರೆ, ತನ್ನ ಸೋದರಿಯ ಬಾಳು—ಕಣ್ಣೀರಿನ ಕೊಳದಲ್ಲಿ ಉರುಳಿದಂತೆಯೇ ಎಂಬುದು ಮನವರಿಕೆಯಾಗಿ, ಜಯಂತಿ ಅವನಿಗೆ ಕಣ್ಣುರಿಯಾಗಿದ್ದಳು. ಆದುದರಿಂದ ಅವನು ಮಂಗಿ, ಜಯಂತಿಯರಿಬ್ಬರನ್ನೂ ಸಂಶಯದಿಂದ ನೋಡುತ್ತಾ, ಅವರ ಚಲನವಲನದಮೇಲೆ ಕಣ್ಣಿಡಲು ಗೂಢಚಾರರನ್ನು ನೇಮಿಸಿದ್ದ. ಆದರಿಂದಾಗಿ, ಜಯಂತಿಯು ಕೊಟ್ಟ ವಿಷಬೆರೆತ ಮದ್ಯದಿಂದ ರಾಜಕುಮಾರನ ಜೀವ ಉಳಿಯಿತು. ರಾಜಕುಮಾರನಿಗೆಂದು ಸಿದ್ಧಪಡಿಸಿದ ವಿಷವನ್ನು ಆತನ ಕಣ್ಣೆದುರು, ಶಂಕರಗಣನ ಅಪ್ಪಣೆಯಂತೆ ತಾನೇ ಕುಡಿದು ಮೃತಳಾದಳು ಜಯಂತಿ.

ಸಾಯುವಾಗ ಅವಳಾಡಿದ ಮಾತಿನಿಂದ ರಾಜಕುಮಾರನ ಕಣ್ಣನ್ನು ಕವಿದಿದ್ದ ಮೋಹ, ರಾಜ್ಯದಾಹದ ಮಬ್ಬು ತೊಲಗಿ, ತನ್ನ ಅಪರಾಧದ ಗುರುತ್ವ ಅರಿವಾಯಿತು. ರಾಜಕುಮಾರನಿಂದಲೇ, ರಾಷ್ಟ್ರಕೂಟ ರಾಜ್ಯವನ್ನು ನಿರ್ಮೂಲ ಮಾಡಿಸುವ ಮಂಗಿಯ ಭಯಂಕರ ಒಳಸಂಚನ್ನರಿತು ದಿಗ್ಭ್ರಮೆಯಾದ. ಆತನಿಗೆ ತನ್ನ ಮರುಳತನದ ಅರಿವಾಗಿತ್ತು—ಅದರೆ ಅದರಿಂದ ವಿಮೋಚನೆಯ ದಾರಿ?

ಒರೆಯಲ್ಲಿದ್ದ ಕತ್ತಿಯನ್ನು ಹಿರಿದು, ಮಂಗಿಯನ್ನು ಹುಡುಕಿ ಅಲೆದ ರಾಜಕುಮಾರ. ಆದರೆ ಮಂಗಿ ಮಂಗಮಾಯವಾಗಿದ್ದ.

ಮಂಗಿಯ ಸಂಚನ್ನು ಅರಿತು ಶಂಕರಗಣನ ಕಣ್ಣೂ ತೆರೆಯಿತು. ತನ್ನ ಅಪಮಾನದ ಪ್ರತೀಕಾರಕ್ಕಾಗಿಯಲ್ಲ ಈ ಬಂಡಾಯ, ಗಂಗರ ಗುಲಾಮಗಿರಿಗೆ ರಾಷ್ಟ್ರಕೂಟ ರಾಜ್ಯಲಕ್ಷ್ಮಿಯನ್ನು ಒಪ್ಪಿಸಲಿಕ್ಕಾಗಿ ಎಂಬುದು ತಿಳಿದು ಆತ ತನ್ನ ಮೂರ್ಖತನಕ್ಕಾಗಿ ಹಳಹಳಿಸಿದ. ತನ್ನ ಮೇಲೇ ತನಗೆ ಹೇಸಿಗೆಯಾಯಿತು. ಸಾವಿನ ಜಲದಲ್ಲಿ ಈ ಪಾತಕ ವನ್ನು ತೊಳೆಯಲು ಆತನೂ ನಿಶ್ಚಯಿಸಿದ.

ಮರುದಿನ ಕೋಟೆಯ ಬಾಗಿಲನ್ನು ತೆರೆದು ಶತ್ರುಗಳಮೇಲೆ ಬೀಳಲು ನಿಶ್ಚಯಿಸಿದ ಶಂಕರಗಣ. ರಾಜಕುಮಾರನೂ ಶಂಕರಗಣನನ್ನು ಹಿಂಬಾಲಿಸಲು ಸಿದ್ಧವಾದ. ಆ ಬಯಕೆಯಿಂದ ರಾಜಕುಮಾರನನ್ನು ಹಿಮ್ಮೆಟ್ಟಿಸಲಾಗದ ಶಂಕರಗಣ ಬೇರೆ ದಾರಿಗಾಣದೆ, ರಾಜಕುಮಾರ ನನ್ನು ಬಂಧಿಸಿ, ಬಂಕರಸರಿಗೆ ಒಪ್ಪಿಸುವುದೆಂದು ತನ್ನ ಆಪ್ತರಿಗೆ ಅಪ್ಪಣೆ ಮಾಡಿದ. ರಾಜಕುಮಾರ ಬಂದಿಯಾದ.

ಇಲ್ಲೊ ತನ್ನ ಒಳಸಂಚು ಬಯಲಾದುದನ್ನರಿತ ಮಂಗಿ, ಹೇಗಾ ದರೂ ಕೋಟೆಯಿಂದ ತಪ್ಪಿಸಿಕೊಂಡು ಹೋಗಲು ಯತ್ನಿಸಿ, ಕತ್ತಲಿನಲ್ಲಿ ಕೋಟೆಯಿಂದಾಚೆಗೆ ನುಸುಳಿದ. ಆದರೆ ಕೋಟೆಯ ಸುತ್ತಲೂ ಬೀಡುಬಿಟ್ಟು ಕಾವಲುಕಾಯುವ ಬಂಕರಸರ ಸೇನೆಯ ಕಾವಲು ಪಡೆಯ ಹದ್ದಿನ ಕಣ್ಣೆನಿದಿರು ಅವನ ಬಯಕೆ ಸಫಲವಾಗಲಿಲ್ಲ. ತನ್ನನ್ನು ಹಿಡಿ ಯಲು ಬಂದವರೊಡನೆ ಹೋರಾಡಿ, ಇನ್ನು ಸೆರೆಯಾಗುವೆನೆಂದು ಅರಿ ವಾದಾಗ, ತಾನೇ ಕತ್ತಿಯಿಂದ ಎದೆಯನ್ನು ಇರಿದುಕೊಂಡು ಮೃತನಾದ. ಕಾವಲವರು ಹೊತ್ತುತಂದ ಅವನ ಹೆಣವನ್ನು ಗುರುತಿಸಿ, ಜೀವಂತನಾಗಿ ಅವನು ತಮ್ಮ ಕೈಗೆ ಸಿಗಲಿಲ್ಲವಲ್ಲಾ ಎಂದು ಹಳಹಳಿಸಿದರು ಬಂಕರಸರು. ಅವನು ಜೀವಂತನಾಗಿದ್ದರೆ ಏನನ್ನು ಅನುಭವಿಸುತ್ತಿದ್ದನೆಂಬುದನ್ನು ಮರಕ್ಕೆ ನೇತು ಹಾಕಿದ ಅವನ ಹೆಣವನ್ನು ಕಿತ್ತುತಿಂದು ಕೀಚು ಧ್ವನಿ ಯಲ್ಲಿ ಕೂಗುವ ಹದ್ದು, ಕಾಗೆಗಳು ಹಾಡಿದವು. ಪಾಪಿಯ ಜೀವನ ಅಂತ್ಯಕ್ರಿಯೆಯ ಗೌರವವೂ ಇಲ್ಲದೆ ಕೊನೆಗೊಂಡಿತು.

ಮರುದಿನವೇ ಶಂಕರಗಣ ತಾನು ನಿಶ್ಚಯಿಸಿದಂತೆ, ಕೋಟೆಯ ಬಾಗಿಲನ್ನು ತೆಗೆಸಿ, ರಾಷ್ಟ್ರಕೂಟ ಸೇನೆಯ ಮೇಲೆ ಎರಗಿದ. ತನ

ಪರಾಕ್ರಮವನ್ನು ಕಂಡು ಎರಡು ಪಡೆಗಳೂ ಮೆಚ್ಚಿ ಹೊಗಳುವಂತೆ, ರಥಿಕನಾಗಿ, ಅಶ್ವಾರೋಹಿಯಾಗಿ, ಪಥಿಕನಾಗಿ ಹೋರಾಡಿ, ಮೈಯ್ಯಲ್ಲಾದ ಸಾವಿರ ಗಾಯಗಳು, ಅವನ ಪರಾಕ್ರಮದ ಗೀತವನ್ನು ಹಾಡುತ್ತಿರಲು, ಹೋರಾಡುತ್ತಲೇ ರಣಭೂಮಿಯಲ್ಲಿ ಒರಗಿದ. ವೀರನಿಗೆ ತಕ್ಕ ಸಾವು ಪಡೆಯಬೇಕೆಂಬ ಅವನ ಬಯಕೆ ಸಫಲವಾಯಿತು.

ಶಂಕರಗಣ ಉರುಳಿದ ಮೇಲೆ, ಕೋಟೆ ಉರುಳುವುದು ತಡವಾಗಲಿಲ್ಲ. ಕಿರಣಪುರ ಬಂಕರಸ, ವಿಜಯಾದ್ಯರ ಪಡೆಗಳಿಗೆ ವಶವಾಯಿತು.

ರಾಜಕುಮಾರನನ್ನು ಹುಡುಕಿಕೊಂಡು ಅರಮನೆಯ ಬಳಿ ಬಂದ ಬಂಕರಸರಿಗೆ, ಶಂಕರಗಣನ ಅಪ್ಪಣೆಯಂತೆ, ಪತ್ನೀಸಹಿತವಾಗಿ ರಾಜಕುಮಾರನನ್ನು ಬಂಕರಸರಿಗೆ ಒಪ್ಪಿಸಿದರು, ಶಂಕರಗಣನ ದಳಪತಿಗಳು.

ಪತ್ನೀಸಹಿತನಾಗಿ ಇದುರಿಗೆ ನಿಂತ ರಾಜಕುಮಾರನನ್ನು ಕಂಡು, ಆತನ ವಿವಾಹದ ವಿಷಯವನ್ನರಿಯದ ಬಂಕರಸರಿಗೆ ಆಶ್ಚರ್ಯವಾಯಿತು.

'ಈ ತಾಯಿ ಯಾರು?'

—ಎಂದು ಶಂಕರಗಣನ ದಳಪತಿಗಳನ್ನು ವಿಚಾರಿಸಿದರು. ಅವರಿಂದ ಆಕೆ ಶಂಕರಗಣನ ಸೋದರಿ, ಹೈಹಯ ರಾಜಕುಮಾರಿಯೆಂದೂ, ರಾಜಕುಮಾರರನ್ನು ಅಗ್ನಿಸಾಕ್ಷಿಯಾಗಿ ವರಿಸಿದ ಪತ್ನಿಯೆಂದೂ ತಿಳಿದು ಮತ್ತಷ್ಟು ಆಶ್ಚರ್ಯಪಟ್ಟು ಕೇಳಿದರು—

'ಹಾಗಾದರೆ ಇವರನ್ನು ಬಂಧನದಲ್ಲಿಟ್ಟದ್ದೇಕೆ?'

'ರಾಜಕುಮಾರರು ಸಮರಾಂಗಣದಲ್ಲಿ ಹೋರಾಡಿ ಸಾಯುವ ನಿಶ್ಚಯಮಾಡಿದ್ದರು. ಆ ನಿಶ್ಚಯದಿಂದ ಅವರನ್ನು ಉಳಿಸುವುದಕ್ಕಾಗಿ ಅವರನ್ನು ಬಂಧನದಲ್ಲಿಡಲಾಯಿತು. ಅವರನ್ನು ಕ್ಷೇಮವಾಗಿ ತಮಗೆ ಒಪ್ಪಿಸಬೇಕೆಂದು ಚೇದಿಯ ರಾಜಕುಮಾರರ ಅಪ್ಪಣೆಯಾಗಿತ್ತು. ಅದರಂತೆಯೇ ನಡೆದುಕೊಂಡಿದ್ದೇವೆ.' ಎಂದರವರು.

ಅವರಿಂದಲೇ ಮುಂಗಿ ಕಡೆಗಾಲದಲ್ಲಿ ರಾಜಕುಮಾರರನ್ನು ವಿಷವಿಟ್ಟು ಕೊಲ್ಲಲು ಮಾಡಿದ ಪ್ರಯತ್ನ, ಶಂಕರಗಣನ ಎಚ್ಚರಿಕೆಯಿಂದ

ಅದು ತಪ್ಪಿದುದು ತಿಳಿಯಿತು. ಅದೆಲ್ಲವನ್ನೂ ತಿಳಿಸಿ, ದಳಪತಿಗಳು ಹೇಳಿದರು—

'ರಾಷ್ಟ್ರಕೂಟ ರಾಜ್ಯವನ್ನು ವಿಧ್ವಂಸನ ಮಾಡುವ ಬಯಕೆ ನಮ್ಮ ರಾಜಕುಮಾರರಿಗೆ ಇರಲಿಲ್ಲ. ತಾವಿದ್ದೂ, ಲೋಕಾದಿತ್ಯರನ್ನು ಚಕ್ರವರ್ತಿಗಳು ಸೇನಾಧಿಪತಿಯನ್ನಾಗಿ ಮಾಡಿದರಲ್ಲಾ ಎಂಬ ಸಿಟ್ಟಿನಿಂದ, ರಾಜಕುಮಾರರನ್ನು ಚಕ್ರವರ್ತಿಯಾಗಿ ಮಾಡಿ, ತಾವು ಸೇನಾಧಿಪತಿಯಾಗಿ ಮೆರೆಯಬೇಕು ಎಂಬ ಏಕೈಕ ಉದ್ದೇಶದಿಂದ ಅವರು ಮಂಗಿಯ ಒಳಸಂಚಿನಲ್ಲಿ ಸೇರಿದರು. ಆದರೆ ಮಂಗಿಯ ನಿಜವಾದ ಉದ್ದೇಶ ಅರಿವಾದಮೇಲೆ ಅವರಿಗೆ ಬದುಕುವಾಸೆ ಉಳಿಯಲಿಲ್ಲ. ತಮ್ಮ ಪಾಪಕ್ಕೆ ಸಾವೊಂದೇ ಪ್ರಾಯಶ್ಚಿತ್ತವೆಂದರಿತು, ಸಮರಾಂಗಣದಲ್ಲಿ ಮೃತ್ಯುವನ್ನಾಲಿಂಗಿಸಿದರು.'

'ಅನ್ಯಾಯವಾಯಿತು. ರಾಷ್ಟ್ರಕೂಟ ರಾಜ್ಯಕ್ಕೆ ಅಂತಹ ನಿಷ್ಠರ ಸೇವೆ ತಪ್ಪಿದುದು ವಿಷಾದಕರ' ಎಂದು ಪಶ್ಚಾತ್ತಾಪಪಟ್ಟು, ಬಂಕರಸರು ಯಾವ ಮಾತೂ ಆಡದೆ ಕಡೆದ ವಿಗ್ರಹದಂತೆ ನಿಂತಿದ್ದ ರಾಜಕುಮಾರರ ಇದಿರು ತಲೆಬಾಗಿ, ಅವರ ಪಾದದ ಬಳಿ ತಮ್ಮ ಖಡ್ಗವನ್ನಿಟ್ಟು—

'ರಾಜಕುಮಾರರು ನಮ್ಮ ನಿಷ್ಠೆಯನ್ನು ಸಂದೇಹಿಸಬಾರದು. ನಾವು ರಾಷ್ಟ್ರಕೂಟ ಸಿಂಹಾಸನದ ಆಳುಗಳು.' ಎಂದರು.

'ನಾನು ತಮ್ಮ ಬಂದಿ. ಅಪ್ಪಣೆಯಾಗಲಿ.' ಎಂದ ರಾಜಕುಮಾರ, ಅವರ ಸೌಜನ್ಯವನ್ನು ಕಂಡು ಕಣ್ಣಲ್ಲಿ ಒಡೆದ ಕಂಬನಿಯನ್ನು ತೋರಗೊಡದೆ ಮೊಗದಿರುಹಿ. ಪಕ್ಕದಲ್ಲಿ ತನ್ನಂತೆಯೇ ನಿಂತ ಪತ್ನಿ ಉಜ್ವಲಾದೇವಿಗೆ ಹೇಳಿದ—'ಉಜ್ವಲಾ, ನೀನೂ ನಮ್ಮಂತೆಯೇ ಬಂದಿ. ನನ್ನ ಕೈಹಿಡಿದು ಆದ ಈ ಅಪಮಾನವನ್ನು ಕ್ಷಮಿಸು.'

'ನೀವು ನಡೆದದ್ದು ನನ್ನ ದಾರಿ ಪ್ರಭು. ಅರಮನೆಯಾಗಲಿ, ಸೆರೆಮನೆಯಾಗಲಿ—ನಾನು ನಿಮ್ಮ ಛಾಯಾನುವರ್ತಿನಿ.'

—ಎಂದಳು ಹೈಹಯ ರಾಜಕುಮಾರಿ, ಮತ್ತಷ್ಟು ರಾಜಕುಮಾರರ ಬಳಿಸರಿದು ನಿಂತು.

'ಸರಿ. ಉಜ್ವಲಾ. ನೀನು ಬಳಿಯಿದ್ದರೆ ಸಾವೂ ನನಗೆ ಸ್ವರ್ಗ—

ಬಂಕರಸರೇ—ನಾನು ತಮ್ಮ ಸೆರೆಯಾಳು, ರಾಜದ್ರೋಹಿ, ಬಂಡಾಯಗಾರ. ನನ್ನ ಬಗ್ಗೆ ಚಕ್ರವರ್ತಿಗಳ ಅಪ್ಪಣೆಯಾದಂತೆ ನಡೆದುಕೊಳ್ಳಿ. ಯಾರಿಗಾದರೂ ದಾರಿ ತೋರಲು ಹೇಳಿ. ಬಂದಿಗಳು ಇರುವ ಸ್ಥಳ ನಮಗೆ ತಿಳಿಯದು.' ಎಂದ ರಾಜಕುಮಾರ.

'ತಮ್ಮ ಸ್ಥಳ ಎಲ್ಲಿರುವುದೆಂದು ನಾನು ಬಲ್ಲೆ ಪ್ರಭು. ನಾನು ತೋರಿಸುತ್ತೇನೆ ಬನ್ನಿ.'—ಬಂಕರಸರು ಹೇಳಿದರು.

'ಎಲ್ಲಿದೆ?'

'ರಾಷ್ಟ್ರಕೂಟ ಪ್ರಜೆಗಳ ಹೃದಯ ಸಿಂಹಾಸನದ ಮೇಲೆ. ನಮ್ಮೆಲ್ಲರ ಎದೆಯ ಮಂದಾಸನದಲ್ಲಿರುವ ಆರಾಧ್ಯ ದೇವತೆ ತಾವು.'

'ವಿದ್ರೋಹಿಗಳ ಬಗ್ಗೆ ಬಳಸಬಹುದಾದ ಮಾತುಗಳಲ್ಲ ಅವು.'

'ಶುದ್ಧ ಪಶ್ಚಾತ್ತಾಪದ ಗಂಗಾ ಜಲಸೇಚನೆಯಿಂದ ಪವಿತ್ರವಾಗದ ಪಾಪವೊಂದೂ ಜಗತ್ತಿನಲ್ಲಿಲ್ಲ ಪ್ರಭು. ತಮಗಿನ್ನು ಆ ಪಾಪಲೇಪವಿಲ್ಲ. ನಿಮಗಾಗಿ ಕಾದಿರುವ ಪೀಠದಲ್ಲಿ ಕುಳಿತು ಬೆಳಗಲು ಬನ್ನಿ.'

—ಎಂದರು ಬಂಕರಸರು.

ರಾಜಕುಮಾರ ಬಾಗಿಸಿದ ತಲೆಯನ್ನು ಮೇಲೆತ್ತದೆ ನಿಂತು ಅವರ ಮಾತನ್ನಾಲಿಸಿದ. ಕಂಬನಿಯೊಂದು ಆತನ ಕಣ್ಣಿನಿಂದುರುಳಿ ನೆಲವನ್ನು ಸೋಕಿ ಒಡೆಯಿತು.

'ನನ್ನ ಪಾಪಕ್ಕೆ ಪ್ರಾಯಶ್ಚಿತ್ತವೇ ಇಲ್ಲ. ಬಂಕರಸರೇ. ಆದಕ್ಕಿರುವುದೊಂದೇ ಪ್ರಾಯಶ್ಚಿತ್ತ—ಸಾವು.'

—ಎಂದ ಪಶ್ಚಾತ್ತಾಪದಗ್ಧವಾದ ಹೃದಯದ ರಾಜಕುಮಾರ.

## ೨೦

'ಸೆರೆಯಾಳಿನ ಪಾಪಕ್ಕೆ ಪಶ್ಚಾತ್ತಾಪವೇ ಪ್ರಾಯಶ್ಚಿತ್ತವಲ್ಲ. ರಾಜದ್ರೋಹಕ್ಕೆ ವಿಧಿಸಿರುವ ಶಿಕ್ಷೆ ಒಂದೇ—ಮರಣ ದಂಡನೆ. ರಾಷ್ಟ್ರಕೂಟ ರಾಜ್ಯದ ವಿರುದ್ಧ ಬಂಡಾಯವೆದ್ದ ರಾಜಕುಮಾರ ಕೃಷ್ಣನಿಗೆ ನಾವು ಆ ಶಿಕ್ಷೆಯನ್ನು ವಿಧಿಸಿದ್ದೇವೆ.'

—ಜನ ಕಿಕ್ಕಿರಿದು ನೆರೆದ ನ್ಯಾಯಾಲಯದಲ್ಲಿ, ಧರ್ಮಪೀಠದಲ್ಲಿ ಕುಳಿತ ಚಕ್ರವರ್ತಿಗಳು ಖಚಿತವಾದ ಸ್ವರದಲ್ಲಿ ಹೇಳಿದರು—ಅವರ ಮಾತು ಕೇಳಿ ಸಭೆ ಗಡಗಡ ನಡುಗಿತು.

ಮರಣದಂಡನೆಯ ತೀರ್ಪು! ತೀರ್ಪು ಮಗನಮೇಲೆ—ತೀರ್ಪು ಕೊಟ್ಟವರು ಖಾಸಾ ತಂದೆ.

ಚಕ್ರವರ್ತಿಗಳಿಂದ ಈ ತೀರ್ಪನ್ನು ನಿರೀಕ್ಷಿಸಿರಲಿಲ್ಲ ಸಭೆ. ನ್ಯಾಯ ಪೀಠದಮೇಲೆ ಕುಳಿತ ಚಕ್ರವರ್ತಿಗಳು, ಪೀಠದಮುಂದೆ ನ್ಯಾಯಕ್ಕೆ ಸಾಕ್ಷಿ ಯೆಂಬಂತೆ ಉರಿಯುತ್ತಿದ್ದ ಅಗ್ನಿಯಷ್ಟೇ ಭಯಂಕರವಾಗಿ ತೋರಿದರು.

ಅವರ ತೀರ್ಪನ್ನು ಕೇಳಿ ಸಭೆ ನಿಬ್ಬೆರಗಾಗಿ, ಚಕ್ರವರ್ತಿಗಳನ್ನು, ಅಪರಾಧಿಯ ಸ್ಥಾನದಲ್ಲಿ ಸಾಮಾನ್ಯ ಸೆರೆಯಾಳುಗಳಂತೆ ಕಬ್ಬಿಣದ ಸರ ಪಳಿ ಧರಿಸಿ, ಬಿಚ್ಚುಗತ್ತಿಯ ಭಟರ ನಡುವೆ ಬಾಗಿಸಿದ ತಲೆಯನ್ನು ಎತ್ತದೆ ನಿಂತ ರಾಜಕುಮಾರನನ್ನು ನೋಡಿದರು—ತಮ್ಮ ಕಣ್ಣನ್ನು ನಂಬಲಾಗ ದವರಂತೆ.

ಊಹೂ-ಯಾರೂ ಹೀಗಾಗಬಹುದೆಂದು ನಿರೀಕ್ಷಿಸಿರಲಿಲ್ಲ.

ತನ್ನ ಪ್ರತಿಜ್ಞೆಯಂತೆ, ರಾಜಕುಮಾರನನ್ನು ತಂದು ಚಕ್ರವರ್ತಿ ಗಳಿಗೆ ಒಪ್ಪಿಸಿದಾಗ, ಅದರ ಪರಿಣಾಮ ಹೀಗಾಗಬಹುದೆಂದು ಬಂಕರ ಸರೂ ನಿರೀಕ್ಷಿಸಿರಲಿಲ್ಲ.

ಪತ್ನೀಸಹಿತನಾಗಿ, ಪಶ್ಚಾತ್ತಾಪದಿಂದ ಕಳೆಗುಂದಿದ ಮೊಗದಿಂದ ಇದಿರುನಿಂತ ಮಗನನ್ನು ಕಂಡು ತಂದೆಯ ಹೃದಯ ಕರಗಿ,ಕ್ಷಮಾದಾನದ ಆಶೀರ್ವಾದ ಮಾಡಬಹುದೆಂದೇ ಬಗೆದಿದ್ದರು. ಆದರೆ ಮೊದಲ ಹೆಜ್ಜೆ ಯಲ್ಲೇ ಅವರಿಗೆ ನಿರಾಸೆಯಾಗಿತ್ತು.

ರಾಜಕುಮಾರನೊಂದಿಗೆ ಬಂದು, ಚಕ್ರವರ್ತಿಗಳನ್ನು ಕಂಡರು ಬಂಕರಸರು. ಬಂಕರಸರಿಗೆ ಮಾತ್ರ ಒಳಗೆ ಬರಲು ಅಪ್ಪಣೆಯಾಯಿತು. ಗೆದ್ದುಬಂದ ಬಂಕರಸರನ್ನು ಅಭಿನಂದಿಸಿ ಚಕ್ರವರ್ತಿಗಳು—

'ತಮ್ಮ ಪ್ರತಿಜ್ಞೆಯಲ್ಲಿ ಯಶಸ್ವಿಗಳಾದಿರಿ. ಇನ್ನು ನಮ್ಮ ಪಾಲಿನ ಕರ್ತವ್ಯ ಉಳಿಯಿತು. ನಿಮ್ಮ ನಿಷ್ಠೆಯನ್ನು ಈ ರಾಜ್ಯ ಎಂದೂ ಮರೆ ಯುವುದಿಲ್ಲ' ಎಂದರು.

'ಪ್ರಭುಗಳಲ್ಲಿ ನಾನೊಂದು ಮನವಿ ಸಲ್ಲಿಸಬಹುದೇ?'

'ಏನು ಹೇಳಿ. ಸಲ್ಲಿಸಬಹುದಾದ ಮನವಿಯನ್ನು ಸಲ್ಲಿಸಲು ನಾವೆಂದೂ ಹಿಂಜರಿದಿಲ್ಲ.'

‘ ರಾಜಕುಮಾರರ ಬಗ್ಗೆ ಪ್ರಭುಗಳು ಕುಪಿತರಾಗಿರುವುದು ಸಹಜ. ಆದರೆ ಈಗಾಗಲೇ ಅವರು ಪಶ್ಚಾತ್ತಾಪದಿಂದ ಸಾಕಷ್ಟು ಶಿಕ್ಷೆ ಅನುಭವಿಸಿದಾರೆ. ಅವರ ಬಗ್ಗೆ ಪ್ರಭುಗಳು ಉದಾರತೆಯಿಂದ ನಡೆದುಕೊಳ ಬೇಕೆಂಬುದಷ್ಟೇ ನನ್ನ ಬೇಡಿಕೆ.’

‘ ಅವರ ಬಗ್ಗೆ ಉದಾರತೆಯಿಂದ ನಡೆದುಕೊಳ್ಳಲು ನಾವಾರು ಬಂಕರಸರೇ? ಅಪರಾಧಿಯ ಬಗ್ಗೆ ತನ್ನ ತೀರ್ಮಾನಕೊಡುವ ಅಧಿಕಾರ ಪಡೆದಿರುವುದು ನ್ಯಾಯ ಪೀಠ. ಅದರ ತೀರ್ಮಾನಕ್ಕೆ ಎಲ್ಲರೂ ತಲೆಬಾಗಬೇಕು. ಆದುದರಿಂದ ಅಪರಾಧಿಯ ಪರ ತಾವು ವಾದಿಸಬಾರದು.’

‘ ಹೋಗಲಿ. ಅವರನ್ನು ಕಂಡು ಮಾತನಾಡುವುದಕ್ಕೆ ಅಭ್ಯಂತರವೇನೂ ಇಲ್ಲತಾನೇ ಪ್ರಭು?’

‘ ಮಾತನಾಡುವ ಮನಸ್ಸಿಲ್ಲದಿರುವುದೇ ದೊಡ್ಡ ಅಭ್ಯಂತರ. ಮಾತಾಡುವುದಿರಲಿ, ಅವರ ಮೊಗ ನೋಡುವ ಆಸೆಯೂ ನಮಗಿಲ್ಲ. ಆ ವಿಚಾರದಲ್ಲಿ ನಾವೀಗಾಗಲೇ ಒಂದು ತೀರ್ಮಾನಕ್ಕೆ ಬಂದಿದೇವೆ. ಆದುದರಿಂದ ತಾವು ಆ ಬಗ್ಗೆ ಹೆಚ್ಚು ಮಾತನಾಡದಿರುವುದೇ ಮೇಲು.... ಈಗ ರಾಜಕುಮಾರರನ್ನು ಎಲ್ಲಿಟ್ಟಿದೀರಿ, ಬಂಕರಸರೇ?’

‘ ನಮ್ಮೊಂದಿಗೇ, ನಮ್ಮ ಬಿಡಾರದಲ್ಲೇ ಇದ್ದಾರೆ....ಈಗ ನನ್ನ ಜೊತೆಯಲ್ಲಿ ತಮ್ಮ ದರ್ಶನಕ್ಕೆ ಬಂದರು....’

‘ ಅದಾಗದು....ತಾವು ದೊಡ್ಡ ತಪ್ಪು ಮಾಡುತ್ತಿದ್ದೀರ....ಈಗ ಅವರನ್ನು ನಮ್ಮ ವಶಕ್ಕೆ ಒಪ್ಪಿಸಲೆಂದು ತಾನೇ ತಂದಿರುವುದು.’

‘ ಅಹುದು ಪ್ರಭು ’

‘ ಕರೆತಂದ ಕೂಡಲೇ ಕಾರಾಗೃಹದ ಅಧಿಕಾರಿಗೆ ಒಪ್ಪಿಸಬೇಕಾಗಿತ್ತು. ಆಯಿತು ಚಿಂತೆಯಿಲ್ಲ....’ ಎಂದು ಬಳಿಯಿದ್ದ ಕರೆಜಾಗಟೆಯನ್ನು ಸದ್ದು ಮಾಡಿದರು. ಬಾಗಿಲ ಬಳಿಯ ದ್ವಾರಪಾಲಕ ಒಳ ಬಂದು ವಂದಿಸಿದ.

‘ ಅಂಗರಕ್ಷಕ ಪಡೆಯ ನಾಯಕರಿಗೆ ಹೇಳು—ಹೊರಗಿರುವ ರಾಜಕುಮಾರರ ಕೈ ಕಾಲುಗಳಿಗೆ ಸರಪಳಿ ಹಾಕಿ, ಕಾರಾಗೃಹಕ್ಕೆ ಕರೆದೊಯ್ಯಬೇಕೆಂದು. ಇದು ಚಕ್ರವರ್ತಿಗಳ ಕಟ್ಟಪ್ಪಣೆ. ಇದನ್ನು ಮೀರಿದವರಿಗೆ

ಕಠೋರ ಶಿಕ್ಷೆಯಾಗುವುದೆಂದ್ದು ತಿಳಿಸು.'

ದ್ವಾರಪಾಲಕ ಒಂದು ಗಳಿಗೆ ಆ ಮಾತು ಕೇಳಿ, ಹಾವು ಮುಟ್ಟಿದಂತೆ ನಡುಗಿ, ವಂದಿಸಿ ಹೊರಟು ಹೋದ.

'ಇದೇನು ಅಪ್ಪಣೆ ...ಇದೇನು ಮಾಡಿದಿರಿ ಪ್ರಭು?'–ಬಂಕರಸರು ಕಾತರರಾಗಿ ಕೇಳಿದರು.

'ವಿದ್ರೋಹಿಯನ್ನು ನಡೆಸಿಕೊಳ್ಳುವ ರೀತಿ ನಿಮಗೆ ಹೊಸದಲ್ಲ ಬಂಕರಸರೇ?'

'ರಾಜಕುಮಾರರಿಗೂ........'

'ಅವರೀಗ ರಾಜಕುಮಾರರಲ್ಲ, ಬಂಡಾಯಗಾರರು....ದಯವಿಟ್ಟು ನಮಗೀಗ ವಿಶ್ರಾಂತಿ ಪಡೆಯಲು ಅವಕಾಶ ಕೊಡುತ್ತೀರಾ?'

ಆ ಮಾತನ್ನು ಮುಂದುವರಿಸಲು ಇಚ್ಛೆಯಿಲ್ಲವೆಂಬಂತೆ ಹೇಳಿದರು ಚಕ್ರವರ್ತಿಗಳು, ಅಂದಿನ ಮಾತುಕಥೆ ಅಲ್ಲಿಗೆ ಮುಗಿಯಿತೆಂದು ಸೂಚಿಸಿ. ಬಂಕರಸರ ಹೃದಯದಲ್ಲಿ ತಾಂಡವವಾಡುತ್ತಿದ್ದ ಗೆಲುವಿನ ಉಲ್ಲಾಸವೆಲ್ಲಾ ಬಿಸಿಲು ಸೋಕಿದ ಇಬ್ಬನಿಯಂತೆ ಕರಗಿ ಹೋಯಿತು.

'ಪ್ರಭುಗಳ ಚಿತ್ತ' ಎಂದು ಮಂಕಾದ ಧ್ವನಿಯಲ್ಲಿ ನುಡಿದು, ವಂದಿಸಿ ಹೊರಡಲನುವಾದರು.

'ಬಂಕರಸರ ಮನಸಿಗೆ ನೋವಾಗಿರಬಹುದು, ಕ್ಷಮಿಸಬೇಕು. ರಾಜ್ಯರಥವನ್ನು ನಡೆಸುವ ನ್ಯಾಯದ ಕುದುರೆಗೆ ಮಮತೆಯ ಕಡಿವಾಣ ಬಿಗಿಯುವುದು ಸಲ್ಲದು'

—ಎಂದವರೇ ಚಕ್ರವರ್ತಿಗಳು ಅಂತರ್ಗೃಹಕ್ಕೆ ತೆರಳಿದರು. ಬಂಕರಸರು ನಿಟ್ಟುಸಿರಿಟ್ಟು ಒಂಟಿಯಾಗಿ ಬಿಡಾರಕ್ಕೆ ಹಿಂದಿರುಗಿದರು.

ಚಕ್ರವರ್ತಿಗಳು ರಾಜಕುಮಾರರ ಬಗ್ಗೆ ಮಾಡಿದ ಆಜ್ಞೆಯನ್ನು ಕೇಳಿ, ಅವರ ಹೃದಯ ಭಯದಿಂದ ಹೊಯ್ದಾಡುತ್ತಿತ್ತು. ಆ ಹೊತ್ತಿನಲ್ಲಿ ಏನು ಮಾಡುವುದೆಂದು ಅರಿಯದೆ, ಗುಣಭದ್ರಾಚಾರ್ಯರನ್ನು ಕಂಡು ನಡೆದುದನ್ನು ತಿಳಿಸಿದರು.

'ಕ್ರೋಧದಲ್ಲಿ ಪ್ರಭುಗಳು ಇಷ್ಟು ಕಠೋರವಾಗಿ ವರ್ತಿಸುವರೆಂದು ನಾನು ನಂಬಿರಲಿಲ್ಲ' —ಬಂಕರಸರು ಹೇಳಿದರು.

'ಇದು ಕ್ರೋಧದ ಕಾಠಿಣ್ಯವಲ್ಲ, ಬಂಕರಸರೇ, ನ್ಯಾಯದ ನಿಷ್ಠುರತೆ. ಅವರ ಮನಸಿನಲ್ಲಾಗುತ್ತಿರುವ ಭಯಂಕರ ಯಾತನೆಯನ್ನು ಅವರ ಕಣ್ಣುಗಳಲ್ಲಿ ಕಾಣಲಿಲ್ಲವೇ ನೀವು?'

'ಕಂಡೆ ಆಚಾರ್ಯ. ಅದನ್ನು ಕಂಡೇ ಸ್ವಲ್ಪ ಆಸೆ ಅಂಕುರಿಸಿತ್ತು. ಈಗೇನು ಮಾಡುವುದು ಆಚಾರ್ಯ?'

'ನ್ಯಾಯ ತನ್ನ ದಾರಿಯಲ್ಲಿ ತಾನು ಹೋಗಲು ಬಿಡುವುದೊಂದೇ ದಾರಿ.'

'ನೀವೂ ಇಷ್ಟು ಕಠೋರವಾದಿರಾ ಆಚಾರ್ಯ? ಸಹಜ ಕೋಮಲ ಚಿತ್ತರಾದ ತಮ್ಮಿಂದಲೂ ಈ ಮಾತೇ?'

'ಇದು ಕೋಮಲತೆ, ಕಠೋರತೆಗಳ ಮಾತಲ್ಲ ಬಂಕರಸರೇ, ನ್ಯಾಯದ ಮಾರ್ಗದಲ್ಲಿ ಅಡ್ಡನಿಲ್ಲಲು ಯಾರಿಗೂ ಅಧಿಕಾರವಿಲ್ಲ.'

'ಇದೇ ನಿಷ್ಠುರತೆಯಲ್ಲೇ ಚಕ್ರವರ್ತಿಗಳು ಸಲ್ಲದ ಅಪ್ಪಣೆಮಾಡಿದರೆ....'

'ತೀರ್ಮಾನ ಹೀಗೇ ಆಗುವುದೆಂದು ಊಹಿಸಿ ಹೆದರುವುದೇಕೆ ಬಂಕರಸರೇ. ನ್ಯಾಯಪೀಠ ತೀರ್ಪು ಕೊಡುವವರೆಗೂ ತಾಳ್ಮೆಯಿಂದಿರಿ. ಭವಿಷ್ಯವನ್ನು ಕಾಣಲಾಗದವರು, ಅದನ್ನು ಕಾಣಲೆಂದು ಆತುರ ಪಡಬಾರದು.'

ಗುಣಭದ್ರಾಚಾರ್ಯರಾಡಿದ ಮಾತುಗಳನ್ನು ಕೇಳಿ, ಬಂಕರಸರ ಹೃದಯದಲ್ಲಿ ಮೂಡಿದ ನಿರಾಶೆ ಮತ್ತಷ್ಟು ಬಲಿಯಿತು. ಆ ನಿರಾಶೆಯಲ್ಲೇ ಅಲ್ಲಿಂದ ಹೊರಟರು—'ಸಮರದಲ್ಲಿ ಸೋಲಾಗಬಾರದಿತ್ತೇ' ಎಂದು ಬಯಸುತ್ತಾ.

ರಾಜಬೀದಿಗಳಲ್ಲಿ, ಚಕ್ರವರ್ತಿಗಳ ಅಂಗರಕ್ಷಕ ಪಡೆ ರಾಜಕುಮಾರರ ಕಾಲಿಗೆ ಬೇಡಿ ಹಾಕಿ, ಕಾರಾಗೃಹಕ್ಕೆ ನಡೆಸಿಕೊಂಡು ಹೋದುದನ್ನು ಕಂಡು ರಾಜಧಾನಿಯಲ್ಲಿ ಗದ್ದಲವೋ ಗದ್ದಲವಾಯಿತು. ನೋಡಿದ ಜನಕ್ಕೆ ಉಸಿರು ಬಿಗಿಹಿಡಿದಂತಾಯಿತು. ತಲೆ ತಗ್ಗಿಸಿ, ಯಾರತ್ತಲೂ ನೋಡದೆ, ಕೈ ಕಾಲುಗಳಿಗೆ ಹಾಕಿದ ಭಾರವಾದ ಶೃಂಖಲೆಗಳನ್ನು ಎಳೆಯುತ್ತಾ ಬರಿದಲೆ, ಬರಿಗಾಲಿನಿಂದ ಬೀದಿಯ ಧೂಳಿನಲ್ಲಿ ಹೆಜ್ಜೆ ಎಳೆ

ಯುವ ರಾಜಕುಮಾರನನ್ನು ಕಂಡು ಕಂಬನಿ ಮಿಡಿದವರು ಎಷ್ಟೋಜನ. ಬಿಚ್ಚುಗತ್ತಿಯುವರ ಪಹರೆ ಇಲ್ಲದಿದ್ದರೆ, ಕಾವಲುಗಾರರ ಮೇಲೆ ಬಿದ್ದು ರಾಜಕುಮಾರನನ್ನು ಬಿಡಿಸಲಿಕ್ಕೆ ಎಷ್ಟೋ ಜನರ ಮನಸ್ಸು ಧಾವಿಸಿತು. ಆದರೆ ಆ ಪಡೆಯ ಇದಿರು ಯಾರೂ ಏನೂ ಮಾಡುವಂತಿರಲಿಲ್ಲ. ಅಸಹಾಯರಾಗಿ ವಿಧಿಯನ್ನು ಶಪಿಸಿ ಸುಮ್ಮನಾದರು. ಬಿಡಾರಕ್ಕೆ ಹಿಂದಿರುಗುತ್ತಿದ್ದಹಾಗೇ ಪರಿವಾರದವರಿಂದ ಈ ಸುದ್ದಿಯನ್ನು ಕೇಳಿ ಬಂಕರಸರು ಪಾತಾಳಕ್ಕೆ ಇಳಿದುಹೋದರು. ಶೃಂಖಲೆಯನ್ನು ಹೊತ್ತು ದೇಸಿಗನಂತೆ ಹೋಗುವ ಪತಿಯನ್ನು ಕಣ್ಣಾರೆಕಂಡ ಚೇದಿಯ ರಾಜಕುಮಾರಿ, ಬರಿದಾದ ಬೀದಿಯನ್ನೇ, ಕಂಬನಿದುಂಬಿ ಕುರುಡಾದ ಕಣ್ಣುಗಳಿಂದ ನೋಡುತ್ತಾ, ಅಪಾರ ಯಾತನಾಮಯ ದುಃಖವೇ ಮೂರ್ತೀಭವಿಸಿ ಬಂದಂತೆ ನಿಂತಿದ್ದರು. ಅದನ್ನು ಕಂಡು ಬಂಕರಸರ ಎದೆಬಿರಿದು ಹೋಯಿತು. ಮಾತನಾಡಲಾಗದೆ, ಶಯ್ಯಾಗೃಹಕ್ಕೆ ತೆರಳಿ, ಹಾಸಿಗೆಯ ಮೇಲೆ ಹೊರಳಿ—

'ಪ್ರಭೋ....ಪ್ರಭೋ.... ಆದಿತೀರ್ಥಂಕರಾ ....ವೃಷಭದೇವ ಭಗವಾನ್....ಆ ಹೆಣ್ಣುಬಾಳನ್ನು ದುಃಖದ ಸಿಡಿಲಿನಿಂದ ಜಡಿಯಬೇಡ ತಂದೇ ....ಕರುಣಿಸು....' ಎಂದು ಎಳೆಯ ಮಗುವಿನಂತೆ ಕಂಬನಿಗರೆದು ಬೇಡಿದರು.

ಅಷ್ಟೇ ಯಾತನೆ ಖಾಜಿ ಸೈಯದ್ ಇಮಾಂರಿಗೂ ಆಗಿತ್ತು. ಚಕ್ರವರ್ತಿಗಳ ಆಜ್ಞೆಯಂತೆ ಆ ರೀತಿ ಮಾಡಲಾಯಿತೆಂದು ಕೇಳಿ ಚಕ್ರವರ್ತಿಗಳನ್ನೇ ಕಾಣಲು ಅರಮನೆಗೆ ಓಡಿದರು. ಆದರೆ ಚಕ್ರವರ್ತಿಗಳು ಅಂದು ಯಾರಿಗೂ ಭೇಟಿ ನೀಡುವುದಿಲ್ಲವೆಂದರಿತು ನಿರಾಶರಾಗಿ ಹಿಂದಿರುಗಿ—

'ಖುದಾ....ಪರವರ್ದಿಗಾರ್.... ನಿನ್ನ ಕರುಣೆ ಭೂಮಿಗಿಳಿಯಲು ಇಂದು ಸಮಯ. ಖುದಾ....ರಾಜಕುಮಾರರನ್ನು ರಕ್ಷಿಸು.'

ಎನ್ನುತ್ತಾ ಅಂಗಲಾಚಿ ಬೇಡಿದರು.

ಅವರಂತೆಯೇ ಅಂತಃಪುರದಲ್ಲಿ ಒಂಟಿಯಾಗಿ ಕುಳಿತ ಚಕ್ರವರ್ತಿಗಳೂ ಭಗವಂತನನ್ನು ಪ್ರಾರ್ಥಿಸುತ್ತಿದ್ದರು—

'ಭಗವಾನ್, ದಾರಿ ತೋರು. ಸತ್ಯದ ಸೂರ್ಯನನ್ನು ಮುಸು ಗಿರುವ ಮಮಕಾರದ ಹೊನ್ನತಳಿಗೆಯನ್ನು ಸರಿಸಿ, ಕರ್ತವ್ಯದ ಪಥ ಬೆಳಗುವಂತೆ ಮಾಡು ದೇವಾ....ನ್ಯಾಯದ ಅಗ್ನಿ ಕವಚವನ್ನು ಧರಿಸಲು ನನ್ನೆದೆಗೆ ಬಲಕೊಡು...ತಂದೆಯೆಂಬುದನ್ನು ಮರೆತು ಚಕ್ರವರ್ತಿಯಂತೆ ನಡೆವ ಶಕ್ತಿಯನ್ನು ದಾನಮಾಡು ... ಲಕ್ಷ್ಮೀ....ಲಕ್ಷ್ಮೀ... ನಿನ್ನ ಈ ನಿರ್ಭಾಗ್ಯ ಪತಿಯನ್ನು ಕ್ಷಮಿಸು....'

ಹೃದಯ ಆ ಪ್ರಾರ್ಥನೆಯನ್ನು ಮಾಡುವಾಗ, ಅಗ್ನಿಯಮೇಲೆ ಕುಳಿತಂತೆ ಚಡಪಡಿಸುತ್ತಿದ್ದರು ಚಕ್ರವರ್ತಿಗಳು. ಅವರ ಕಣ್ಣುಗಳಿಂದ ಅಶ್ರುಧಾರೆ ಧಾರಾಕಾರವಾಗಿ ಸುರಿಯುತ್ತಿತ್ತು.

× × × ×

ಮರುದಿನವೇ ಧರ್ಮಾಗಾರದಲ್ಲಿ ರಾಜಕುಮಾರನ ವಿಚಾರಣೆ. ಜನ ಕಿಕ್ಕಿರಿದು ನೆರೆಯಿತು. ಗುಣಭದ್ರಾಚಾರ್ಯರು, ಖಾಜಿ ಸಯ್ಯದ್ ಇಮಾಂ, ಗೋಲಯಭಟ್ಟರು, ನಗರಶ್ರೇಷ್ಠಿಗಳು, ಪ್ರಧಾನಾಮಾತ್ಯರು—ಪಂಚಾಗ್ನಿಗಳ ಪ್ರತಿನಿಧಿಗಳಂತೆ ಧರ್ಮಾವತಾರರ ಸ್ಥಾನದಲ್ಲಿ ಕುಳಿತಿದ್ದರು.

ಧರ್ಮಾಗಾರ ಎಷ್ಟು ವಿಶಾಲವೋ, ಅಷ್ಟೇ ಸರಳ: ನೂರಾರು ಜನ ಕುಳಿತರೂ, ಧರ್ಮಪೀಠದ ಇದಿರು ನಿಂದ ಅಪರಾಧಿಗೆ ತಾನು ಒಂಟಿಯಾಗೇ ನಿಂತಿದೇನೆಯೋ ಎನಿಸುವಷ್ಟು ವಿಶಾಲ; ನ್ಯಾಯದ ನಿಷ್ಪಕ್ಷಪಾತ, ನಿಷ್ಠುರತೆಯನ್ನು ಕಡೆದಿಟ್ಟಷ್ಟು, ಅಲ್ಲಿಯ ಸ್ತಂಭ, ಭಿತ್ತಿ, ಚಾವಣಿಗಳು ಸರಳ. ಮಂದಿರದಲ್ಲಿ ಶಸ್ತ್ರಧರಿಸಿನಿಂತ ಭಟರ ಅಸ್ತ್ರಗಳು, ಮಂದಿರವನ್ನು ಕವಿದ ತಂಪು–ಆರೆಗತ್ತಲಿನಲ್ಲಿ ಕರ್ಕಶವಾಗಿ ಹೊಳೆದು, ಉಸಿರಿಗೂ ಭಯದ ಲಗಾಮು ಬಿಗಿದು, ಮೌನವನ್ನು ಕವಿಸಿದೆ. ಆ ಎತ್ತರವಾದ ಮಂದಿರದಲ್ಲಿ, ಅಲ್ಲಿ ಕವಿದ ಮೌನದಲ್ಲಿ ಆಡಿದ ಮಾತೂ ಮಾರ್ದನಿಸಿ, ಗಭೀರತೆಗೆ ಗರಿಗಟ್ಟುತ್ತದೆ.

ಮಂದಿರದ ಮಧ್ಯದಲ್ಲಿ ಉನ್ನತವಾದ ಧರ್ಮಪೀಠ. ಪೀಠದ ಜ್ವಾಲಾಕಾರವಾದ ಬೆನ್ನು ತುದಿಯಮೇಲೆ, ಗರುಡಲಾಂಛನ ಗರಿಗೆದರಿ, ಧರ್ಮಪೀಠಕ್ಕೆ ಸಾಮ್ರಾಜ್ಯದ ರಕ್ಷಣೆ ಇರುವುದನ್ನು ಸೂಚಿಸುತ್ತಿದೆ.

ಧರ್ಮಾಗಾರದ ನಡುವೆ, ಧರ್ಮಸಾಕ್ಷಿಯಾಗಿ ಹೊತ್ತಿಸಿದ ಅಗ್ನಿಕುಂಡದಲ್ಲಿ ಅಜ್ಯಾಹುತಿಯಿಂದ ತೃಪ್ತನಾಗಿ, ಬಣ್ಣಬಣ್ಣದ ನಾಲಗೆಗಳನ್ನು ಚಾಚಿ, ಅಗ್ನಿದೇವ ಉಜ್ವಲವಾಗಿ ಉರಿಯುತ್ತಿದಾನೆ.

ಧರ್ಮಾವತಾರರ ಇದಿರುಬದಿಯಲ್ಲಿ, ಬಿಚ್ಚುಗತ್ತಿಯವರ ಕಾವಲಿನ ನಡುವೆ ಅಪರಾಧಿಯಾಗಿ ರಾಜಕುಮಾರ ನಿಂತಿದ್ದ—

ಉಸಿರ ಸದ್ದು ಕೇಳುವಷ್ಟು ನಿಶ್ಯಬ್ದವಾಗಿತ್ತು ಸಭೆ.

ಕೊಂಚ ಹೊತ್ತಿನಲ್ಲೇ ಅತಿ ಸರಳವಾದ ಮಡಿಯುಡುಪು ಧರಿಸಿದ ಚಕ್ರವರ್ತಿಗಳು ಉಚಿತ ಪರಿವಾರದೊಂದಿಗೆ ಪ್ರವೇಶಿಸಿ, ಸಭೆಗೆ ವಂದಿಸಿ, ಎಂದಿನಂತೆ ನೇರವಾಗಿ ಧರ್ಮಪೀಠದಮೇಲೆ ಕೂಡದೆ, ಅದರ ಬಳಿ ನಿಂತು ನುಡಿದರು—

'ಇಂದಿನ ವಿಚಾರಣೆ ಎಂದಿನಂತಹುದಲ್ಲ. ವಿಶೇಷ ರೀತಿಯದು. ಎಂತಲೇ ನಾವು ಧರ್ಮಪೀಠವನ್ನೇರುವ ಮೊದಲು, ಧರ್ಮಾವತಾರರಲ್ಲಿ ಹೇಳಬೇಕಾದ ಮಾತೊಂದಿದೆ.'

'ಅಪ್ಪಣೆಕೊಡಿಸಬೇಕು'—ಎಂದರು, ಧರ್ಮಾವತಾರರ ಮುಖ್ಯಸ್ಥರಾಗಿ, ಧರ್ಮಾಮಾತ್ಯ ಸ್ಥಾನದಲ್ಲಿ ಕುಳಿತ ಗುಣಭದ್ರಾಚಾರ್ಯರು.

'ಸಾಧಾರಣವಾಗಿ ಧರ್ಮಪೀಠದಮೇಲೆ ಕುಳಿತು ತೀರ್ಪುಕೊಡುವ ಅಧಿಕಾರ ನಮಗೆ ಕೊಡಲ್ಪಟ್ಟಿದೆ. ಆದರೆ ಇಂದು ಅಪರಾಧಿಗಳಾಗಿ ನಿಂತಿರುವವರು, ರಾಜಕುಮಾರರು. ತೀರ್ಪು ಕೊಡಬೇಕಾದವರು ಅವರ ತಂದೆಗಳೂ ಆಗಿದ್ದಾರೆ. ರಾಜಕುಮಾರರ ಮೇಲೆ ಹೊರಿಸಲ್ಪಟ್ಟಿರುವ ಆಪಾದನೆ—ಭಯಂಕರವಾದ ರಾಜದ್ರೋಹ. ಆದುದರಿಂದ ನಮ್ಮಿಂದ ನ್ಯಾಯ ಪರಿಪಾಲನೆಯಾಗದಿರಬಹುದೆಂಬ ಸಂಶಯ ಕೆಲವರಿಗಾದರೂ ಬರುವುದು ಸಹಜವಾಗಿದೆ. ಆದುದರಿಂದ ಈ ಸಭೆ, ತನಗೆ ಯಾರಲ್ಲಿ, ಯಾರ ನಿಷ್ಪಕ್ಷಪಾತಬುದ್ಧಿಯಲ್ಲಿ ನಂಬಿಕೆಯಿದೆಯೋ ಅಂಥವರನ್ನು ಈ ಪೀಠಕ್ಕೆ ಆರಿಸುವುದು ಉಚಿತವಾದುದು. ನಮಗೂ ಅದು ಮಾನ್ಯವಾಗುತ್ತದೆ. ಆದುದರಿಂದ ಧರ್ಮಾವತಾರರು, ಸಭೆ ತಮ್ಮ ಅಭಿಪ್ರಾಯವನ್ನು ತಿಳಿಸಬೇಕು' ಎಂದರು ಚಕ್ರವರ್ತಿಗಳು.

'ಚಕ್ರವರ್ತಿಗಳ ನಿಷ್ಪಕ್ಷಪಾತ ಬುದ್ಧಿಯಲ್ಲಿ ನಮಗೆ ನಂಬಿಕೆಯಿದೆ.

ಸಭೆಯ ಪರವಾಗಿ, ಧರ್ಮಾವತಾರರ ಪರವಾಗಿ ನಾನು ಹೇಳುತ್ತೇನೆ—ಎಂದಿನಂತೇ ಪ್ರಭುಗಳು ನ್ಯಾಯಪೀಠವನ್ನಲಂಕರಿಸಬಹುದು.' ಎಂದು ಗುಣಭದ್ರಾಚಾರ್ಯರು ಹೇಳಿದರು. ಸಭೆಯೂ ಮೌನದಿಂದ ತನ್ನ ಸಮ್ಮತಿಯನ್ನು ಸೂಚಿಸಿತು.

'ಸಭೆಗೆ ನಾವು ಈ ವಿಶ್ವಾಸಕ್ಕಾಗಿ ಕೃತಜ್ಞರಾಗಿದೇವೆ' ಎಂದು ಚಕ್ರವರ್ತಿಗಳು, ರಾಜಕುಮಾರರತ್ತ ತಿರುಗಿ 'ಅಪರಾಧಿಗಳಿಗೂ ಈ ವಿಷಯದಲ್ಲಿ ಅಭಿಮತ ವ್ಯಕ್ತಪಡಿಸುವ ಅಧಿಕಾರವಿದೆ. ಹೇಳಬೇಕು—ಸಭೆಯ ಮಾತು ಅವರಿಗೂ ಮಾನ್ಯವೇ?'

ರಾಜಕುಮಾರ ತಂದೆಯತ್ತ ನೋಡದೆ ಹೇಳಿದ—

'ಚಕ್ರವರ್ತಿಗಳ ನ್ಯಾಯದೃಷ್ಟಿಯಲ್ಲಿ ನನಗೂ ನಂಬಿಕೆಯಿದೆ.

ಆ ಮಾತನ್ನು ಕೇಳಿ ಚಕ್ರವರ್ತಿಗಳು, ಸಭೆಗೆ, ಧರ್ಮಾವತಾರರಿಗೆ, ಅಗ್ನಿಗೆ, ಧರ್ಮಪೀಠಕ್ಕೆ ವಂದಿಸಿ, ಧರ್ಮಪೀಠವನ್ನು ಹತ್ತಿಕುಳಿತರು. ಒಂದುಗಳಿಗೆ ಅವರ ಮೈ ಕಂಪಿಸಿ ಸ್ಥಿರವಾಯಿತು.

ಅವರ ಅಪ್ಪಣೆಯಂತೆ ಅಧಿಕಾರಿಗಳು ರಾಜಕುಮಾರನ ಮೇಲೆ ಹೊರಿಸಲ್ಪಟ್ಟ ಆಪಾದನೆಯನ್ನು ಸಭೆಗೆ ಹೇಳಿದರು.

'ಈ ಆಪಾದನೆಯ ವಿಷಯದಲ್ಲಿ ಅಪರಾಧಿ ಹೇಳುವುದೇನಾದರೂ ಇದೆಯೆ?'—ಚಕ್ರವರ್ತಿಗಳು ಕೇಳಿದರು.

'ಇಲ್ಲ.'—ರಾಜಕುಮಾರ ಉತ್ತರಕೊಟ್ಟ.

'ಈ ಆಪಾದನೆಗಳೆಲ್ಲವೂ ನಿಜವೆಂದು ಅಪರಾಧಿ ಒಪ್ಪುತ್ತಾನೆಯೋ?'

'ಆಪಾದನೆಗಳೆಲ್ಲವೂ ನಿಜ.'

'ತನ್ನ ಪರವಾಗಿ ಅಪರಾಧಿ ಏನಾದರೂ ಹೇಳುವುದಿದ್ದರೆ ಹೇಳಬಹುದು.'

'ಹೇಳುವುದು ಏನೂ ಇಲ್ಲ. ಧರ್ಮಪೀಠ ತೀರ್ಪುಕೊಡಬಹುದು.'

'ತುಂಬ ಸಂತೋಷ. ಅಧಿಕಾರಿಗಳು ಹೇಳಿದುದನ್ನು, ಅಪರಾಧಿ ಹೇಳಿದುದನ್ನು—ಎರಡನ್ನೂ ಸಭೆ ಕೇಳಿದೆ. ಅಪರಾಧಿಯ ಮೇಲೆ ರಾಜದ್ರೋಹದ, ರಾಜ್ಯದ ವಿರುದ್ಧ ಬಂಡಾಯ ಹೂಡಿದ ಅಪರಾಧಗಳು

ಹೇರಲ್ಪಟ್ಟಿವೆ. ಎರಡೂ ಬಹು ಗುರುತರವಾದ ಅಪರಾಧದ ಆಪಾದನೆಗಳು. ಅಪರಾಧಿ ಆ ಆಪಾದನೆಗಳು ನಿಜವೆಂದು ಒಪ್ಪಿಕೊಂಡಿದ್ದಾನೆ. ಈಗ ಉಳಿದಿರುವುದು ನಾವು ತೀರ್ಪುಕೊಡುವುದೊಂದೇ. ಈ ಅಪರಾಧಗಳಿಗೆ ಧರ್ಮಶಾಸ್ತ್ರಗಳ ರೀತಿಯಾಗಿ ವಿಧಿಸಲ್ಪಟ್ಟಿರುವ ಶಿಕ್ಷೆ—ಮರಣ ದಂಡನೆ. ಅಲ್ಲವೇ ಧರ್ಮಾವತಾರರೇ?'

' ಅಹುದು ಪ್ರಭು.'

' ಆದರೂ ಕೆಲವು ಸಂದರ್ಭಗಳಲ್ಲಿ ಕರುಣೆ ತೋರುವ ಅಧಿಕಾರವೂ ಈ ಪೀಠಕ್ಕೆ ಕೊಡಲ್ಪಟ್ಟಿದೆ. ಅಹುದೇ?'

' ಅಹುದು ಪ್ರಭು.'

' ದಯೆ ಧರ್ಮದ ಮೂಲ, ಕರುಣೆ ನ್ಯಾಯಪೀಠದ ಅಸ್ತಿಭಾರ. ಆದುದರಿಂದ ಒಮ್ಮೊಮ್ಮೆ ಗುರುತರವಾದ ಅಪರಾಧಗಳು ನಡೆದಸಂದರ್ಭದಲ್ಲೂ ಕರುಣೆ ತೋರುವುದು ಅಧರ್ಮವಾಗಲಾರದು. ಆದುದರಿಂದ, ಈ ಸಂಧರ್ಭದಲ್ಲೂ ಅಪರಾಧಿ ಕರುಣೆಯನ್ನು ನಿರೀಕ್ಷಿಸಿರಬಹುದು, ಸಭೆಯೂ ಅದನ್ನೇ ಬಯಸುತ್ತಿರಬಹುದು. ಇಂದು ತಮ್ಮೆದುರು ನಿಂತಿರುವ ಅಪರಾಧಿ ಸಾಮಾನ್ಯ ಪ್ರಜೆಯಲ್ಲ, ವಿದೇಶೀಯನಲ್ಲ, ರಾಜ್ಯದ ಶತ್ರುವಲ್ಲ—ರಾಜಕುಮಾರ; ಚಕ್ರವರ್ತಿಗಳ ಔರಸಪುತ್ರರು; ಮುಂದೆ ಈ ರಾಜ್ಯಕ್ಕೆ ಅಧಿಕಾರಿಗಳಾಗಬೇಕಾಗಿದ್ದವರು. ಅವರಮೇಲೆ ಹೊರಿಸಲ್ಪಟ್ಟಿರುವ ಆಪಾದನೆ, ಈ ಸಿಂಹಾಸನದ ವಿರುದ್ಧ ಬಂಡಾಯ ಹೂಡಿದ್ದು. ರಾಜಕುಮಾರರು, ತಾವು ಯಾರನ್ನು ಕಾಪಾಡಬೇಕಾಗಿತ್ತೋ ಅವರ ಮೇಲೆ ಕತ್ತಿ ಎತ್ತಿದ್ದಾರೆ; ಎಲ್ಲಿ ನಿಷ್ಠೆಯಿಂದಿರಬೇಕಾಗಿತ್ತೋ ಅಲ್ಲಿ ದ್ರೋಹ ಬಗೆದಿದ್ದಾರೆ; ಅಕಾರಣವಾಗಿ, ಈ ರಾಜ್ಯದ ನಿಷ್ಠ ಪ್ರಜೆಗಳ ಜೀವ ಹಾನಿಗೆ, ರಕ್ತಪಾತಕ್ಕೆ ಕಾರಣರಾಗಿದ್ದಾರೆ; ತಮ್ಮ ದ್ರೋಹದಿಂದ ಈ ರಾಜ್ಯಕ್ಕೆ ಚಿರಸ್ಥಾಯಿಯಾದ ಕಲಂಕವನ್ನು ತಂದಿದ್ದಾರೆ. ಎಂತಲೇ ಇವರು ಮಾಡಿದ ಗುರುತರವಾದ ಅಪರಾಧ ಮತ್ತಷ್ಟು ಗುರುತರವಾಗಿದೆ. ಕರುಣೆಗಿರುವ ಅವಕಾಶವನ್ನೂ ಕಳೆದುಕೊಂಡಿದ್ದಾರೆ—ತಮ್ಮ ಕರಾಳ ಕೃತ್ಯದಿಂದ. ಒಬ್ಬ ಪ್ರಜೆಯನ್ನು ಕೊಂದವನಿಗೂ ನ್ಯಾಯಪೀಠ ಮರಣ ದಂಡನೆ ವಿಧಿಸುತ್ತದೆ. ರಾಜಕುಮಾರರು, ಒಬ್ಬರಲ್ಲ ಹಲವಾರು ಮಂದಿ,

ನೂರಾರು ಜನ ನಿರಪರಾಧಿಗಳ ಕೊಲೆಗೆ ಕಾರಣವಾಗಿದಾರೆ. ಇದೆಲ್ಲವನ್ನೂ ದೃಷ್ಟಿಯಲ್ಲಿಟ್ಟುಕೊಂಡು, ಧರ್ಮದೇವತೆಯು ಸಾಕ್ಷಿಯಾಗಿ, ಅಗ್ನಿ ಸಾಕ್ಷಿಯಾಗಿ, ಧರ್ಮಾವತಾರರ ಸಾಕ್ಷಿಯಾಗಿ ತೀರ್ಪು ಕೊಡುತ್ತೇವೆ–ಈ ಅಪರಾಧಕ್ಕೆ ಶಿಕ್ಷೆ, ಚಿತ್ರಹಿಂಸೆಯಿಂದೊಡಗೂಡಿದ ಮರಣ. ಅಪರಾಧಿ ತನ್ನ ಹೇಯ ಕೃತ್ಯಕ್ಕೆ ಪಶ್ಚಾತ್ತಾಪಪಡುತ್ತಿದ್ದಾನೆಂದು ನಮಗೆ ತಿಳಿದು ಬಂದಿದೆ. ಅಪಾದನೆಯನ್ನು ಧಿಕ್ಕರಿಸದೆ ನ್ಯಾಯಕ್ಕೆ ತಲೆಬಾಗಿದಾನೆ. ಆದರೆ ಇದಾವುದೂ ಈ ಪಾಪಕ್ಕೆ ಪ್ರಾಯಶ್ಚಿತ್ತವಾಗಲಾರದು. ಆದರೂ ಅದಕ್ಕಾಗಿ ಚಿತ್ರಹಿಂಸೆಯನ್ನು ತಪ್ಪಿಸಿದೇವೆ. ನ್ಯಾಯಪೀಠ ಹೇಳುತ್ತದೆ–ಅಪರಾಧಿಗೆ ಮರಣದಂಡನೆಯಾಗಲಿ. ಧರ್ಮ ಗೆಲ್ಲಲಿ.'

ಸಿಡಿಲಿನಂತೆ ಅಪ್ಪಳಿಸಿತು ಚಕ್ರವರ್ತಿಗಳಿತ್ತ ತೀರ್ಪು ಸಭೆಯನ್ನು. ಗರಬಡಿದಂತೆ ಸ್ತಬ್ಧವಾಯಿತು ಸಭೆ ಆ ತೀರ್ಪನ್ನು ಕೇಳಿ.

'ನ್ಯಾಯಪೀಠದ ತೀರ್ಪಿನ ಬಗ್ಗೆ ಧರ್ಮಾವತಾರರಾಗಲಿ, ಸಭೆಯಾಗಲಿ, ಅಪರಾಧಿಯಾಗಲಿ ಏನಾದರೂ ಹೇಳುವುದಿದೆಯೆ?'

ಚಕ್ರವರ್ತಿಗಳು ಕೇಳಿದ ಪ್ರಶ್ನೆಗೆ ಉತ್ತರಕೊಡುವಷ್ಟು ಶಕ್ತಿಯೂ ಯಾರಲ್ಲಿಯೂ ಉಳಿದಿರಲಿಲ್ಲ. ಎಲ್ಲರ ಉಸಿರೂ ಸಿಕ್ಕಿಕೊಂಡಂತ್ತಿತ್ತು. ಒಬ್ಬೊಬ್ಬರ ಎದೆಬಡಿತವೂ ಮತ್ತೊಬ್ಬರಿಗೆ ಕೇಳುವಷ್ಟು ಸದ್ದಡಗಿದ ಸಭೆಯಲ್ಲಿ, ಕವಿದ ಭೀಕರ ಮೌನವನ್ನು ಮುರಿದು, ಮರಣದಂಡನೆಗೆ ಗುರಿಯಾದ ರಾಜಕುಮಾರನೇ ಮಾತನಾಡಿದ. ಆತನ ಧ್ವನಿ ಮರಣ ದಂಡನೆಯನ್ನು ಕೇಳಿ ಗಾಬರಿಯಾದಂತಿರಲಿಲ್ಲ, ಸ್ಥಿರವಾಗಿತ್ತು. ರುದ್ರ ಶಾಂತಿಯಿತ್ತು ಆತನ ಮುಖದಲ್ಲಿ.

'ನ್ಯಾಯಪೀಠಕ್ಕೆ ವಂದನೆ, ಧರ್ಮಾವತಾರರಿಗೆ ವಂದನೆ, ಸಭೆಗೆ ನನ್ನ ವಂದನಾರ್ಪಣೆ. ನ್ಯಾಯಪೀಠದ ತೀರ್ಪಿನ ವಿಷಯದಲ್ಲಿ ಅಪರಾಧಿಯಾದ ನಾನು ಏನಾದರೂ ಹೇಳುವುದಿದ್ದರೆ ಹೇಳಬಹುದೆಂದು ಅಪ್ಪಣೆಯಾಗಿದೆ. ನಾನು ಹೆಚ್ಚಾಗಿ ಹೇಳಬೇಕಾದುದೇನೂ ಇಲ್ಲ. ತೀರ್ಪನ್ನು ಕೇಳಿ ಸಭೆ ಕೊಂಚ ಕಳವಳಗೊಂಡಂತಿದೆ. ಆದರೆ ಅದಕ್ಕೆ ಕಾರಣವಿಲ್ಲ. ತೀರ್ಪು ನ್ಯಾಯಬದ್ಧವಾಗಿದೆ. ಹೃತ್ಪೂರ್ವಕವಾಗಿ ಹೇಳುತ್ತೇನೆ: ಈ ತೀರ್ಪು ನನ್ನಮೇಲೆ ಮಹದಾನುಗ್ರಹ! ರಾಜಪುತ್ರನಾಗಿ ನಾನು ಪ್ರಜೆ

ಗಳಿಗೆ ಎರಡು ಬಗೆದೆ; ಸಿಂಹಾಸನದಮೇಲಿನ ಆಸೆಯಿಂದ ಅದಕ್ಕೆ ದ್ರೋಹ ಬಗೆಯಲೆತ್ನಿಸಿದೆ. ಚಕ್ರವರ್ತಿಗಳ ಮಾತು ನಿಜ. ನನ್ನ ರಾಜ್ಯಾಕಾಂಕ್ಷೆಯ ರಾಕ್ಷಸೀತೃಷೆಗಾಗಿ ನೂರಾರು ಜನರ ವಿನಾಕಾರಣ ರಕ್ತಪಾತವಾಯಿತು. ಅದಕ್ಕೆ ಚಕ್ರವರ್ತಿಗಳು ನನಗೆ ಸರಿಯಾದ ಶಿಕ್ಷೆ ವಿಧಿಸಿದಾರೆ. ಇಂದಿನ ಪರಿಸ್ಥಿತಿಯಲ್ಲಿ ಸಾವು ನನಗೆ ಸ್ವಾಗತಾರ್ಹ. ಮರಣದಂಡವನ್ನು ವಿಧಿಸದಿದ್ದರೆ, ಬದುಕಿರಬೇಕೆಂಬ ಭಯಂಕರವಾದ ಶಿಕ್ಷೆಯನ್ನು ವಿಧಿಸಿದ್ದರೆ, ಪಾಪದ ಅರಿವಾದ ನಾನು ಮುಖವೆತ್ತಿ ತಿರುಗಾಡುವ ಬಾಳು ನರಕದುರಿಗಿಂತಲೂ ದುರ್ಭರವಾಗುತ್ತಿತ್ತು. ಇಂದು ಆ ಬೇಗೆ ತಪ್ಪಿದೆ. ಈ ಕರುಣೆಗಾಗಿ ನ್ಯಾಯಪೀಠಕ್ಕೆ ಋಣಿಯಾಗಿದೇನೆ. ಸಭೆಯಲ್ಲಿ ನನ್ನದೊಂದೇ ಪ್ರಾರ್ಥನೆ—ಕೆಟ್ಟಕನಸಿನಂತೆ ನನ್ನನ್ನು ಮರೆತುಬಿಡಿ. ರಾಷ್ಟ್ರಕೂಟ ರಾಜ್ಯಕ್ಕೆ ವಿಜಯವಾಗಲಿ, ರಾಷ್ಟ್ರಕೂಟ ರಾಜ್ಯ ಚಿರಾಯುವಾಗಲಿ!'

ರಾಜಕುಮಾರರ ಮಾತನ್ನು ಕೇಳಿ ಎಲ್ಲರ ಹೃದಯವೂ ಕರಗಿ, ಕಣ್ಣು ತೇವವಾಯಿತು. ಚಕ್ರವರ್ತಿಗಳ ಹೃದಯಕ್ಕೇ ಉರಿ ಹೊತ್ತಿಸಿದಂತಾಯಿತು. ಮರಣದಂಡನೆಯ ತೀರ್ಪನ್ನು ಕೇಳಿ ಬೆದರದೆ, ಅದನ್ನು ಅನುಗ್ರಹವೆಂದಪ್ಪಿದ ಮಗನನ್ನು ಆಲಂಗಿಸಿಕೊಳ್ಳಬೇಕೆನಿಸಿತು. ಸಾವಿನ ಇದಿರು ಸೋಲಲಿಲ್ಲ—ತಮ್ಮ ಮಗ! ತಮಗೆ ತಾವೇ ಹೇಳಿಕೊಂಡರು:

'ಲಕ್ಷ್ಮೀ, ನಿನ್ನ ಮಗ ನರಿಯಾಗಲಿಲ್ಲ. ಇದೊಂದಕ್ಕೆ ಹೆಮ್ಮೆಪಡು ಲಕ್ಷ್ಮೀ.'

ಇದ್ದಕ್ಕಿದ್ದಂತೆಯೇ ಸಭೆಯಲ್ಲಿ ಗಜಿಬಿಜಿಯಾಗಿ, ಕಿಕ್ಕಿರಿದ ಜನ ದಾರಿ ಬಿಟ್ಟು ಸರಿದರು. ಅವಗುಂಠನವತಿಯಾದ ಹೆಣ್ಣೊಬ್ಬಳು, ಚಲಿಸುವ ಶಿಲಾವಿಗ್ರಹದಂತೆ, ಧೀರ ಗಂಭೀರ ಗತಿಯಿಂದ ನಡೆದು ಬಂದು, ನ್ಯಾಯ ಪೀಠಕ್ಕೆ ನಮಸ್ಕರಿಸಿ—

'ರಾಜಸ್ತ್ರೀಯರು ಹೀಗೆ ಬಹಿರಂಗವಾಗಿ ಸಭೆಗೆ ಬರಬಾರದು. ಅದರೂ ಅನಿವಾರ್ಯವಾಗಿ ಬರಬೇಕಾಗಿ ಬಂದ ನನ್ನ ಅವಿನಯವನ್ನು ಮನ್ನಿಸಿ, ನನ್ನ ಮನವಿಯನ್ನು ಲಾಲಿಸಬೇಕು.' ಎಂದಳು.

ಚಕ್ರವರ್ತಿಗಳಿಗೆ ಆಕೆ ಯಾರೆಂದು ತಿಳಿಯದು. ಆದರೂ ಆಕೆಯ

ಧ್ವನಿಕೇಳಿ ಏಕೋ ಅವರ ಎದೆ ತುಂಬಿಬಂತು.

‘ ನೀನಾರು ತಾಯಿ, ನಿನಗೆ ನ್ಯಾಯಪೀಠದಿಂದ ಏನಾಗಬೇಕು?’ ಎಂದು ಕೇಳಿದರು.

‘ ಪ್ರಭು, ನಾನು ಚೇದಿಯ ರಾಜಕುಮಾರಿ. ಮರಣದಂಡನೆಗೆ ಗುರಿಯಾದ ಅಪರಾಧಿಗಳ ವಿವಾಹಿತ ಸ್ತ್ರೀ. ನ್ಯಾಯವನ್ನು ಬೇಡಿ ತಮ್ಮೆದಿರು ಬಂದಿದೇನೆ. ನ್ಯಾಯವನ್ನು ದಯಪಾಲಿಸಬೇಕು.’

ಆಕೆಯ ಮಾತನ್ನು ಕೇಳಿ ಚಕ್ರವರ್ತಿಗಳಿಗೆ ದಿಗ್ಭ್ರಮೆಯಾಯಿತು. ಇದುರಿಗೆ ನಿಂತಿರುವವಳು ಅಪರಿಚಿತ ಸ್ತ್ರೀಯಲ್ಲ: ತಮ್ಮ ಸೊಸೆ; ಮಗನ ಮಡದಿ. ಆದರೆ ಅವರಿಗೇ ಈ ವಿಚಾರ ತಿಳಿದಿರಲಿಲ್ಲ. ಇದು ನಿಜವೇ?

‘ ನೀನಾಡುತ್ತಿರುವ ಮಾತು ನಿಜವೇ ರಾಜಕುಮಾರಿ?’

‘ ನಾನು ಅಪರಾಧಿಯ ಪತ್ನಿ. ಆದರೂ ಸುಳ್ಳಾಡಿ ಅಭ್ಯಾಸವಿಲ್ಲ ಪ್ರಭು. ರಾಜಕುಮಾರರನ್ನೇ ಕೇಳಬಹುದು, ಬಂಕರಸರೂ ಬಲ್ಲರು.’

‘ ಆಕೆಯಾಡುತ್ತಿರುವ ಮಾತು ನಿಜ’– ಎಂದರು ನೆತ್ತಿಯಮೇಲೆ ಕೈಹೊತ್ತು ಕುಳಿತಿದ್ದ ಬಂಕರಸರು.

‘ ನಮಗೇಕೆ ಹೇಳಲಿಲ್ಲ?’

‘ ಹೇಳಬೇಕೆಂದಿದ್ದೆ. ಆದರೆ ಪ್ರಭುಗಳು ಯಾವಮಾತಿಗೂ ಅವಕಾಶ ಕೊಡಲಿಲ್ಲ.’

‘ ಆಯಿತು. ಈಗ ಅದನ್ನು ಯೋಚಿಸಿ ಫಲವಿಲ್ಲ. ನಿನ್ನದೇನು ಬೇಡಿಕೆ ತಾಯಿ?’

‘ ಪ್ರಭುಗಳು ಧರ್ಮಾವತಾರರು. ಅಪರಾಧಿಗೆ ನ್ಯಾಯವಾದ ದಂಡನೆಯನ್ನು ವಿಧಿಸಿರುವಿರಿ. ತಮ್ಮ ತೀರ್ಪಿಗೆ ಎದುರಾಡುವುದಿಲ್ಲ. ಆದರೂ ನಿರಪರಾಧಿಯಾದ ನನಗೆ ಭಯಂಕರ ಶಿಕ್ಷೆ ವಿಧಿಸಿದೀರ. ಅದರಿಂದ ಬಿಡುಗಡೆ ಮಾಡಿ. ಅಷ್ಟನ್ನು ಬೇಡಲೆಂದು ಬಂದೆ.’

‘ ನಿನಗೆ....ನಾವು....ಶಿಕ್ಷೆ....ಭಯಂಕರ ಶಿಕ್ಷೆ ವಿಧಿಸಿದ್ದೇವೆಯೇ?’– ದಿಗ್ಭ್ರಾಂತರಾಗಿ ಕೇಳಿದರು ಚಕ್ರವರ್ತಿಗಳು.

‘ ಅಹುದು ಪ್ರಭು. ವೈಧವ್ಯದ ಭಯಂಕರ ಶಿಕ್ಷೆಯನ್ನು ವಿಧಿಸಿದೀರಿ.’

' ಆದರೆ ಅಪರಾಧಿಗೆ ದಂಡನೆ ಮಾಡದಿರುವುದು ಸಾಧ್ಯವಿಲ್ಲ ರಾಜಕುಮಾರಿ.'

' ದಂಡನೆಮಾಡಬಾರದೆಂದು ಬೇಡುವುದೂ ಇಲ್ಲ. ನಾನು ಅವರ ಸಹಧರ್ಮಿಣಿ. ಅವರು ಬಂಡಾಯಗಾರರೆಂದು ಅರಿತೂ,ಅವರನ್ನು ವಿವಾಹವಾದುದರಿಂದ ಅವರ ಅಪರಾಧದಲ್ಲಿ ಅರ್ಧಪಾಲು ನನ್ನದು. ಆದುದರಿಂದ ನ್ಯಾಯಪೀಠದಲ್ಲಿ ನಾನು ಬೇಡುವುದಿಷ್ಟೆ: ಯಾವ ಅಪರಾಧಕ್ಕಾಗಿ ಅವರಿಗೆ ಮರಣದಂಡನೆ ವಿಧಿಸಿದಿರೋ ಅದೇ ಅಪರಾಧಕ್ಕಾಗೇ ನನಗೂ ಮರಣದಂಡನೆಯನ್ನು ವಿಧಿಸುವ ಕೃಪೆಮಾಡಬೇಕು. ಮಾತು ಅತಿಯಾಗಿ ಆಡಿದೆ. ಕ್ಷಮಿಸಿ. ವೈಧವ್ಯದ ಭೀತಿಯಿಂದ ಬಿಡುಗಡೆ ಮಾಡಿ, ಶಿಕ್ಷೆಯ ಅನುಗ್ರಹಮಾಡಿ.'

ರಾಜಕುಮಾರಿ, ಸಿಂಹಾಸನದ ಇದಿರು ಬಾಗಿ ಬೇಡಿದಳು. ಚಕ್ರವರ್ತಿಗಳು ಎರಡುಗಳಿಗೆ ಮಾತನಾಡದೆ ಆಕೆಯನ್ನು ನೋಡಿದರು. ಅಂಥ ಸತಿಯನ್ನು ಪಡೆದ ಮಗನ ಬಾಳು ಧನ್ಯ ಎನಿಸಿತು. ' ಲಕ್ಷ್ಮೀ, ನಿನಗೆ ತಕ್ಕ ಸೊಸೆ' ಎಂದು ಮೆಚ್ಚಿಕೊಂಡರು. ಆದರೂ ಆ ಮೆಚ್ಚುಗೆಯನ್ನು ಹೃದಯದಲ್ಲೇ ಹುದುಗಿಸಿ, ಮುನಿಸಿನ ವಿಕಾರವನ್ನು ಕೊಂಚವೂ ತೋರದೆ ಧ್ವನಿಯಲ್ಲಿ ಹೇಳಿದರು—

' ನೀನಾಡುವುದು ಕುಲಸ್ತ್ರೀಗೆ ಸಹಜವಾದ ಮಾತು ರಾಜಕುಮಾರಿ. ಧನ್ಯೆ ನೀನು. ಆದರೆ ಅಪರಾಧಿಯಾದ ಪತಿಗೆ ವಿಧಿಸಿದ ಶಿಕ್ಷೆಯನ್ನೇ ಸತಿಗೂ ವಿಧಿಸಬೇಕೆಂದು ಯಾವ ಶಾಸ್ತ್ರವೂ ಹೇಳಿಲ್ಲ. ನಿನ್ನ ಬೇಡಿಕೆಯನ್ನು ನಿರಾಕರಿಸಲು ವ್ಯಥೆಯಾಗುತ್ತದಾದರೂ, ಉಪಾಯವಿಲ್ಲ. ನಿನ್ನ ಬೇಡಿಕೆಯನ್ನು ನೆರವೇರಿಸಲು ಸಾಧ್ಯವಿಲ್ಲ. ಆದುದರಿಂದ ಕ್ಷಮಿಸು ತಾಯಿ—ಧರ್ಮಾವತಾರರಿಗೆ ನ್ಯಾಯಪೀಠದ ತೀರ್ಪು ಸಮ್ಮತವಾಗಿದ್ದರೆ, ಅಪರಾಧಿಯನ್ನು ಇಲ್ಲಿಂದ ಕರೆದೊಯ್ಯಬಹುದು. ನಾಳೆ ಪ್ರಾತಃಕಾಲ ಸೂರ್ಯೋದಯದ ಮೊದಲು ತೀರ್ಪು ಕಾರ್ಯಗತವಾಗಲಿ' ಎಂದರು.

ಚಕ್ರವರ್ತಿಗಳ ಮಾತು ಕೇಳಿದ ರಾಜಕುಮಾರಿ ಬುಡಕತ್ತರಿಸಿದ ಬಾಳೆಯಂತೆ ನೆಲಕ್ಕೆ ಉರುಳಿದಳು. ಅದನ್ನು ನೋಡಲಾರದೆ ರಾಜ

ಕುಮಾರ ತೋಳುಗಳಲ್ಲಿ ಮುಖ ಹುದುಗಿಸಿದ.

'ಪ್ರಭೂ, ರಾಜಕುಮಾರರನ್ನು ಕ್ಷಮಿಸಬೇಕು. ಅವರಿಗೆ ಬದಲು ನನ್ನ ಪ್ರಾಣ ಕೊಡಲು ಸಿದ್ಧವಾಗಿದೇನೆ' ಎಂದು ಪೀಠದಿಂದ ಸಿಡಿದೆದ್ದು ಹೇಳಿದರು ಬಂಕರಸರು. ಅವರ ಮಾತಿಗೆ ಕಾದಿದ್ದಂತೆ ಸಭೆಗೆ ಸಭೆಯೇ ಕೂಗಿತು: 'ಕ್ಷಮೆ....ಕ್ಷಮಾದಾನ ನೀಡಿ'....

'ಬಂಕರಸರು ಅಪರಾಧಿಗಾಗಿ ಪ್ರಾಣಕೊಡುತ್ತೇವೆ ಎನ್ನುತ್ತಾರೆ. ಅದರ ಔದಾರ್ಯ, ಕರುಣೆ ಅಭಿನಂದನೀಯವಾದುದು. ಆದರೆ ಒಬ್ಬರ ಅಪರಾಧಕ್ಕಾಗಿ ಮತ್ತೊಬ್ಬರಿಗೆ, ಶಿಕ್ಷೆವಿಧಿಸಿ ತೃಪ್ತವಾಗುವ ಅಧಿಕಾರ ನಮಗಿಲ್ಲ. ಹಾಗೆ ಮಾಡಿದಲ್ಲಿ ನ್ಯಾಯ ನೀತಿಯ ಅಸ್ತಿಭಾರವನ್ನು ಕಳೆದುಕೊಂಡ ಶುದ್ಧ ರಕ್ತದಾಹವಾಗುತ್ತದೆ. ಆದುದರಿಂದ ಬಂಕರಸರು ಮನ್ನಿಸಬೇಕು. ಪ್ರಜೆಗಳೂ ರಾಜಕುಮಾರನ ಮೇಲಿನ ಅಭಿಮಾನದಿಂದ ನ್ಯಾಯಕ್ಕೆ ಅಡ್ಡಬರಬಾರದೆಂದು ಬೇಡುತ್ತೇವೆ' ಎಂದರು ಚಕ್ರವರ್ತಿಗಳು, ತಮ್ಮೆದೆಯಲ್ಲಾಗುತ್ತಿದ್ದ ಭಯಂಕರ ಒಳತೋಟಿಯನ್ನು, ಧ್ವನಿಯಲ್ಲಿ ತೋರಗೊಡದೆ.

'ಸದ್ದು' ಎಂದು ಕಾವಲುಗಾರರು ಸಭೆಯಲ್ಲಿ ಕೂಗಿ ಸದ್ದಡಗಿಸಿದರು. ಸಭೆಯ ಗದ್ದಲ ಕೊಂಚ ಶಾಂತವಾದ ಮೇಲೆ ಅದುವರೆಗೂ ಸುಮ್ಮನೆ ಕುಳಿತಿದ್ದ ಗುಣಭದ್ರಾಚಾರ್ಯರು ಎದ್ದುನಿಂತು ಹೇಳಿದರು—

'ಚಕ್ರವರ್ತಿಗಳು ನ್ಯಾಯಪೀಠದಿಂದ ಕೊಟ್ಟ ತೀರ್ಪು ಧರ್ಮಸಮ್ಮತವಾಗಿದೆ. ಅದು ಸರಿ ಎಂದು ನಾವೂ ಅನುಮೋದಿಸುತ್ತೇವೆ. ಆದರೆ ಪ್ರಜಾಕೋಟಿ ರಾಜಕುಮಾರರಿಗೆ ಕ್ಷಮೆದೋರಬೇಕೆಂದು ಹೇಳುವುದಾದರೆ, ಚಕ್ರವರ್ತಿಗಳು ಪ್ರಜೆಗಳ ಆಜ್ಞೆಯನ್ನು ಮನ್ನಿಸಬೇಕು. ರಕ್ಷೆ-ಶಿಕ್ಷೆ ಎರಡರಲ್ಲೂ ಪ್ರಜೆಗಳದೇ ಪರಮಾಧಿಕಾರ. ಚಕ್ರವರ್ತಿಗಳು ಪ್ರಜೆಗಳ ಆಕಾಂಕ್ಷೆಯನ್ನು ಕಾರ್ಯರೂಪಕ್ಕೆ ತರುವ ಸಾಧನ ಮಾತ್ರ. ಆದುದರಿಂದ ರಾಜಕುಮಾರರಿಗೆ ಕ್ಷಮೆ ನೀಡಬೇಕೆಂಬುದೇ ಪ್ರಜೆಗಳ ಇಚ್ಛೆಯಾದರೆ, ಚಕ್ರವರ್ತಿಗಳು ಅದನ್ನು ನಡೆಸಬೇಕು.'

ಗುಣಭದ್ರಾಚಾರ್ಯರು ಹೇಳಿದುದನ್ನುಕೇಳಿ ಸಭೆ ಒಕ್ಕೊರಲಿನಲ್ಲಿ ಚೀರಿತು– 'ರಾಜಕುಮಾರರಿಗೆ ಕ್ಷಮಾದಾನ ನೀಡಿ.'

ಮತ್ತೆ ಗದ್ದಲವಡಗಿದಮೇಲೆ, ಚಕ್ರವರ್ತಿಗಳು ಎದ್ದು ನಿಂತು ಹೇಳಿದರು—

'ಆಚಾರ್ಯರು ಅಪ್ಪಣೆಕೊಡಿಸಿದಂತೆ ನಾವು ಪ್ರಜೆಗಳ ಇಚ್ಛೆಯನ್ನು ನೆತ್ತಿಯಮೇಲೆ ಹೊತ್ತು ನಡೆಸುವ ಕಾರ್ಯಭಾರಿಗಳು. ಕ್ಷಮಾದಾನವೇ ಅವರಿಚ್ಛೆಯಾದಲ್ಲಿ ಹಾಗಾಗಲಿ.'

ಚಕ್ರವರ್ತಿಗಳ ಮಾತನ್ನು ಕೇಳಿ ಸಭೆ ಜಯಧ್ವನಿ ಮಾಡಿ ತನ್ನ ಮೆಚ್ಚುಗೆಯನ್ನು ಸೂಚಿಸಿತು. ಚಕ್ರವರ್ತಿಗಳ ಅಪ್ಪಣೆಯಂತೆ ಕಾವಲವರು ರಾಜಕುಮಾರನನ್ನು ಬಂಧಿಸಿದ್ದ ಸಂಕಲೆಗಳನ್ನು ಬಿಚ್ಚಿದ ಬಳಿಕ ಚಕ್ರವರ್ತಿಗಳು ಹೇಳಿದರು—

'ಪ್ರಜೆಗಳ ಅಭಿಮಾನದಿಂದ ಇಂದು ರಾಜಪುತ್ರರಿಗೆ ಪುನರ್ಜನ್ಮವಾಗಿದೆ. ಅವರು ಈ ಪ್ರೇಮಕ್ಕೆ ಪಾತ್ರರಾಗುವಂತೆ ಬದುಕಲೆಂದು ಬಯಸುತ್ತೇನೆ. ಇಂದು ತಮಗೆ ಪುನರ್ಜನ್ಮವಿತ್ತ ಪ್ರಜೆಗಳ ಮಕ್ಕಳಂತೆ ರಾಜಕುಮಾರರು ಬದುಕಲಿ. ಪ್ರಜಾಕೋಟಿಯ ಪ್ರೇಮ ಸಾರ್ಥಕವಾಗಲಿ.'

ಬಂಧಮುಕ್ತನಾದ ರಾಜಕುಮಾರ ಸಭೆಗೆ ವಂದಿಸಿ—

'ಇಂದಿನಿಂದ ನಮ್ಮ ಬಾಳು ನಿಮ್ಮ ಸೇವೆಗೆ ಮೀಸಲು' ಎಂದ.

ಮತ್ತೊಮ್ಮೆ ಸಭೆ ಜಯಘೋಷ ಮಾಡಿತು. ಆ ಗದ್ದಲದಲ್ಲಿ ಮೂರ್ಛೆಯಿಂದ ತಿಳಿದೆದ್ದ ರಾಜಕುಮಾರಿ ಬಂಧಮುಕ್ತನಾದ ಪತಿಯನ್ನು ಕಂಡು, ಪೀಠದಿಂದಿಳಿದು ಬರುತ್ತಿದ್ದ ಚಕ್ರವರ್ತಿಗಳ ಪಾದಕ್ಕೆ ನಮಸ್ಕರಿಸಿದಳು. ರಾಜಕುಮಾರನೂ ತಂದೆಗೆ ನಮಸ್ಕರಿಸಿದ.

'ಅಪ್ಪಾಜಿ, ನೀವು ನನ್ನನ್ನು ಕ್ಷಮಿಸಿದ್ದೀರಾ?' ಎಂದು ಬೇಡಿದ ಕಂಬನಿಯಿಂದ ಅವರ ಕಾಲು ತೊಳೆದು.

'ಕೃಷ್ಣಾ....' ಎಂದು ಏನೋ ಹೇಳಹೋದರು ಚಕ್ರವರ್ತಿಗಳು. ಆದರೆ ಮಾತನಾಡಲಾಗದೆ ಅವರ ಗಂಟಲು ಬಿಗಿದು ಬಂದಿತು. ನಮಸ್ಕರಿಸಿದ ಸೊಸೆಯ ತೋಳು ಹಿಡಿದೆತ್ತಿ, ಮೃದುವಾಗಿ ಹೇಳಿದರು—

'ನಿನ್ನ ಮಾಂಗಲ್ಯ ಭಾಗ್ಯ ದೊಡ್ಡದು ತಾಯಿ. ನನ್ನ ಮಗನನ್ನು ಉಳಿಸಿಕೊಟ್ಟೆ. ಬಾ ಮಗೂ. ನಿನಗಾಗಿ ಅರಮನೆ ಕಾದಿದೆ.'

ಮಗ, ಸೊಸೆಯರ ನಡುವೆ ನಿಂತ ಚಕ್ರವರ್ತಿಗಳನ್ನು ಕಂಡು ಸಭೆ ಆನಂದದಲ್ಲಿ ಹುಚ್ಚಾಗಿ ಜಯಘೋಷ ಮಾಡಿತು—

' ಉಘೇ ಉಘೇ....ಅಮೋಘವರ್ಷ ಚಕ್ರವರ್ತಿ ಉಘೇ....ರಾಜ ಕುಮಾರ ಕೃಷ್ಣಪ್ರಭು ಉಘೇಉಘೇ....'

ಚಕ್ರವರ್ತಿಗಳ ಕಿವಿ ಆ ಜಯಧ್ವನಿಯನ್ನು ಮಧುವನ್ನು ಹೀರುವ ದುಂಬಿಯಂತೆ ಹೀರಿತು. ಆದರೆ ಕಂಬನಿದುಂಬಿ ಮಂಜಾದ ಕಣ್ಣಿಗಾವುದೂ ಕಾಣಲಿಲ್ಲ. ಮನಸು ಗತಿಸಿದ ಪತ್ನಿಯನ್ನು ನೆನಸುತ್ತಿತ್ತು.

## ೨೧

ನೃಪತುಂಗ ಚಕ್ರವರ್ತಿಗಳ ಬಾಳು ಇಂದು ಪಕ್ಷಿಕೂಜನದಿಂದ ಪುಲಕಿತವಾದ, ಸುವರ್ಣಾರುಣಕಾಂತಿಯಿಂದ ಉಜ್ವಲವಾದ, ಪುಷ್ಪಪರಿಮಳದಿಂದ ಕೂಡಿದ, ತಂಗಾಳಿಯ ಸುಳಿತದಿಂದ ಹಿತವಾದ ಪ್ರಭಾತ ಸಮಯದಂತೆ ಶಾಂತ ಸುಂದರವಾಗಿದೆ. ಯುವರಾಜ ಪದವಿಯನ್ನು ಅಲಂಕರಿಸಿದ ರಾಜಕುಮಾರ ಕೃಷ್ಣನಿಂದು ಹಿಂದಿನ ಕೃಷ್ಣನಲ್ಲ. ಚಕ್ರವರ್ತಿಗಳಿಗೇ ಅಚ್ಚರಿಯಾಗುವಷ್ಟು ಪರಿವರ್ತಿತವಾಗಿದೆ ಆತನ ಬಾಳು. ರಾಜ್ಯಾಡಳಿತದ ಬಹುಭಾಗದ ಹೊಣೆಯನ್ನೀಗ ಆತ ತನ್ನ ಹೆಗಲಮೇಲೆ ಧರಿಸಿದುದರಿಂದ, ಆಡಳಿತ ಚಿಂತೆ ಕಡಮೆಯಾಗಿ, ಚಕ್ರವರ್ತಿಗಳು ತಮ್ಮ ಕಾಲವನ್ನು ತಮಗೆ ಬಹು ಪ್ರಿಯವಾದ ಧರ್ಮಚಿಂತನೆ, ಸಾಹಿತ್ಯ ಚಿಂತನೆಗಳಲ್ಲಿ ವಿನಿಯೋಗಿಸಲು ಅವಕಾಶವಾಗಿದೆ. ಮೃತರಾದ ಮಹಾರಾಣಿಯವರೇ ಪತಿಯ ಮೇಲಿನ ಮಮತೆಯಿಂದ ಮತ್ತೆ ಮೈದಾಳಿದಂತಿರುವ ರಾಜಕುಮಾರಿ ಚಂದ್ರಲೆ, ಪತಿಯ ಬಾಳಿನ ಬೆಳೆದಿಂಗಳಾಗಿ ಬಂದರೂ, ಮಾವನವರ ಸುಖಕ್ಕಾಗಿ ತನ್ನ ಬಾಳು ಮೀಸಲು ಎಂಬಂತೆ, ಸಣ್ಣಸಣ್ಣ ವಿಷಯಗಳಲ್ಲೂ ಚಕ್ರವರ್ತಿಗಳ ಚಿತ್ತಕ್ಕೆ ಅನುಕೂಲವಾಗಿ ನಡೆಯುತ್ತಾ ಅವರ ಹೃದಯವನ್ನು ಪ್ರಸನ್ನವಾಗಿ ಮಾಡುವ ಸೊಸೆ, ಚೇದಿಯ ರಾಜಕುಮಾರಿ ಉಜ್ವಲಾ—ಇವರಿಬ್ಬರ ನಡುವೆ ಚಕ್ರವರ್ತಿಗಳ ಬಾಳು ಉಜ್ವಲವಾದ ದೀವಿಗೆಗಳ ಬೆಳಗಿನಿಂದ ಪ್ರಕಾಶವಾದ ಗೃಹದಂತಾಗಿದೆ. ಎಲ್ಲೂ ಯಾವುದರಲ್ಲೂ ಇದು ಬೇಕು ಎನಿಸುವಂತಿಲ್ಲ ಅವರ ಜೀವನದಲ್ಲಿ. ವಿಶಾಲವಾದ ನದಿಯ ವಕ್ಷದ ಮೇಲೆ ಅನುಕೂಲವಾದ ಗಾಳಿಯಲ್ಲಿ

ಶಾಂತವಾಗಿ ಸಾಗುವ ದೋಣಿಯಂತೆ ಸಾಗುತ್ತಿದೆ ಅವರ ಬಾಳು—ಜಾರುವ ಕಾಲದ ಅರಿವೂ ಇಲ್ಲದಂತೆ. ಈ ಹೊತ್ತಿನಲ್ಲೂ ಅವರಿಗೆ ಒಮ್ಮೊಮ್ಮೆ ಯಾತನೆಯಾದರೆ—ಅದು ಈ ಶಾಂತಿಯ ಸೌಭಾಗ್ಯವನ್ನು ಸವಿಯಲು ಲಕ್ಷ್ಮೀದೇವಿ ಇಲ್ಲವಲ್ಲಾ ಎಂದು ಮನಸು ಕುದಿಯುವುದರಿಂದ. ಅಂಥ ಹೊತ್ತಿನಲ್ಲಿ ನೃತ್ಯಗೀತಾಭ್ಯಾಸದಲ್ಲೋ, ವಿದ್ಯಾಭ್ಯಾಸದಲ್ಲೋ ತೊಡಗಿರುವ ಮಗಳನ್ನು ಕಂಡು ಮನಸ್ಸು ಶಾಂತವಾಗುತ್ತದೆ.

ಅದರೊಂದಿಗೆ ದಿನದಿನಕ್ಕೆ ಅವರಿಗೆ ಸಂಸಾರ ಜೀವನದಲ್ಲಿ ವಿರಕ್ತಿ ಮೂಡುತ್ತಿದೆ. ಹಗಲೆಲ್ಲಾ ಉರಿದ ಸೂರ್ಯ ಸಂಜೆ ಪಶ್ಚಿಮ ಸಮುದ್ರದ ಅಲೆತೊಟ್ಟಲಿನಲ್ಲಿ ವಿಶ್ರಮಿಸಲು ಬಯಸುವಂತೆ, ಅವರ ಬಾಳು ಸಂಸಾರದೂರವಾಗಿ ಏಕಾಂತತೆಯ ಅನಂತ ಶಾಂತಿಯಲ್ಲಿ ಲೀನವಾಗಬೇಕು ಎಂದು ಬಯಸುತ್ತಿದೆ. ಅನಂತವಾದ ಆಕಾಶದ ಅಪಾರ ನೀಲಿಮೆಯಿಂದ ಮೂಡಿಬಂದ ಕರೆಯೊಂದು 'ಬಾ' ಎಂದು ಕರೆಯುತ್ತದೆ. ಆಗಾಗ ಕಣ್ಣೆದಿರು ಬನವಾಸಿಯಲ್ಲಿ ಕಂಡ ಕಾನನದ ಪ್ರಶಾಂತ ರಮಣೀಯತೆ ಬಿಸಿಲಿನಲ್ಲಾಡುವ ಮಗುವನ್ನು ಮನೆಯೊಳಗೆ ಕರೆವ ತಾಯಿಯಂತೆ ಕೂಗುತ್ತದೆ. ಅದಕ್ಕಾಗಿಯೇ ಎಂಬಂತೆ, ದಿನದಿನಕ್ಕೆ ಸಂಸಾರದ ವ್ಯಾಮೋಹ ಬಂಧನಗಳೂ ಒಂದೊಂದಾಗಿ ಕಳಚಿಕೊಳ್ಳುತ್ತಿವೆ.

ಮೊದಲು ಕಳಚಿಕೊಂಡ ಮಮತೆಯ ಕೊಂಡಿ—ಶಂಖಾದೇವಿ. ಸ್ವರ್ಗಸ್ಥನಾದ ತನ್ನ ಪತಿ ನಂದಿವರ್ಮನ ದೇಹದೊಂದಿಗೆ ಸಹಗಮನ ಮಾಡಿ, ಶಂಖಾ, ನೆನೆವವರ ಮನದಲ್ಲಿ ಥಳಥಳಿಸುವ ಹೆಸರಾಗಿ ಉಳಿದು ತಾನೂ ಸ್ವರ್ಗವಾಸಿಯಾದಳು. ಒಂದೆರಡು ದಿನ ಈ ವಿಯೋಗದ ಯಾತನೆಯಲ್ಲಿ ಬಳಲಿದರು ಚಕ್ರವರ್ತಿಗಳು.

ಅದಾದ ಒಂದೆರಡು ವರ್ಷಕ್ಕೇ, ಇದ್ದಷ್ಟು ದಿನ ಅವರ ಬಲಗೈಯಂತಿದ್ದು, ರಾಷ್ಟ್ರಕೂಟ ರಾಜ್ಯಕ್ಕಾಗಿ ದೇಹವನ್ನು ತೆಯ್ದ ಬಂಕರಸರು, ಅವಿಶ್ರಾಂತ ಸಮರಾಯಾಸದಿಂದ ಬಳಲಿ, ಅದರಿಂದ ಬಿಡುಗಡೆ ಬಯಸಿ, ಅನಂತಶಾಂತಿಯನ್ನರಸಿ ಹೋದಂತೆ ಜಿನಪದ ಸೇರಿದರು. ಆಗ ಮತ್ತೊಮ್ಮೆ ದುಃಖ ಅವರ ಹೃದಯವನ್ನು ಹಿಂಡಿತು.

ಸಂಸಾರ ನಾಟಕದಲ್ಲಿ ಪಾತ್ರಧಾರಿಗಳಾಗಿದ್ದವರು ಒಬ್ಬೊಬ್ಬರಾಗಿ ಕಣ್ಣುಮರೆಯಾಗಿ, ಅವರ ಜೀವನ ರಂಗ ಬರಿದಾಗುತ್ತಿದೆ. ಈ ನಾಟಕ ಮುಗಿದು ಮತ್ತೊಂದು ಆರಂಭವಾಗಬೇಕು ಎನ್ನುತ್ತಿದೆ ಅವರ ಮುಪ್ಪು ಬಲಿಯುತ್ತಿರುವ ಮೈ.

ಹಾಗೆನಿಸಿದ ಹೊತ್ತಿನಲ್ಲಿ ಚಕ್ರಾಧಿಪತ್ಯದ ಭಾರವನ್ನು ಮಗನಿಗೆ ಒಪ್ಪಿಸಿ, ವಿಪಿನಾಂತರವಾಸಿಯಾಗಬೇಕು ಎನಿಸುತ್ತದೆ.

ಆದರೆ ಗಡಿಯ ಸುತ್ತ ಶತ್ರುಕೋಟಿ ಸುತ್ತಿರುವ ಚಕ್ರಾಧಿಪತ್ಯದ ಅಗ್ನಿಕುಂಡವನ್ನು ಮಗನ ತಲೆಯಮೇಲಿಡಲು ಹೆದರಿಕೆಯಾಗುತ್ತದೆ. ಉತ್ತರದಲ್ಲಿ ಒಮ್ಮೆ ಲೋಕಾದಿತ್ಯನಿಂದ ಏಟುತಿಂದು ತೆಪ್ಪಗಾದ ಮಿಹಿರ ಭೋಜ, ಇನ್ನೂ ಸೇಡಿಗಾಗಿ ಹಾತೊರೆಯುತ್ತಿದ್ದಾನೆ. ಆದರೆ ಅವನ ಭೀತಿ ಅಷ್ಟಿಲ್ಲ. ಸಿಂಧೂ ರಾಜ್ಯದಲ್ಲಿ ನೆಲೆಸಿದ ಅರಬ್ ದೊರೆಯೊಂದಿಗೆ, ಸುಲೇಮಾನರ ಪ್ರಯತ್ನದಿಂದ ಪರಸ್ಪರ ಸ್ನೇಹ-ಸಹಾಯದ ಒಪ್ಪಂದ ವಾಗಿ, ಮಿಹಿರಭೋಜ ಮತ್ತೆ ಸಮರ ಪ್ರಯತ್ನ ಮಾಡಲು ಹೆದರಿದಾನೆ. ಆದರೂ ಭೀತಿ ಇದೆ.

ದಕ್ಷಿಣದ ಗಂಗವಾಡಿಯಲ್ಲಿ ಇದ್ದಷ್ಟು ದಿನವೂ, ಸೋತರೂ ಹಗೆ ಸಾಧಿಸಿದ ನೀತಿಮಾರ್ಗ್ಗ ಮೃತನಾಗಿ, ಅವನ ಮಗ ಇಮ್ಮಡಿ ರಾಚಮಲ್ಲ ಗಂಗ ಸಿಂಹಾಸನವನ್ನೇರಿದಾನೆ. ಅವನು ಸಿಂಹಾಸನಕ್ಕೇರಿದ ಹೊಸ ತನದ ಉತ್ಸಾಹದಲ್ಲಿ, ಬಂಕರಸರ ಭೀತಿಯೂ ಇಲ್ಲವಾದುದರಿಂದ ಮತ್ತೆ ರಾಷ್ಟ್ರಕೂಟರ ವಿರುದ್ಧ ಸಮರ ಪ್ರಯತ್ನ ಮಾಡಬಹುದೆಂಬ ಭೀತಿ ಇದೆ. ಮತ್ತೆ ಸಮರವಾದರೆ ಸೋಲಾಗಬಹುದೆಂಬ ಭೀತಿ ಇಲ್ಲವಾದರೂ, ಸಮರವೇ ಚಕ್ರವರ್ತಿಗಳಿಗೆ ಹೇಸಿಗೆಯಾಗಿದೆ.

ನಿತ್ಯಯುದ್ಧ, ರಕ್ತಪಾತ, ಕೊಲೆ ಕಣ್ಣೀರುಗಳಿಂದ ಮುಕ್ತಿಯೇ ಇಲ್ಲವೇ ? ದಿನದಿನವೂ ಪ್ರಜಾಕೋಟಿಯ ಬಲಿದಾನವಾಗಿ, ಅವರ ನೆತ್ತರು ಕುಡಿದು ಬದುಕಬೇಕೇ ರಾಜ್ಯ ? ಶಾಂತಿ ಸ್ನೇಹಗಳು ನೆಲೆಸ ಬಾರದೇಕೆ ?

ಯುದ್ಧದಲ್ಲಿ ಬಳಲಿದ ಪ್ರಜೆಗಳಿಗೆ ಶಾಂತಿಯ ಒಸಗೆಯನ್ನು ನೀಡುವ ಬಯಕೆ ಪ್ರಬಲವಾಬಾಗ ಚಕ್ರವರ್ತಿಗಳಿಗೆ ಒಂದು ಆಲೋಚನೆ

ತೋರಿತು. ಗಂಗರ ಶತ್ರುತ್ವವನ್ನು ಮಿತ್ರತ್ವವಾಗಿ ಮಾಡಿಕೊಳ್ಳಲು ಯತ್ನಿಸಬಾರದೇಕೆ? ಆ ಬಯಕೆಯಿಂದ ಗಂಗರ ಸ್ನೇಹ ಸಾಧಿಸಲು ರಾಚಮಲ್ಲನ ಸೋದರ ಯುವರಾಜ ಬೂತುಗನನ್ನು ತಮ್ಮ ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂದಿರುವ ತಮ್ಮ ಅಪೇಕ್ಷೆಯನ್ನು ಸಂಧಿ—ವಿಗ್ರಹ ಸಚಿವರ ಮೂಲಕ ತಿಳಿಸಿದರು. ಚಕ್ರವರ್ತಿಗಳ ಸಲಹೆ ರಾಚಮಲ್ಲನಿಗೂ ಒಪ್ಪಿಗೆಯಾಯಿತು. ಅವರಿಂದ ಒಪ್ಪಿಗೆಯ ಪತ್ರ ಬಂದ ದಿನ ಚಕ್ರವರ್ತಿಗಳು ತಮ್ಮ ಮಗಳಿಗೆ ತಮ್ಮ ಯೋಚನೆಯನ್ನು ಹೇಳಿದರು—

'ಚಂದ್ರಾ....'

'ಏನು ಅಪ್ಪಾಜಿ?'— ತಂದೆಯ ತೋಳಪ್ಪುಗೆಯಲ್ಲಿ ಕುಳಿತ ರಾಜಕುಮಾರಿ ಕೇಳಿದಳು.

'ನಿನ್ನಿಂದ ಈ ರಾಜ್ಯಕ್ಕೆ ದೊಡ್ಡ ಉಪಕಾರವಾಗಬೇಕಾಗಿದೆ ಮಗೂ. ಈ ಚಕ್ರಾಧಿಪತ್ಯ ತನ್ನ ರಾಜಕುಮಾರಿಯಿಂದ, ತನ್ನ ಕ್ಷೇಮಕ್ಕಾಗಿ, ತ್ಯಾಗವನ್ನು ಅಪೇಕ್ಷಿಸಿದೆ. ಅದರ ಕೋರಿಕೆಯನ್ನು ನಡೆಸುತ್ತೀಯಾ ಚಂದ್ರಾ?'

ತಂದೆಯ ಮಾತನ್ನು ಕೇಳಿ ರಾಜಕುಮಾರಿ ಚಕಿತಳಾದಳು. ತಂದೆ ಏಕೋ ವಿಚಿತ್ರವಾಗಿ ಮಾತಾಡುತ್ತಿದ್ದಾರೆ ಎನಿಸಿತು.

'ಅದೇನು ಹೇಳಿ ಅಪ್ಪಾಜಿ? ನಿಮ್ಮ ಇಚ್ಛೆಗೆ ನಾನೆಂದು ಎದುರು ನಡೆದಿದ್ದೇನೆ?'

'ಎಂದೂ ನಡೆದಿಲ್ಲ. ಆದುದರಿಂದಲೇ ಕೇಳುತ್ತಿದ್ದೇನೆ ಚಂದ್ರಾ, ಅಧಿಕಾರವಿಲ್ಲದಿದ್ದರೂ, ನಿನ್ನ ತಂದೆಯಾಗಿ ಅಲ್ಲ, ಈ ರಾಜ್ಯದ ರಕ್ಷಣೆಯ ಭಾರಹೊತ್ತ ಚಕ್ರವರ್ತಿಯಾಗಿ, ರಾಜಕುಮಾರಿಯನ್ನು ಬೇಡುತ್ತಿದ್ದೇನೆ ಚಂದ್ರಾ. ಚಕ್ರವರ್ತಿಯ ಬೊಗಸೆಗೆ ಭಿಕ್ಷೆ ಹಾಕುತ್ತೀಯಾ?'

ಚಕ್ರವರ್ತಿಗಳ ಮಾತನ್ನು ಕೇಳಿ ಚಂದ್ರಲೆಯ ಕಣ್ಣಲ್ಲಿ ನೀರು ತುಂಬಿತು.

'ಹೀಗೆ ಮಾತನಾಡಿ ಮನನೋಯಿಸಬೇಕೇ ಅಪ್ಪಾಜಿ, ಹೇಳಿ, ನಾನು ನಿಮ್ಮ ಆಜ್ಞೆಯ ಆಳು.'

‘ಧನ್ಯನಾದೆ ಚಂದ್ರಾ. ನಿತ್ಯ ಸಮರದ ರಕ್ತಪಾತದ ಘೋರ ದಿಂದ ಬೇಸತ್ತು ರಾಜ್ಯ, ಶಾಂತಿ ಸಾಧಿಸಲು, ಸ್ನೇಹ ಪಡೆಯಲು ಕಾತರ ವಾಗಿದೆ. ಆ ಶಾಂತಿ ಸ್ನೇಹ ರಾಜ್ಯದ್ದಾಗಲು, ರಾಜಕುಮಾರಿಯ ಬೆಲೆ ಕೊಡಬೇಕಾಗಿದೆ. ಸಿದ್ಧಳಾಗಿದೀಯಾ ಚಂದ್ರಾ, ಅದಕ್ಕೆ?’

‘ಅಪ್ಪಾಜಿ ಇದೇನು ಮಾತು ನೀವು ಹೇಳುವುದು? ನನ್ನನ್ನು ಇಷ್ಟು ದಿನ ಪೋಷಿಸಿದ ರಾಜ್ಯಕ್ಕೆ, ಅದು ಬಯಸಿದಾಗ ಸೇವೆ ಸಲ್ಲಿಸ ದಿದ್ದರೆ, ನಾನು ಈ ರಾಜ್ಯದ ಮಗಳು ಹೇಗಾದೇನು ಅಪ್ಪಾಜಿ—ನೀವೇ ಹೇಳುತ್ತಿರಲಿಲ್ಲವೇ—‘ರಾಜಮನೆತನದ ಬಾಳು ಈ ರಾಜ್ಯದ ಹಿತಕ್ಕೆ ಮೀಸಲು’ ಎಂದು—ಹೆಣ್ಣಾಗಿ ಹುಟ್ಟಿದ ನಾನು ಏನು ಸೇವೆ ಸಲ್ಲಿಸಬಲ್ಲೆ ಎಂದು ಚಿಂತಿಸುತ್ತಿದ್ದೆ. ಈಗ ರಾಜ್ಯವೇ ಹೀಗೆ ಮಾಡು ಎಂದರೆ—ನನ್ನ ಬದುಕು ಸಾರ್ಥಕವಾಯಿತು ಎಂದು ಕಿಚ್ಚನ್ನು ಬೇಕಾದರೂ ಹಾಯುತ್ತೇನೆ. ನನ್ನಿಂದ ಏನಾಗಬೇಕು ಹೇಳಿ ಅಪ್ಪಾಜಿ?’

ಚಂದ್ರಲೆಯ ಮಾತು ಕೇಳಿ, ಚಕ್ರವರ್ತಿಗಳ ಹೃದಯ ಅಂಥ ಮಗಳ ತಂದೆಯಾದುದಕ್ಕೆ ಹೆಮ್ಮೆಪಟ್ಟಿತು. ಗಂಗ ಯುವರಾಜ ಬೂತುಗನಿಗೆ ಆಕೆಯನ್ನು ಮಡದಿಯಾಗಿ ಒಪ್ಪಿಸುವ ತಮ್ಮ ಬಯಕೆ ಯನ್ನು, ಅದಕ್ಕೆ ಕಾರಣವನ್ನು ವಿವರಿಸಿ—

‘ನಿನ್ನ ಜೀವನದ ಬಯಕೆಗಳು ಏನೋ, ನಿನ್ನ ಹೃದಯದ ಹಕ್ಕಿ ಯಾವ ಗೂಡನ್ನು ಬಯಸುವುದೋ ನಾನರಿಯೆ ಚಂದ್ರಾ. ಇಚ್ಛಿಸಿದ ವರನ್ನು ಒಲಿಯುವ ಅಧಿಕಾರ ನಿನಗಿದೆ. ಆದುದರಿಂದಲೇ ನಿನಗೆ ಅಪ್ಪಣೆ ಮಾಡದೆ ಬೇಡುತ್ತಿದ್ದೇನೆ ಚಂದ್ರಾ—ಈ ರಾಜ್ಯಕ್ಕೆ ಶಾಂತಿ ಬಿ[illegible]ಡು.’

ಚಂದ್ರಲೆ ತಂದೆಯ ಬಳಿಯಿಂದ ಸರಿದ, ಅವರ ಪಾದಗಳಿಗೆ ನಮಸ್ಕರಿಸಿ ಹೇಳಿದಳು—

‘ಅಪ್ಪಾಜಿ, ನನ್ನಿಂದ ಈ ರಾಜ್ಯ ಅಷ್ಟು ವರ್ಷ ಶಾಂತಿಯಲ್ಲಿ ನಗು ವುದಾದರೆ ನನ್ನ ಬಾಳು ಧನ್ಯವಾಯಿತು.’

ಆಕೆಯ ಮಾತನ್ನು ಕೇಳಿ, ಉಕ್ಕಿಬಂದ ಮಮತೆಯಲ್ಲಿ ಮಗಳನ್ನು ಆಲಂಗಿಸಿ, ಗದ್ಗದಿತವಾದ ಕಂಠದಲ್ಲಿ ಚಕ್ರವರ್ತಿಗಳು ನುಡಿದರು—

‘ ಇಷ್ಟು ದಿನ ಈ ರಾಜ್ಯಕ್ಕೆ ನೀನು ಮಗಳಾಗಿದ್ದೆ ಚಂದ್ರಾ, ಇಂದು ನೀನು ಇದರ ತಾಯಿಯಾದೆ.’

ಚಕ್ರವರ್ತಿಗಳ ಕಣ್ಣಲ್ಲಿ ತುಂಬಿದ ಅಶ್ರುವನ್ನು ಕಂಡು, ತಾನೂ ಬಾಷ್ಪಪೂರಿತಲೋಚನೆಯಾದರೂ, ನಗುತ್ತಾ ಹೇಳಿದಳು ಚಂದ್ರಲೆ—

‘ ಹಾಗೂ ಲಾಭ ನನ್ನದೇ ಆಯಿತು, ಅಪ್ಪಾಜಿ.’

ಈ ಮಾತನಾಡಿದ ಮಗಳು ದೊಡ್ಡವಳೋ, ಇಂಥ ಪುತ್ರಿಯನ್ನು ಪಡೆದ ರಾಜ್ಯದ ಹಿರಿಮೆ ಹೆಚ್ಚಿನದೋ ಎನಿಸಿತು ಚಕ್ರವರ್ತಿಗಳಿಗೆ.

× × × ×

ರಾಷ್ಟ್ರಕೂಟ ರಾಜ್ಯಕ್ಕೆ ಕವಿದ ಗಂಗರ ವೈರದ ಬೆಂಕಿಯನ್ನು ತನ್ನ ತ್ಯಾಗಜಲದಿಂದ, ಪ್ರೇಮದ ಅಮೃತ ವರ್ಷದಿಂದ ಶಾಂತಿ ಮಾಡಿ ರಾಜ ಕುಮಾರಿ ಚಂದ್ರಲಾ, ಮಾನ್ಯಖೇಟವನ್ನು ಬಿಟ್ಟು ತಲವನಪುರವನ್ನು ಬೆಳಗಿಸುವ ದೀಪಲಕ್ಷ್ಮಿಯಾಗಲು ತೆರಳಿದಳು. ಇನ್ನು ಈ ರಾಜ್ಯಕೆ ಸಮರಭೀತಿಯಿಲ್ಲವೆಂದು, ಸಮಾಧಾನದ ನಿಟ್ಟುಸಿರು ಬಿಟ್ಟ ಚಕ್ರವರ್ತಿ ಗಳು, ಒಂದು ದಿನ ರಾತ್ರಿ, ಚಂದ್ರಸಾಲೆಯಲ್ಲಿ ಕುಳಿತು ಇರುಳಿನ ಶಾಂತಿ ಯನ್ನು ಸವಿಯುತ್ತಿರುವಾಗ, ಉತ್ತರದಿಕ್ಕಿನಲ್ಲಿ ಮೂಡಿ, ನೋಡನೋಡು ತ್ತಿದ್ದಹಾಗೇ ಅಂಬರವನ್ನೆಲ್ಲಾ ವ್ಯಾಪಿಸಿದ ಪೊರಕೆಯಾಕಾರದ ಬೆಳಕನ್ನು ಕಂಡು ಗಾಬರಿಯಾದರು: ಮುಗಿಲೂ ಆ ಭೂತಾಕಾರಕ್ಕೆ ಬೆದರಿ ನಡುಗಿ ದಂತೆ, ನಕ್ಷತ್ರಗಳು ಧರೆಗುರುಳಿದವು. ಹೊಗೆಯಂತೆ ಕವಿದ ಆ ಭೂತಾ ಕಾರದ ಮಬ್ಬಿನಲ್ಲಿ ಬೆಳದಿಂಗಳೂ ಮಂಕಾಗಿಹೋಯಿತು. ಇದೇನು ಶಕುನ, ಇದಾವ ಉತ್ಪಾತ ಸೂಚನೆ? ರಾಜ್ಯಕ್ಕೆ ಮತ್ತಾವ ಭೀತಿಯೂ ಇಲ್ಲವೆಂದುಕೊಂಡ ಹೊತ್ತಿನಲ್ಲಿ, ಕಾಳಿಯ ಕೇಶರಾಶಿಯಂತೆ ಮುಗಿ ಲನ್ನು ಹಬ್ಬಿದ ಈ ಬಾಂದಳದ ಭೂತ ಯಾವ ಘೋರದ ಹರಿಕಾರ? ಇದಕ್ಕೇನು ಪರಿಹಾರ?

ಮರುದಿನ ಹಗಲು ಹರಿಯುತ್ತಿದ್ದಂತೆಯೇ ಚಕ್ರವರ್ತಿಗಳು ರಾಜ ಜ್ಯೋತಿಷಿ ಗೋಲಯಭಟ್ಟರನ್ನು ಕರೆಸಿ ಕೇಳಿದರು—

‘ ಇರುಳು ಕಂಡ ಆ ಘೋರದ ಅರ್ಥವೇನು ಆರ್ಯ?’

‘ ನಾನೂ ಅದನ್ನು ನೋಡಿದೆ ಪ್ರಭೂ. ಈ ರಾಜ್ಯಕ್ಕೆ ವಿಪತ್ತು

ಬರಲಿದೆಯೆಂದು ಸ್ವರ್ಗ ಸೂಚಿಸುತ್ತಿದೆ—ಈ ಕುರುಹು ಕಳುಹಿ.'

'ಯಾವ ಬಗೆಯ ವಿಪತ್ತು ಬಂದೊದಗಬಹುದು ಆರ್ಯ?'

'ಇಂಥ ಗ್ರಹಕೇತು ಕಂಡಾಗ ಹನ್ನೆರಡು ವರ್ಷದ ಕ್ಷಾಮ ಬಂದು, ಕ್ಷಾಮಮಾರಿಯ ಮಕ್ಕಳಾದ ರೋಗ, ರುಜಿನಗಳ ಬಾಧೆಯಲ್ಲಿ ಲಕ್ಷಾಂತರ ಪ್ರಜಾಕೋಟಿ ನಷ್ಟವಾಗುವುದೆಂದು ಹಿರಿಯರು ಹೇಳಿದಾರೆ. ಹೀಗಾಗುವುದು ಮೊದಲೇ ತಿಳಿದಿರಲೆಂದು, ದೇವತೆಗಳು ಸೂಚನೆ ಕೊಡುತ್ತಾರೆ.'

ಗೋಲಭುಭಟ್ಟರು ಹೇಳಿದುದನ್ನು ಕೇಳಿ ಚಕ್ರವರ್ತಿಗಳು ಗದಗದ ನಡುಗಿದರು. ಹನ್ನೆರಡು ವರ್ಷದ ಬರ, ರೋಗ, ರುಜಿನ, ಅನಂತ ಪ್ರಜಾಹಾನಿ....ಅದರ ಊಹಾಚಿತ್ರವನ್ನು ಕಂಡೇ ಚಕ್ರವರ್ತಿಗಳು ಕಂಗಾಲಾಗಿ ಹೋದರು.

'ಈ ವಿಪತ್ತಿಗಾವ ಪರಿಹಾರವೂ ಇಲ್ಲವೇ ಆರ್ಯ?'

'ಪರಿಹಾರವಿಲ್ಲದ ವಿಪತ್ತು ಯಾವುದೂ ಇಲ್ಲ ಪ್ರಭು.'

ಆ ಮಾತು ಕೇಳಿ, ಕವಿದು ಬಂದ ಕತ್ತಲಲ್ಲಿ ಆಶೆಯ ಬೆಳಕು ಕಂಡಂತಾಯಿತು ಚಕ್ರವರ್ತಿಗಳಿಗೆ. ಅವರ ಮಾತಿಗೇ ಜೋತುಬಿದ್ದವರಂತೆ ಕೇಳಿದರು—

'ಏನು ಪರಿಹಾರ? ಯಾವ ಗ್ರಹಶಾಂತಿಯಿಂದ ಈ ವಿಪತ್ತು ಪರಿಹಾರವಾಗುತ್ತದೆ ಹೇಳಿ ಆರ್ಯ?'

'ಪ್ರಭು, ಪ್ರಕೃತಿ ಮಾತೃದೇವತೆಯಂತೆ ಸ್ನೇಹಮಯಿ, ಆನಂದದಾತೆ. ಅಂಥವಳು ಮುನಿಯಬೇಕಾದರೆ ಪ್ರಬಲವಾದ ಕಾರಣಬೇಕು.'

'ಏನು ಕಾರಣ?'

'ಪ್ರಕೃತಿಯ ಸಂತಾನವಾದ ಜನ, ಆಕೆಯ ನಿಯಮಕ್ಕೆ ವಿರುದ್ಧವಾಗಿ ನಡೆದಾಗ, ನಿಮ್ಮ ಮಗ ವಿದ್ರೋಹಿಯಾದಾಗ ನೀವೂ ಆತನಿಗೆ ಮರಣದಂಡನೆ ವಿಧಿಸಿದಂತೆ, ಪ್ರಕೃತಿಯೂ ಮರಣದಂಡನೆ ವಿಧಿಸುತ್ತದೆ. ಆ ಶಿಕ್ಷೆ, ಕ್ಷಾಮವಾಗಿ, ರೋಗರುಜಿನಗಳಾಗಿ ಕಾರ್ಯಗತವಾಗುತ್ತದೆ.'

'ಪ್ರಕೃತಿ ನಿಯಮಕ್ಕೆ ವಿರುದ್ಧವಾಗಿ ಯಾರು ನಡೆದಿದಾರೆ ಆರ್ಯ? ಎಲ್ಲಿ, ಹೇಗೆ ಅಪಚಾರವಾಗಿದೆ?'

'ಜಗತ್ತಿನಲ್ಲಿ ಜನಿಸಿದ ಜನ ಸ್ನೇಹ, ಶಾಂತಿಗಳಿಂದ ಹೂ, ಬಳ್ಳಿಗಳಂತೆ ನಗುತ್ತಾ ಬದುಕಬೇಕೆಂಬುದು ಪ್ರಕೃತಿಯ ಬಯಕೆ. ಅದಕ್ಕೆ ವಿರುದ್ಧವಾಗಿ, ಮಾನವನೇ ಮಾನವನ ವೈರಿಯಾಗಿ ರಕ್ತಪಾತಕ್ಕೆಳೆಸಿದಾಗ, ಸ್ವಾರ್ಥಕ್ಕಾಗಿ ಕೊಲೆ, ಯುದ್ಧಕ್ಕೆ ಸಿದ್ಧನಾದಾಗ, ಅದರಿಂದಾಗಿ ವೃಷ್ಟಿತೃಪ್ತಳಾಗಬೇಕಾದ ಭೂದೇವಿಗೆ ರಕ್ತಸ್ನಾನದ ಕಲಂಕವಾದಾಗ, ಲಲಿತೆಯಾದ ಪ್ರಕೃತಿ ದುರ್ಗೆಯಾಗುತ್ತಾಳೆ.'

'ಅಂದರೆ, ನಮ್ಮಿಂದ ಅಂಥ ಅಪರಾಧ ಘಟಿಸಿದೆಯೇ ಆರ್ಯ?'

'ಅಹುದು ಪ್ರಭು.'

'ಹೇಗೆ ?'

'ಪ್ರಭುಗಳು ತಮ್ಮ ಕಾಲದಲ್ಲೇ ಎಷ್ಟು ಯುದ್ಧಗಳಾಯಿತೆಂದು ಯೋಚಿಸಬೇಕು.'

'ಅಂದರೆ—ನಾವೆಂದೂ ಯುದ್ಧಾಕಾಂಕ್ಷಿಗಳಾಗಿಲ್ಲ ಆರ್ಯ. ಶಾಂತಿಯೇ ನಮ್ಮ ಬಯಕೆಯೂ ಆಗಿದೆ. ಅದಕ್ಕಾಗಿಯೇ ಅಲ್ಲವೇ ಗಂಗರೊಂದಿಗೆ ನೆಂಟು ಬೆಳೆಸಿದುದು.'

'ನಾನದನ್ನು ಬಲ್ಲೆ ಪ್ರಭು. ನೀವು ಶಾಂತಿಪ್ರಿಯರೆಂಬುದು ಲೋಕವಿದಿತವಾದ ವಿಷಯ. ಆದರೂ ಯುದ್ಧ ಮಾಡಿಲ್ಲವೇ?'

'ಮಾಡಿದ್ದರೆ ಅದು ಆತ್ಮ ರಕ್ಷಣೆಗಾಗಿ, ರಾಜ್ಯರಕ್ಷಣೆಗಾಗಿ. ಅಂಥ ಯುದ್ಧ ಧರ್ಮವಿರುದ್ಧವಾದುದಲ್ಲವೆಂದು ಶಾಸ್ತ್ರ ವಚನ. ಅಲ್ಲವೇ ಆರ್ಯ?'

'ನಿಜ.'

'ಹಾಗಾದರೆ ನಮ್ಮಿಂದ ಹೇಗೆ ಅಪಚಾರ ನಡೆಯಿತು? ಅಧರ್ಮ ಎಲ್ಲಿ ಆಚರಿತವಾಯಿತು?'

'ತನ್ನ ಹೊಲವನ್ನು ವನಪಶು ಬಾಧೆಯಿಂದ, ಚೋರ ಬಾಧೆಯಿಂದ ರಕ್ಷಿಸಿಕೊಳ್ಳಲು ಮುಳ್ಳುಬೇಲಿ ಹಾಕಿದವನಂತೆ ನೀವು. ಆದರೆ ಆ ಬೇಲಿ ಹಾಕಿದವನೇ ಆ ಬೇಲಿಯ ಮುಳ್ಳು ತುಳಿದು ಬಾಧೆ ಪಡಬೇಕಾಗುವ ಸಂಭವವೂ ಇದೆ—ಎಷ್ಟು ಎಚ್ಚರವಾಗಿದ್ದರೂ. ಪಾಮರ ದೃಷ್ಟಿಯಲ್ಲಿ—ಅದು ಮುಳ್ಳು ಬೇಲಿ ಹಾಕಿದುದಕ್ಕೆ ಕೊಡಬೇಕಾದ ಬೆಲೆ;

ಪ್ರಕೃತಿಯ ದೃಷ್ಟಿಯಲ್ಲಿ – ಅದು ಮುಳ್ಳುಬೇಲಿ ಬೆಳೆದ ಪಾಪಕ್ಕೆ ಪ್ರಾಯಶ್ಚಿತ್ತ.'

'ಅದು ಪಾಪ ಹೇಗಾಗುವುದು ಆಚಾರ್ಯ?'

'ಚೋರ ಭೀತಿಯಿಂದ ಹಾಕಿದ ಮುಳ್ಳುಬೇಲಿಯಿಂದ, ಚೋರರಿಗೆ ಮಾತ್ರವೇ ಕಷ್ಟವೇ? ದುರ್ಭಾವನೆಯಿಲ್ಲದೆ ಹತ್ತಿರ ಬಂದವರೂ ಕಂಟಕ ಭೀತಿಯಿಂದ ಬಳಲುವಂತೆ, ಬೆದರುವಂತೆ, ಎಷ್ಟೋ ಬಾರಿ ನೊಂದು ನರಳುವಂತೆ, ನಿಮ್ಮ 'ಆತ್ಮ ಸಂರಕ್ಷಣಾಯ' ಎಂದು ಮಾಡಿದ ಯುದ್ಧದಲ್ಲಿ ಅಪರಾಧಿಗಳು ಮಾತ್ರವೇ ಸಾಯದೆ ನಿರಪರಾಧಿಗಳೂ ಸಾಯುತ್ತಾರೆ. ಸೈನಿಕರು ತಮ್ಮ ಧರ್ಮ ಎಂದು ಸಮರಾಂಗಣದಲ್ಲಿ ಸತ್ತರೂ, ಅವರ ಸಂಸಾರಕ್ಕೆ ಶೋಕದ ಕಾಳ್ಗಿಚ್ಚು ಹಬ್ಬುತ್ತದೆ. ಅನ್ನವೂ ಅನ್ನಾದನೂ ತಾನೇ ಆಗಿರುವ ವಿಶ್ವಾತ್ಮದಂತೆ, ಒಂದು ಕೊನೆಯಲ್ಲಿ ಧರ್ಮವಾಗಿ ಕಂಡುದು ಇನ್ನೊಂದು ಕೊನೆಯಲ್ಲಿ ಅಧರ್ಮವಾಗಿ ಕುಡಿಯೊಡೆಯುತ್ತದೆ. ಧರ್ಮಾಚರಣೆಯಿಂದ ಶ್ರೇಯಸ್ಸಾದಂತೆ, ಅಪ್ರಯತ್ನವಾಗಿಯೂ ಘಟಿಸಿದ ಅಧರ್ಮದಿಂದ ಹಾನಿಯಾಗಲೇಬೇಕು. ಅದು ಋತ ನಿಯಮ. ಹೀಗೆ ನಿರಪರಾಧಿಗಳ ರಕ್ತ, ಕಣ್ಣೀರನ್ನು ಕಂಡ ಪ್ರಕೃತಿ ಪ್ರಕ್ಷುಬ್ಧಳಾಗುತ್ತಾಳೆ.'

'ಅದಕ್ಕೇನು ಪರಿಹಾರ ಆರ್ಯ?'

'ದೇಶಕ್ಕಾಗಿ ನಡೆದ ಎಲ್ಲ ಕೆಲಸಕ್ಕೂ ದೊರೆಯೇ ಉತ್ಸವ ಮೂರ್ತಿ. ಆತನ ಹೆಸರಿನಲ್ಲಿ, ಆತನ ನಾಯಕತ್ವದಲ್ಲಿ ಶುಭಾಶುಭ ಕಾರ್ಯಗಳೆಲ್ಲವೂ ನಡೆಯುತ್ತವೆ. ಅಲ್ಲವೇ ಪ್ರಭು?'

'ನಿಜ ಆರ್ಯ.'

'ಹಾಗೆಯೇ. ಇಂಥ ಉತ್ಪಾತ ಮೊದಲು ರಾಜಪುರುಷನನ್ನು ಬಲಿತೆಗೆದುಕೊಳ್ಳುತ್ತದೆ—ಪ್ರಕೃತಿಯ ಕ್ರೋಧಕ್ಕೆ ಕುರುಹಾಗಿ. ಅದರಿಂದ ಎಚ್ಚೆತ್ತ ಜನದಿಂದ ಕ್ರೋಧ ತೃಪ್ತ್ಯರ್ಥವಾದ ಶಾಂತಿಯಜ್ಞ, ನಡೆಯದಿದ್ದರೆ, ಆಗ ಅದೇ ಕ್ರೋಧ ಪ್ರಜೆಗಳಿಗೂ ಹರಡುತ್ತದೆ. ಆದುದರಿಂದ ಇಂಥ ಉತ್ಪಾತ ಸೂಚನೆ ಕಂಡುಬಂದಾಗ, ಮೂಲ ವಿಗ್ರಹಕ್ಕೆ ಕೇಡಾಗದಿರಲೆಂದು, ಉತ್ಸವ ಮೂರ್ತಿಯೇ, ದೊರೆಯೇ ಶಾಂತಿಯಜ್ಞ

ನಡೆಸಬೇಕು. ಅದರಿಂದ ಉತ್ಪಾತ ಪರಿಹಾರವಾಗುತ್ತದೆ.'

'ಆ ಶಾಂತಿ ಯಜ್ಞದ ವಿಧಾನವೇನು ಆರ್ಯ?'

'ರಾಜಪುರುಷನ ಹೆಸರಿನಲ್ಲಿ ನಡೆದ ನಿರಪರಾಧಿಗಳ ರಕ್ತಪಾತದಿಂದ ಉದ್ಭವಿಸಿದ ಈ ಕ್ರೋಧಜ್ವಾಲೆಯನ್ನು ತಣಿಸಲು ನಡೆವ ಶಾಂತಿ ಯಜ್ಞಕ್ಕೆ ರಾಜಪುರುಷನೇ ಪಶುವಾಗಲು ಮುಂದೆ ಬರಬೇಕು. ತನ್ನ ಬಲಿದಾನದಿಂದ ಅದನ್ನು ತೃಪ್ತಪಡಿಸಿ, ಪ್ರಜೆಗಳನ್ನು ಕಾಪಾಡಬೇಕು.'

ಗೋಲಯಭಟ್ಟರಾಡಿದ ಮಾತು ಕೇಳಿ ಚಕ್ರವರ್ತಿಗಳಿಗೆ ಹಿಂದೆ ಒಂದು ದಿನ ಅವರೇ—'ಬತ್ತಿ, ತಾನು ಉರಿದು ಲೋಕಕ್ಕೆ ಬೆಳಕಾಗುವಂತೆ, ದೊರೆಯ ಬಾಳೂ ಹಾಗಾಗಬೇಕು' ಎಂದುದು ತಟಕ್ಕನೆ ನೆನಪಾಯಿತು. ಆ ದಿನವಿಂದು ಬಂದಿದೆ ಎನಿಸಿತು. ಒಂದುಗಳಿಗೆ ಹಲ ಭಾವನೆಗಳ ಆಘಾತದಿಂದ ಚಂಚಲವಾದ ಅವರ ಚಿತ್ತ ಮತ್ತೆ ಸ್ಥಿರವಾಯಿತು. ಹೇಳಿದರು—

'ಸರಿ. ಹಾಗಾದರೆ ಆ ಶಾಂತಿಯಜ್ಞ ನಡೆಯಲಿ, ಆರ್ಯ, ನಾವದಕ್ಕೆ ಸಿದ್ಧವಾಗಿದೇವೆ.'

ಚಕ್ರವರ್ತಿಗಳು ಆಡಿದ ಮಾತನ್ನು ಕೇಳಿದ ಗೋಲಯಭಟ್ಟರು ಮೆಚ್ಚಿಕೊಂಡರು. 'ಇಂಥ ದೊರೆ ಇರಬೇಕು' ಎನಿಸಿತು. ಆ ಮೆಚ್ಚುಗೆಯಲ್ಲೇ ನಸುನಗುತ್ತಾ ಹೇಳಿದರು—

'ಧನ್ಯ, ಧನ್ಯ. ಚಕ್ರವರ್ತಿಗಳು ಧನ್ಯರು. ಈ ತ್ಯಾಗಕ್ಕೆ ತಾವು ಸಿದ್ಧರಾಗಿದೀರೋ ಇಲ್ಲವೋ ಎಂದು ಒಂದುಗಳಿಗೆ ಚಿಂತೆಯಾಗಿತ್ತು.'

'ಪ್ರಜೆಗಳ ಕ್ಷೇಮದ ಇದಿರು ನಮ್ಮ ಜೀವಕ್ಕೇನು ಬೆಲೆ ಆರ್ಯ? ಅಶಾಶ್ವತವಾದ ಈ ದೇಹದಿಂದ ಲೋಕಕಲ್ಯಾಣವಾಗುವುದಾದರೆ, ಬದುಕಿಗೆ ಅದಕ್ಕಿಂತ ಸಾರ್ಥಕತೆ ಬೇಕೇ? ಈ ಶಾಂತಿಯಜ್ಞ ಎಲ್ಲಿ, ಹೇಗೆ ನಡೆಯಬೇಕು ಹೇಳಿ.'

'ಯಜ್ಞ, ಹೋಮ, ಹವನ, ಎಲ್ಲವೂ ಸಾಂಕೇತಿಕ. ಜೀವಬಲಿ ಕೊಡಬೇಕೆಂದರೆ ಜೀವವನ್ನೇ ಬಲಿಕೊಡಬೇಕಾಗಿಲ್ಲ. ಪಿಷ್ಟಪಿಂಡದಲ್ಲಿ ಪ್ರಾಣವನ್ನು ಆವಾಹನೆಮಾಡಿ, ಅಗ್ನಿಗರ್ಪಿಸುವುದೇ ಸಾಕು. ಅಂತೆಯೇ ತಾವೂ ತಮ್ಮ ಜೀವದ ಬಲಿದಾನದ ಸಂಕೇತವಾಗಿ, ವೈಯ ಯಾವು

ದಾದರೂ ಅಂಗವನ್ನು ನೀಡಿದರೂ ಸಾಕು. ಪ್ರಕೃತಿಯ ಸಾಕಾರ ಮೂರ್ತಿ ಯಂತಿರುವ, ಕರವೀರಪುರದ ಮಹಾಲಕ್ಷ್ಮಿಗೆ ತಮ್ಮ ಎಡಗೈಯ ಬೆರಳನ್ನು ದಾನಮಾಡಿ ಬನ್ನಿ ಪ್ರಭು–ದೇವತಾ ಕ್ರೋಧ ಶಾಂತಿಯಾಗುತ್ತದೆ.'

'ಅಷ್ಟೇ ಸಾಕೆ?'-ಆಶ್ಚರ್ಯದಿಂದ ಕೇಳಿದರು ಚಕ್ರವರ್ತಿಗಳು.

'ಸಿಟ್ಟಾದ ತಾಯಿ ಮತ್ತೆ ನಗಲು ಮಗುವಿನ ಒಂದೇ ಒಂದು ಮುದ್ದು ಮಾತೇ ಸಾಲದೇ?'

'ನಿಜ'—ಎಂದು ತಲೆಹಾಕಿದರು ಚಕ್ರವರ್ತಿಗಳು, ಕರವೀರ ಪುರದ ಮಹಾಲಕ್ಷ್ಮಿಗೆ ಅಂಗುಲಿದಾನಮಾಡುವ ನಿಶ್ಚಯಮಾಡಿ.

ಆದರೆ ತಮ್ಮ ನಿಶ್ಚಯವನ್ನು ಅವರು ಯಾರಿಗೂ ಹೇಳಲಿಲ್ಲ—ಸುಮ್ಮನೆ ಕಳವಳ, ಭೀತಿಗೆ ಕಾರಣವಾಗುವುದೆಂದು. ಗೋಲಯಭಟ್ಟ ರಿಗೂ ಯಾರಿಗೂ ತಿಳಿಸಬಾರದೆಂದು ಹೇಳಿ, ದ್ವಿಜಪರಿವಾರದೊಂದಿಗೆ ಕರ ವೀರಪುರಕ್ಕೆ ಪಯಣ ಮಾಡಿದರು.

ಪ್ರಕೃತಿಯ ಆಗ್ರಹ, ಅನುಗ್ರಹಗಳ ಸಂಕೇತದಂತೆ, ಪಾಶಾಂಕುಶ ಅಭಯ ಮುದ್ರಾಧಾರಿಣಿಯಾಗಿ ನಿಂತ ಮಹಾಲಕ್ಷ್ಮಿಗೆ, ಸಾಂಗವಾಗಿ, ವೇದೋಕ್ತವಾಗಿ ನಡೆಯಬೇಕಾದ ಪೂಜೆ, ಹೋಮ ಹವನಗಳನ್ನು ನಡೆ ಸಿದ ಬಳಿಕ ಚಕ್ರವರ್ತಿಗಳು, ತಾವೇ ಸ್ವಹಸ್ತದಿಂದ ವಾಮ ಹಸ್ತಾಂಗುಲಿ ಯನ್ನು ಕತ್ತರಿಸಿ, ದೇವಿಯ ಪಾದಕ್ಕೆ ಒಪ್ಪಿಸಿ, ಉಕ್ಕಿಬಂದ ಭಕ್ತಿಭರದಲ್ಲಿ ದೇವಿಯ ಇದಿರು ಮೈಮರೆದು ನಿಂತರು. ಪ್ರಜೆಗಳಿಗಾಗಿ ಸ್ವಹಸ್ತಾಂಗುಲಿ ದಾನಮಾಡಿ, ನಿಂದ ಚಕ್ರವರ್ತಿಗಳನ್ನು ಕಂಡು ಗೋಲಯಭಟ್ಟರು ಅಭಿ ಮಾನದಲ್ಲಿ ತೂಗಿ ತೊನೆಯುತ್ತಾ ಹೇಳಿದರು—

'ಲೋಕದಲ್ಲಿ ಶಿಬಿ, ದಧೀಚಿಗಳೇ ಮಹಾತ್ಯಾಗಿಗಳೆನ್ನುತ್ತಾರೆ ಪ್ರಭು. ತಮ್ಮ ತ್ಯಾಗ ಅವರಿಗಿಂತಲೂ ದೊಡ್ಡದು. ದಧೀಚಿ ತ್ಯಾಗ ಮಾಡಿದುದು ಒಬ್ಬ ಇಂದ್ರನಿಗಾಗಿ; ಶಿಬಿ ತ್ಯಾಗಮಾಡಿದುದು ಒಂದು ಪಾರಿವಾಳಕ್ಕಾಗಿ; ಜೀಮೂತವಾಹನ ಆತ್ಮಾರ್ಪಣೆ ಮಾಡಿದುದು ನಾಗ ಕುಲ ಬದುಕಲೆಂದು ಮಾತ್ರ. ಆದರೆ ಸಮಸ್ತ ಲೋಕ ಹಿತಾಕಾಂಕ್ಷೆ ಯಿಂದ ಮಾಡಿದ ತಮ್ಮ ತ್ಯಾಗ ಅವರೆಲ್ಲದಕ್ಕಿಂತಲೂ ಹಿರಿದು. ಚಕ್ರ ವರ್ತಿಗಳೆಂಬ ತಮ್ಮ ಹೆಸರು ಸಾರ್ಥಕವಾಯಿತು.'

ಗೋಲಯಭಟ್ಟರ ಮಾತನ್ನು ಒಪ್ಪಿದಂತೆ ಮೊಳಗಿತು ದೇವಾಲಯದ ಘಂಟಾಧ್ವನಿ.

'ಇನ್ನು ರಾಜ್ಯಕ್ಕಾವ ಚಿಂತೆಯೂ ಇಲ್ಲತಾನೆ ಆರ್ಯ?'–ಚಕ್ರವರ್ತಿಗಳು ಕೇಳಿದರು.

'ದೇವಿ ತೃಪ್ತಳಾದಳು. ಇನ್ನಾವ ಭೀತಿಯೂ ಇಲ್ಲ.'

'ಹಾಗಾದರಿನ್ನು ನಾವು ರಾಜ್ಯ ಚಿಂತೆಯನ್ನು ಮರೆತು, ಇಂದು ಒಲಿದ ದೇವತಾ ಚಿಂತೆಗೆ ಬಾಳು ಮೀಸಲುಮಾಡಬಹುದೇ ಆರ್ಯ? ಇಂದು ದೇವತಾಸಾನ್ನಿಧ್ಯದಲ್ಲಿ ದೊರೆತ ಆನಂದವನ್ನೇ ಸದಾ ಅನುಭವಿಸಬೇಕೆಂದು ಮನಸ್ಸಾಗುತ್ತಿದೆ.'

'ವಸಂತಕಾಲ ಪ್ರಾಪ್ತವಾದಾಗ ಕೋಗಿಲೆಯ ಕುಹೂರವ ಕೇಳಿಬರುವುದು ಸಹಜ ಪ್ರಭು'–ಎಂದರು ಗೋಲಯಭಟ್ಟರು.

ಅವರ ಮಾತು ಕೇಳಿ, ಚಕ್ರವರ್ತಿಗಳು—

'ತಾಯಿ, ನೀನು ಕೊಟ್ಟ ರಾಜ್ಯವನ್ನು ಇದುವರೆಗೆ ಆಳಿ ಸೇವೆ ಸಲ್ಲಿಸಿದೆ. ಇನ್ನದರ ಚಿಂತೆಯನ್ನು ನೀನೇ ವಹಿಸಿ, ನಿನ್ನ ಸೇವೆಯ ಅನುಗ್ರಹ ದಯಪಾಲಿಸು. ನಿನ್ನ ಅಡಿಯಲ್ಲಿ ನಮಗೆ ಎಡೆಕೊಡು ಕೃಪಾಮಯಿ.'

–ಎಂದು ಮಹಾಲಕ್ಷ್ಮಿಯ ಅಡಿಗಳಿಗೆ ಎರಗಿದರು

ಅವರ ಮಾತು ಕೇಳಿ ತೃಪ್ತಳಾಗಿ ದೇವಿ ನಕ್ಕಂತೆ, ದೇವಾಲಯದ ತುಂಬಾ ಬೆಳಕು ತುಂಬಿತು.

## ೨೨

ಚಕ್ರವರ್ತಿಗಳು ಸನ್ಯಾಸ ಸ್ವೀಕಾರಮಾಡಿ, ರಾಜ್ಯತ್ಯಾಗ ಮಾಡುವರೆಂಬುದನ್ನು ಕೇಳಿ, ಅವರ ಬಲಿದಾನದ ವಿಷಯವನ್ನರಿತು ಆನಂದಿಸಿದ ಜನ, ತಾಯನ್ನಗಲುವ ಮಗುವಿನಂತೆ ವಿಹ್ವಲರಾದರು. ಎಲ್ಲರ ಮೊಗವೂ ದುಃಖಾಕ್ರಾಂತವಾಯಿತು.

ಎಲ್ಲರಿಗಿಂತಲೂ ದುಃಖಪಟ್ಟು ಹಲುಬಿದವನು ಯುವರಾಜ ಕೃಷ್ಣ.

'ಇದೇನು ಘೋರ ಸಂಕಲ್ಪ ಅಪ್ಪಾಜಿ. ನನ್ನಮೇಲೇಕೆ ಇಷ್ಟು ನಿರ್ದಯ?' ಎಂದು ಕಂಬನಿಗರೆದ.

'ಇದು ನೀನು ಈ ರಾಜ್ಯಭಾರದ ಹೊಣೆ ಹೊತ್ತುಕೊಳ್ಳಲು ಸರಿ

ಯಾದ ಕಾಲ ಕೃಷ್ಣ. ಮಕ್ಕಳು ವಯೋಪ್ರಾಪ್ತರಾಗಿ, ರಾಜ್ಯ ರಕ್ಷಣಾ ಸಮರ್ಥರಾದಾಗ, ಅವರ ಯೌವ್ವನ, ಶಕ್ತಿ, ಉತ್ಸಾಹ ಸಂಪನ್ನವಾದ ಹೆಗಲುಗಳಮೇಲೆ ರಾಜ್ಯವನ್ನಿಟ್ಟು ಹೊರಡಬೇಕು ಹಣ್ಣೆಲೆಗಳೇ ಚಿರ ವಾಗಿರಬೇಕೆಂದರೆ, ಚಿಗುರುಗಳಿಗೆಲ್ಲಿ ಅವಕಾಶ? ಹೊಣೆಗಾರಿಕೆ ಅಯಾಚಿತ ವಾಗಿ ಬಳಿಬಂದಾಗ, ಅದನ್ನು ಹೊರಲು ಹೆದರುವುದು ಪುರುಷ ಧರ್ಮ ವಲ್ಲ. ಹಿಂದೆ ನೀನು ಇದು ಬೇಕು ಎಂದು ಬಯಸಿದೆ. ಅದೇ ಬಂದಾಗ ಬೇಡವೆನ್ನಬಾರದು.'

'ಈ ಭಾರವನ್ನು ನಾನು ಹೊರಬಲ್ಲೆನೇ ಅಪ್ಪಾಜಿ?'

'ಸ್ವಸಾಮರ್ಥ್ಯವನ್ನು ಶಂಕಿಸುವುದು ವೀರೋಚಿತವಲ್ಲ ಕೃಷ್ಣ. ಈ ರಾಜ್ಯದ ಭಾರವನ್ನು ಹೊರುವುದು ಕಷ್ಟ, ನಾನುಬಲ್ಲೆ. ಆದರೆ ಈ ರಾಜ್ಯ ಭಾರವನ್ನು ಹೊರಲು ನನಗೆ ಶಕ್ತಿ ನೀಡಿದ ಭಗವಜ್ಜಿನಸೇನಾಚಾರ್ಯರ ಉಪದೇಶ ವಾಕ್ಯಗಳನ್ನೇ ನಿನಗೂ ಹೇಳುತ್ತೇನೆ. ಕೇಳು—

'ರಾಜರ ಕರ್ತವ್ಯಗಳು ಎರಡು—ಆತ್ಮ ಪರಿಪಾಲನೆ, ಪ್ರಜಾ ಪರಿ ಪಾಲನೆ. ಇವೆರಡರಲ್ಲಿ ಪ್ರಜಾಪರಿಪಾಲನೆಗೆ ಅಗ್ರಸ್ಥಾನ. ಪ್ರಜಾಪಾಲ ನೆಗೆ ನ್ಯಾಯವೇ ಅಸ್ತಿಭಾರ. ನ್ಯಾಯದಿಂದ ಪರಿಪಾಲಿತರಾದ ಪ್ರಜೆ ಗಳು ಇಷ್ಟಾರ್ಥವನ್ನು ಕೊಡುವ ಕಾಮಧೇನುಗಳು. ಪ್ರಜಾಪಾಲನೆಗಾಗಿ ಅರಸು ತನ್ನ ಆತ್ಮಪಾಲನೆ ಮಾಡಿಕೊಳ್ಳಬೇಕು; ಪ್ರಜೆಗಳ ರಕ್ಷಣೆಗಾಗಿ ತನ್ನ ಬುದ್ಧಿಯನ್ನು ಕಾಪಾಡಿಕೊಳ್ಳಬೇಕು. ಜ್ಞಾನವೃದ್ಧರ ಸಂಸರ್ಗ ದಿಂದ ಇಂದ್ರಿಯ ನಿಗ್ರಹಮಾಡಿ, ಧರ್ಮ, ಅರ್ಥ, ನೀತಿಶಾಸ್ತ್ರಗಳ ಜ್ಞಾನ ದಿಂದ ಬುದ್ಧಿ ಸಂಸ್ಕಾರ ಪಡೆಯಬೇಕು. ಇಲ್ಲವಾದಲ್ಲಿ ಆತ 'ಪರವಶ ಚಿತ್ತ' ನಾಗುವನು. ನಿಗ್ರಹಯೋಗ್ಯನಾದ ಶತ್ರುವನ್ನೂ, ದುಷ್ಟನಾದ ಪುತ್ರನನ್ನೂ ಸಮಾನ ಭಾವನೆಯಿಂದ ನಿಗ್ರಹಿಸಿ ಪ್ರಜಾಪಾಲನೆ ಮಾಡು ವುದೇ ಸಮಂಜಸತ್ವ. ಸಮಂಜಸತ್ವ, ಸಮದರ್ಶಿತ್ವಗಳೊಡನೆ, ಅರಸು ಕುಲಪಾಲನ, ಮತಿಪಾಲನ, ಆತ್ಮ ಪಾಲನ, ಪ್ರಜಾ ಪಾಲನಗಳನ್ನು ಮಾಡಿ, ಇಹದಲ್ಲಿ ಯಶಸ್ಸು, ವಿಜಯ, ಪರದಲ್ಲಿ ಮುಕ್ತಿಯನ್ನು ಗಳಿಸ ಬೇಕು.

'ಆಚಾರ್ಯರ ಈ ಉಪದೇಶಜ್ಯೋತಿ ನಿನ್ನ ಬಾಳಬಟ್ಟೆಗೆ ಮಾರ್ಗ

ದರ್ಶಿಯಾಗಲಿ. ಲೋಕಕ್ಕೆ ಹೆಸರಾಗಿ ಬಾಳು ಕೃಷ್ಣಾ. ಕೋಟ್ಯಾಂತರ ಚಕ್ರವರ್ತಿಗಳು ಹುಟ್ಟಿ ಸಾಯುವ ಈ ಜಗತ್ತಿನಲ್ಲಿ ಉಳಿಯುವುದು ಅವರಾರ ಹೆಸರೂ ಅಲ್ಲ, ಉದಾತ್ತ ಜೀವನ ನಡೆಸಿದ ಧನ್ಯರ ಹೆಸರೊಂದೇ ಉಳಿಯುವುದು. ನೀನು ಹಾಗಾಗಲೆಂದೇ ನಮ್ಮ ಹರಕೆ. ಇಷ್ಟು ದಿನ ಈ ರಾಜ್ಯಚಿಂತೆಯಲ್ಲಿ ಬಳಲಿದ ನಮಗೆ, ಪರದ ಚಿಂತೆ ಮಾಡಲು ಅವಕಾಶ ಕಲ್ಪಿಸಿ, ನಿನ್ನನ್ನು ನಾವು ಬಯಸಿ ಪಡೆದ ನಮ್ಮ ಬಯಕೆಯನ್ನು ಸಫಲಗೊಳಿಸು' ಎಂದರು.

ಅವರ ಮಾತು ಕೇಳಿದ ಕೃಷ್ಣ—

'ಅಪ್ಪಾಜಿ ನಿಮಗೆ ತಕ್ಕ ಮಗನಾಗಿ ಬಾಳುವಂತೆ ಆಶೀರ್ವದಿಸಿ' ಎಂದ, ತಂದೆಯ ನಿರ್ಧಾರವನ್ನು ಕದಲಿಸಲಾಗುವುದಿಲ್ಲವೆಂಬುದು ಅರಿವಾಗಿ.

ಮಗನಿಗೆ ರಾಜ್ಯಾಭಿಷೇಕ ಮಾಡಿ, ಇಷ್ಟು ದಿನ ತಾವು ಧರಿಸಿದ ರಾಜಲಾಂಛನಗಳನ್ನೆಲ್ಲಾ ಆತನಿಗೆ ತಾವೇ ತೊಡಿಸಿ, ಆತನ ನೆತ್ತಿಯ ಮೇಲೆ ಕಿರೀಟವಿಟ್ಟು, ತಾವು ಕಾಷಾಯವಸ್ತ್ರಧಾರಿಗಳಾಗಿ ಆಶ್ರಮ ಪ್ರಯಾಣಕ್ಕೆ ಸಿದ್ಧರಾದರು.

ಅರಮನೆಯ ಇದಿರು ರಾಜ್ಯತ್ಯಾಗ ಮಾಡುವ ತಮ್ಮ ನೆಚ್ಚಿನ ದೊರೆಯನ್ನು ನೋಡಲೆಂದು ಬಂದು, ಕಂಬನಿಗರೆವ ಜನಕ್ಕೆ ಅಭಯ ವಚನಗಳನ್ನು ನುಡಿದು, ಮಿತಪರಿವಾರದೊಡನೆ ಚಕ್ರವರ್ತಿಗಳು ಅರಮನೆಯಿಂದ ಹೊರಟರು.

ರಾಜ್ಯತ್ಯಾಗ ಮಾಡಿ, ಬರಿಗಾಲಿನಿಂದ ಪ್ರಯಾಣ ಮಾಡುವ ದೊರೆಯ ಕಾಲಿಗೆ ನೋವಾಗದಿರಲೆಂದು ಜನ, ರಾಜಧಾನಿಯ ರಸ್ತೆಯನ್ನು ಹೂವಿನ ಹಾಸಿಗೆಯಾಗಿ ಮಾಡಿದ್ದರು. ಮನೆಮನೆಯೂ ತಳಿರು ತೋರಣಗಳಿಂದ, ಚಕ್ರವರ್ತಿಯನ್ನು ಬೀಳ್ಕೊಡಲು ಅಲಂಕೃತವಾಗಿತ್ತು. ಮನೆಮನೆಯ ಬಾಗಿಲಿನಲ್ಲೂ ಸುಮಂಗಲಿಯರು ರಾಜ್ಯತ್ಯಾಗ ಮಾಡುವ ಚಕ್ರವರ್ತಿಗೆ ಆರತಿ ಎತ್ತಿದರು. ತಾಯಂದಿರು ಮಕ್ಕಳನ್ನು ತಂದು ಚಕ್ರವರ್ತಿಯ ಪಾದದಮೇಲೆ ಮಲಗಿಸಿ, ಆಶೀರ್ವಾದ ಪಡೆದರು. ಮನೆಯ ಮಾಳಿಗೆಗಳಿಂದ ಪುಷ್ಪವೃಷ್ಟಿ ಕರೆದರು. ಅರಮನೆಯಿಂದ,

ನಗರದ ಮಹಾದ್ವಾರದವರೆಗೂ ಇಬ್ಬದಿಯಲ್ಲೂ ನಿಂತ ಸೇನೆ ಚಕ್ರವರ್ತಿಗೆ ಮಣಿದು ಗೌರವ ಸೂಚಿಸಿತು. ಇಹರಾಜ್ಯ ತ್ಯಾಗ ಮಾಡಿ, ಮುಕ್ತಿ ಚಕ್ರಾಧಿಪತ್ಯವನ್ನು ಗೆಲ್ಲಹೊರಟ ಮಹಾ ಚಕ್ರವರ್ತಿಯನ್ನು ನೋಡಿ ಸಂತಸಪಡಲು ಲಕ್ಷಲಕ್ಷ ನಕ್ಷತ್ರ ಪರಿವಾರದೊಡನೆ ಮುಗಿಲೇ ಧರೆಗಿಳಿದು ಬಂದಿತೋ ಎಂಬಂತೆ, ಮನೆಮನೆಯ ಬಾಗಿಲಿನಲ್ಲೂ ಇಟ್ಟ ಧೂಪದ ಕೊಡಗಳಿಂದ ಹೊರಟ ಧೂಮ ಮಾಲೆಯಲ್ಲಿ, ಬೀದಿಯ ಇಬ್ಬದಿಗಳಲ್ಲೂ ಹೊತ್ತಿಸಿದ ದೀಪಮಾಲೆ ಶೋಭಿಸಿತು. ಚಕ್ರವರ್ತಿಯ ಪಾದಸ್ಪರ್ಶದಿಂದ, ಬೀದಿಯಲ್ಲೂ ಹೂವುಗಳು ಅರಳಿದಂತೆ, ಬಣ್ಣಬಣ್ಣದ ರಂಗವಲ್ಲಿಯ ಚಿತ್ರಗಳು ರಂಜಿಸಿದವು. ಘಂಟೆ, ಶಂಖ, ಭೇರಿ, ಆನಕ, ಪಟಹ, ಝಲ್ಲರೀ ವಾದ್ಯಗಳು ಮೊಳಗಿ, ಜಗತ್ತಿಗೇ ಚಕ್ರವರ್ತಿಗಳ ರಾಜ್ಯ ತ್ಯಾಗ ವಾರ್ತೆಯನ್ನು ಅರುಹಿದವು. ರಾಜ್ಯತ್ಯಾಗ ಮಾಡುವ ಚಕ್ರವರ್ತಿಯನ್ನು ನೋಡಲು, ದೇಶಕ್ಕೆ ದೇಶವೇ ರಾಜಧಾನಿಯಲ್ಲಿ ಮೊಗಚಿದ್ದಿತು. ಎಲ್ಲರ ಕಣ್ಣುಗಳೂ ಕಣ್ಣೀರಿನ ಕಾಸಾರ, ಎಲ್ಲರ ಮೊಗವೂ ಯಾತನೆಯ ಮಂದಿರ. ಆನೆಕುದುರೆಗಳೂ ಚಕ್ರವರ್ತಿಗಳನ್ನು ಅಗಲಲಾರದೆ ಕಂಬನಿಗರೆದವು.

ಅಕ್ಕಪಕ್ಕ, ಹಿಂದೆ ನೋಡದೆ ಧೀರಚಿತ್ತದಿಂದ ನಡೆದು, ರಾಜಧಾನಿಯ ಮಹದ್ವಾರವನ್ನು ದಾಟಿ, ಚಕ್ರವರ್ತಿಗಳು ಹಿಂದಕ್ಕೆ ತಿರುಗಿ ನಿಂತು ನೋಡಿದರು. ರಾಜಧಾನಿಯೇ ಅವರ ಹಿಂದೆ ನೆರೆದಿತ್ತು— ಕಂಬನಿಗರೆಯುತ್ತಾ.

'ನಾವು ರಾಜ್ಯ ಬಿಡಬೇಕೆಂದರೆ, ರಾಜ್ಯವೇ ನಮ್ಮ ಹಿಂದೆ ಬಂದರೆ ಹೇಗೆ? ಎಲ್ಲರೂ ಅವರವರ ಗೃಹಗಳಿಗೆ, ಕಾರ್ಯಗಳಿಗೆ ಹಿಂದಿರುಗಬೇಕು. ನಮಗಿನ್ನು ಅಪ್ಪಣೆ ಕೊಡಿ.'

—ಎಂದು ನೆರೆದ ಪ್ರಜಾಕೋಟಿಗೆ ಕೈಮುಗಿದು ಬೇಡಿದರು ಚಕ್ರವರ್ತಿಗಳು.

ಜನ ಸಮುದ್ರ 'ಉಘೇ! ಉಘೇ! ಅಮೋಘವರ್ಷ ಚಕ್ರವರ್ತಿ ಉಘೇ! ನೃಪತುಂಗ ಚಕ್ರವರ್ತಿ ಉಘೇ!' ಎಂದು ಘೋಷಿಸಿತು. ಮುಗಿಲು ಮಾರ್ದನಿಸಿತು ಆ ಜಯಧ್ವನಿಯನ್ನು.

ಅವರ ಅಭಿಮಾನವನ್ನು ಕಂಡು ವಿರಾಗಿಗಳಾದ ಚಕ್ರವರ್ತಿಗಳ ಕಣ್ಣಲ್ಲೂ ಕಂಬನಿ ತುಂಬಿತು. ನಮ್ರರಾಗಿ ತಲೆಬಾಗಿ–

'ರಾಷ್ಟ್ರಕೂಟ ಸಿಂಹಾಸನಕ್ಕೆ ನಿಮ್ಮ ಈ ಅಭಿಮಾನದ ಆಶೀರ್ವಾದದ ರಕ್ಷೆ ಶಾಶ್ವತವಾಗಿರಲಿ'

—ಎಂದು ಬೇಡಿ, ರಾಜಧಾನಿಯತ್ತ ಬೆನ್ನು ತಿರುಗಿಸಿ ತಪೋವನಾಭಿಮುಖರಾಗಿ ನಡೆದರು.

ಮತ್ತೆ ಹಿಂದಿರುಗಿ ನೋಡಲಿಲ್ಲ.

ಜನತೆಯು ಜಯಘೋಷಧ್ವನಿ, ಅವರ ಬೆಂಗಾವಲ ಪಡೆಯಂತೆ, ಗಾಳಿಯಲ್ಲಿ ನುಗ್ಗಿ ಅವರ ಹಿಂದೆ ನಡೆಯಿತು.

---

Printed at SREE SITARAGHAVA PRESS, MYSORE.

## ನಮ್ಮ ಪ್ರಕಟನೆಗಳು

---

**A New Manual of Arithmetic.**

—by B. Subbannachar, B.Sc., B.T.

**ಹೈಸ್ಕೂಲ್ ಅಂಕಗಣಿತ**

—ಶ್ರೀ. ಬಿ. ಸುಬ್ಬಣ್ಣಾಚಾರ್, B.Sc.,BT.

**We and the State**

—by G. S. Halappa. M.A.

**ನಾವು ಮತ್ತು ರಾಜ್ಯಾಡಳಿತ**

—ಶ್ರೀ ಗ. ಸ. ಹಾಲಪ್ಪ, M.A.

**ಗಿರಿಜಾ ಕಲ್ಯಾಣ ಸಂಗ್ರಹ.**

—ಶ್ರೀ ಹೆಚ್. ದೇವೀರಪ್ಪ, M.A., ಮತ್ತು ಡಿ. ಜವರೇಗೌಡ, M.A.

**ಭಾರತದ ನಿರ್ಮಾಪಕರು.**

—ಶ್ರೀ ರೇ. ಸಿದ್ದಪ್ಪ.

**ತೊರವೆ ರಾಮಾಯಣ (ಸಂಗ್ರಹ).**

—ಶ್ರೀ ಎನ್. ಬಸವಾರಾಧ್ಯ, M.A. ಮತ್ತು ಎಲ್. ಬಸವರಾಜು, M.A.

**ತಾಳಿದ ಬಾಳು.**

—ಶ್ರೀ ಹಿರಿಯೂರು ಕೃಷ್ಣಮೂರ್ತಿ

**ಶ್ರೀ ಗೌರೀಶಂಕರ ಬುಕ್ ಡಿಪೋ,**

ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು,

ದೇವರಾಜ ಮಾರ್ಕೆಟ್, ಮೈಸೂರು.